# ಪ್ರಾಣಾಹುತಿ




ವಿಕ್ಟರ್ ಹ್ಯೂಗೊ ಬರೆದ ಫ್ರಾನ್ಸಿನ ರಾಜ್ಯಕ್ರಾಂತಿ ಕುರಿತ
ಸುಪ್ರಸಿದ್ಧ ರೋಮಾಂಚಕ ಕಾದಂಬರಿ

ಪ್ರಕಾಶಕರು :
ಕಥಾಕುಂಜ ಗ್ರಂಥ ಭಾಂಡಾರ
ಬೆಳಗಾಂವಿ

*

ಅನುವಾದಕರು :
ಚುಳ್ಕಿ ಗೋವಿಂದರಾಯರು

*

ಪ್ರಥಮ ಮುದ್ರಣ
ಬೆಲೆ: ರೂ. ೫.೦೦

*

ಮುಖ್ಯ ಮಾರಾಟಗಾರರು :
ಸಮಾಜ ಪುಸ್ತಕಾಲಯ, ಧಾರವಾಡ

*

ಮುದ್ರಕರು :
ಮಹಾವೀರ ಮುದ್ರಣಾಲಯ,
ಬೆಳಗಾಂವಿ

# ಪ್ರಕಾಶಕರ ಅರಿಕೆ



ಈ ' ಪ್ರಾಣಾಹುತಿ ' ಯು ನಮ್ಮ ವಿಜಯಗ್ರಂಥಮಾಲೆಯ ೨ನೆಯ ವರುಷದ ೩ ಮತ್ತು ೪ನೆಯ ಪುಸ್ತಕವು-ಕೊನೆಪುಷ್ಪ ! ಅಂದರೆ ೨ನೆಯ ವರುಷಕ್ಕೆ ಸಲ್ಲಿಸಬೇಕಾದ ಪುಸ್ತಕಗಳನ್ನು ( ೬೦೦ ಕ್ಕೂ ಮಿಕ್ಕಿ ಪುಟಗಳನ್ನು) ನಮ್ಮ ಚಂದಾದಾರರಿಗೆ ಸಲ್ಲಿಸಿದಂತಾಯಿತು. ಇನ್ನು ನಮ್ಮ ಗ್ರಂಥಮಾಲೆಯು ೩ನೇ ವರುಷದಲ್ಲಿ ಕಾಲಿಕ್ಕುವದೆಂದು ಹೇಳಲು ಆನಂದವೆನಿಸುತ್ತದೆ " ಮೂರು ವರುಷ ಬಾಳಿದ್ದು ನೂರು ವರ್ಷ ಕಂಡೀತು " ಎಂಬ ನಾಣ್ಣುಡಿಯ ಬೆಂಬಲದಿಂದ ನಾವು ನಮ್ಮ ಈ ವಿಜಯಗ್ರಂಥಮಾಲೆಯನ್ನು ನಡೆಯಿಸುವದೆಂದು ನಿರ್ಧರಿಸಿದ್ದೇವೆ.

ರಭಸದಿಂದ ಪ್ರಕಾಶನ ಕಾರ್ಯವು ನಡೆಯದಿದ್ದರೂ ದೃಢಸಂಕಲ್ಪದಿಂದ ನಾವು ಹೆಣಗುತ್ತಿದ್ದುದರಿಂದ ನಮ್ಮಿಂದ ಸಾಧ್ಯವಾದ ಸಾಹಿತ್ಯ ಸೇವೆಯನ್ನು ಕನ್ನಡ ಕುಲಕ್ಕೆ ಸಲ್ಲಿಸುತ್ತಿದ್ದೇವೆ. ಆದರೂ ಕನ್ನಡ ಕುಲದ ಸಾಹಿತ್ಯಾಭಿರುಚಿಯುಳ್ಳವರಿಂದ ನಮಗೆ ಎಷ್ಟು ಪ್ರೋತ್ಸಾಹನವು ದೊರೆಬೇಕಾಗಿತ್ತೋ ಆ ಪರಿಯಿಂದ ದೊರೆಯುತ್ತಿಲ್ಲೆಂಬದನ್ನು ವಿಧಿಯಿಲ್ಲದೆ ವ್ಯಥೆಯಿಂದ ಹೇಳಬೇಕಾಗಿದೆ.

ಗಣರಾಜ್ಯವು ಸ್ಥಾಪಿತವಾಗಿದೆ. ಪ್ರಾದೇಶಿಕ ಭಾಷೆಗಳಿಗೆ ಮಹತ್ವದ ಸ್ಥಾನವು ಶಿಕ್ಷಣರಂಗದಲ್ಲಿ ದೊರೆತೇ ತೀರಬೇಕೆಂಬ ಸಮಸ್ಯೆಯ ಚರ್ಚೆ ನಡೆದಿದೆ. ಜನ ಜಾಗ್ರತವಾಗಿದೆ. ಅಕ್ಷರಜ್ಞಾನಪ್ರಸಾರವೂ, ಸಮಾಜಶಿಕ್ಷಣವೂ ಭರದಿಂದ ಸಾಗಿವೆ. ತನ್ಮೂಲಕ ವಾಚನಾಭಿರುಚಿಯು ಬೆಳೆಯುತ್ತಿದೆ. ವಾಚನಾಲಯಗಳು ತಲೆಯೆತ್ತುತ್ತಲಿವೆ. ನಾನಾಬಗೆಯಿಂದ ದೇಶದ ಏಳ್ಗೆಯ ಲಕ್ಷಣಗಳು ಕಾಣಹತ್ತಿವೆ. ಇಂಥದರಲ್ಲಿ ಕನ್ನಡ ಸ್ವಾರಸ್ವತ ಸಂಪತ್ತು ಸಮೃದ್ಧವಾಗಿ ಬೆಳೆದು ಹಾಯಾಗಿ ಮೆರೆದಾಡುವಂತಾಗಲೆಂದು ನಾವು ಹಾರೈಸುತ್ತೇವೆ.

ಸಾಹಿತ್ಯವು ಜನಜೀವನದ ಪಡಿನೆಳಲು ಎಂದು ಬಲ್ಲವರು ಆಡುವ ಮಾತು. ಸಾಹಿತ್ಯದಿಂದಲೇ ಜನಜೀವನದ ಮಟ್ಟು ಏರಬೇಕು ಆ ಏರಿದ ಮಟ್ಟಕ್ಕನುಸರಿಯೇ ಸಾಹಿತ್ಯದ ಮಟ್ಟೂ ಏರುವದು. ಅಂದರೆ ಒಂದಕ್ಕೊಂದು ಪರಿಪೋಷಕವಾಗಿ ಬೆಳೆಯುತ್ತ ಹೋದರೆ ಸಾಹಿತ್ಯದ ಸುಗ್ಗಿಯು ಹುಲಸಾಗುವದು. ಅದರಿಂದ ಗ್ರಂಥಕರ್ತರು, ಪ್ರಕಾಶಕರು, ಮಾರಾಟಗಾರರು ಬದುಕುವಂತಾಗಿ ಸಾಹಿತ್ಯವು ಎಲ್ಲರಿಗೂ ಬೇಕು ಎಂಬ ಸ್ಥಿತಿಗೆ ಮುಟ್ಟಿದಂತಾಗುವದು. ಆ ದಿನ ಬೇಗನೆ ಬರಲಿ ಎಂದು ದಾರೀ ಕಾಯುತ್ತಿದ್ದೇವೆ.

ನಮ್ಮ ಮಾಲೆಯ ೩ನೆಯ ವರ್ಷದ ಮೊದಲನೆಯ ಪುಸ್ತಕವು '**ಲಾಲಚೀನ**' ಎಂಬ ಐತಿಹಾಸಿಕ ಕಾದಂಬರಿ. ಅದನ್ನು ಬೇಗನೆ ಪ್ರಕಾಶನಗೊಳಿಸುತ್ತೇವೆ. ಹೊಸ ವರ್ಷದ ಮೊದಲನೆಯ ಪುಸ್ತಕವಾದ್ದರಿಂದ ಚಂದಾದಾರರಿಗೆ ವಿ. ಪಿ. ಯಿಂದ ಕಳಿಸಲಾಗುವದು. ವ್ಹಿ. ಪಿ. ಯು ಬಂದಾಗ ನಮ್ಮನ್ನು ಪೋಷಿಸುವ ಚಂದಾದಾರರು ಸ್ವೀಕರಿಸಿ ನೆರವಾಗುವರೆಂದು ಆಶಿಸಿದ್ದೇವೆ.

ಬೆಳಗಾವಿ<br>ವಿಜಯಗ್ರಂಥಮಾಲೆ } **ಪ್ರಕಾಶಕರು.**

# ಅರಿಕೆ



ಈ ಕಾದಂಬರಿಯು ಕಥೆಯು ಫ್ರಾನ್ಸದ ರಾಜ್ಯಕ್ರಾಂತಿಯಕಾಲದ್ದು. ಈ ಕಾದಂಬರಿ ಬರೆದವನು ವ್ಹಿಕ್ಟರ್‌ಹ್ಯೂಗೋ. ಇವನು ಫ್ರೆಂಚ್ ಸಾಹಿತ್ಯಕರಲ್ಲಿ ಒಳ್ಳೇ ಹೆಸರು ಪಡೆದವನು. ಅವನ ಈ ಕಾದಂಬರಿಯು-೧೭೯೩. ಬಹುತೇಕವಾಗಿ ಜಗತ್ತಿನ ಎಲ್ಲ ಭಾಷೆಗಳಲ್ಲೂ ಪರಿವರ್ತಿತವಾಗಿದೆ. ಇದೀಗ ಈ 'ಪ್ರಾಣಾಹುತಿ'ಯು ಅದರ ಕನ್ನಡಾವತಾರವು ಇದು ಫ್ರಾನ್ಸದ ಇತಿಹಾಸದಲ್ಲಿ '**ವೆಂಡಿಯ ಬಂಡಾಯ**'ವೆಂದು ಪ್ರಸಿದ್ಧವಿರುವ ಐತಿಹಾಸಿಕ ಘಟನೆಯ ಕುರಿತು ಬರೆದ ಚಿತ್ತಾಕರ್ಷಕ ಕಾದಂಬರಿಯು.

ಫ್ರೆಂಚ್ ವಾಙ್ಮಯಭಕ್ತರು ವ್ಹಿಕ್ಟರ್‌ಹ್ಯೂಗೋನನ್ನು ಬಹಳೇ ಪ್ರೇಮಾದರಗಳಿಂದ ಹೊಗಳುತ್ತಾರೆ. ವ್ಹಿಕ್ಟರ್‌ಹ್ಯೂಗೋನ ಕಾದಂಬರಿಗಳು ವರ್ಣನೆ, ಕಥಾನಕ ದೃಷ್ಟಿಗಳಿಂದ ಬಹು ಆಕರ್ಷಣೀಯವಾಗಿವೆ ಇವನು ತನ್ನ ಕಾದಂಬರಿಗಳಲ್ಲಿ ತಾತ್ವಿಕ ವಿವೇಚನೆಯನ್ನು ಮಾಡದೆ ಇರಲಾರ. ಇವನ ಕಾದಂಬರಿಗಳು ಧ್ಯೇಯಶೂನ್ಯವಾದವುಗಳಲ್ಲ. ಅದೇ ಉದ್ದೇಶದಿಂದಲೆ ಈ ಕಾದಂಬರಿ ಬರೆದುದಾಗಿದೆ ಎಂದು ಹೇಳಬಹುದು.

ಈ ಪ್ರಾಣಾಹುತಿಯಲ್ಲಿ '**ನ್ಯಾಯವು ಶ್ರೇಷ್ಠವೋ**' ಅಥವಾ '**ದಯೆಯು ಶ್ರೇಷ್ಠವೋ**' ಎಂಬುದರ ಸುಂದರವಾದ ವಿವೇಚನೆಯು ನಿರೂಪಿಸಲ್ಪಟ್ಟಿದೆ. ನ್ಯಾಯದ ಪುರಸ್ಕಾರವನ್ನು ಮಾಡುವಂಥ ಸಿಮೋರೆಡಿನ್‌ನು ಮಗನೆಂದೇ ಭಾವಿಸಿದ ದಯೆಯನ್ನು ತೋರಿಸುವಂಥ ಗಾವೆನ್‌ನಿಗೆ ಮರಣ ಶಿಕ್ಷೆಯನ್ನು ವಿಧಿಸುತ್ತಾನೆ. ಆದರೆ ಕೊನೆಗೆ ತನ್ನ ಜೀವವೂ ಬೇಡೆಂದೆನಿಸಿ ತಾನೂ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ ಎಂಬದನ್ನು ಇಲ್ಲಿ ನೋಡಬಹುದು.

ಇದಲ್ಲದೆ ಫ್ರಾನ್ಸದ ರಾಜ್ಯಕ್ರಾಂತಿಯ ಕಾಲದ ವರ್ಣನೆಗಳ ಮಾರ್ಮಿಕವಾದ ಚಿತ್ರವೂ ಹೇಗೆ ಹೃದಯಸ್ಪರ್ಶಿಯಾಗಿದೆ ಎಂಬುದನ್ನೂ ಇಲ್ಲಿ ಅವಲೋಕಿಸಬಹುದು.

ಇದು ವ್ಹಿಕ್ಟರ್ ಹ್ಯೂಗೋನ ಕನ್ನಡ ಕೃತಿ. ಇದರ ಮೂಲವನ್ನು ಓದಿದವರೂ, ಓದದೆ ಇದ್ದವರೂ ಈ ಅನುವಾದವನ್ನು ಮೆಚ್ಚಿದರೆ ನನ್ನ ಶ್ರಮವು ಸಾರ್ಥಕವೆಂದು ಬಗೆದಿದ್ದೇನೆ. ಇಲ್ಲಿ ದೋಷ ಕಂಡುಬಂದರೆ ನಾನು ಆ ದೋಷಕ್ಕೆ ಪಾತ್ರನು. ವ್ಹಿಕ್ಟರ್‌ಹ್ಯೂಗೋ ಅಲ್ಲವೆಂದು ತಿಳಿದರೆ ನಾಕು.

ಈ ಪ್ರಾಣಾಹುತಿಯ ಪ್ರಕಾಶನಕ್ಕೆ ಆಹುತಿಯಾಗಿ ಸ್ನೇಹಿತರಾದ **ಶ್ರೀ. ಪ್ಯಾಟಿ ಶ್ಯಾಮರಾಯರು** ದೊರಕಿದ್ದಾರೆ. ಆಹುತಿಯ ಫಲವು ಲಾಭದಾಯಕವಾಗುವಂತೆ ಕನ್ನಡ ಓದುಗರು ಕೈಹಿಡಿದರೆ ನಾವಿಬ್ಬರೂ ಉದ್ಧಾರವಾದಂತೆಯೇ. ಯಾಕೆಂದರೆ ಕನ್ನಡ ಪುಸ್ತಕ ಪ್ರಕಾಶನವು ನಿರಾಶಾಜನಕವಾಗಿದೆ ಎಂಬವನ್ನು ಸಂಪಾದಕ, ಪ್ರಕಾಶಕ, ಮಾರಾಟಗಾರನ ಅನುಭವದಿಂದ ಹೇಳಬಲ್ಲೆನಾದ್ದರಿಂದ ಈ ಮಾತನ್ನು ಇಲ್ಲಿ ಹೇಳದೆ ಇರಲಾರೆ. ಆದ್ದರಿಂದ ಪ್ರಕಟನೆಯ ಹೊರೆ ಹೊತ್ತ ಶ್ರೀ. ಪ್ಯಾಟಿ ಶಾಮರಾಯರಿಗೆ ನಾನು ಕೃತಜ್ಞನಾಗಿದ್ದೇನೆ. ಅವರ ಹೊರೆಯನ್ನು ಇಳಿಸುವ ಶಕ್ತಿಯು ಕನ್ನಡ ವಾಚಕರಲ್ಲಿ, ಪುಸ್ತಕ ಕೊಂಡುಕೊಳ್ಳುವವರಲ್ಲಿ ಸದಾ ಜಾಗ್ರತವಿರಲೆಂದು ಹಾರೈಸಿದ್ದೇನೆ.

ತಮ್ಮ **ವಿಜಯ ಗ್ರಂಥಮಾಲೆಯಲ್ಲಿ** ನನ್ನ ಈ ಅನುವಾದಿತ ಕೃತಿಗೆ ಅನುವು ಮಾಡಿಕೊಟ್ಟಂಥ ಈ ಸಂಪಾದಕರಿಗೆ ನಾನು ಆಭಾರಿಯಾಗಿದ್ದೇನೆ.

**ಗಣೇಶಚತುರ್ಥಿ**
೧೫-೯-೧೯೫೦
**ಧಾರವಾಡ.**

**ಗೋವಿಂದ ವೆಂಕಟೇಶ ಚುಳಕಿ.**

---

# ಕಥಾಸಂದರ್ಭ



ಈ ಕಾದಂಬರಿಯು ಕಥಾಸಂದರ್ಭವು ಲಕ್ಷ್ಯದಲ್ಲಿ ಬರಲು ಆ ಕಾಲದ ಫ್ರಾನ್ಸದ ಪರಿಸ್ಥಿತಿಯ ಅವಲೋಕನವು ಅವಶ್ಯಕವೆಂದು ಸಂಕ್ಷೇಪವಾಗಿ ಕೆಲವು ಸಂಗತಿಗಳನ್ನು ಇಲ್ಲಿ ಕೊಡಲಾಗಿದೆ. ಫ್ರಾನ್ಸದೇಶದಲ್ಲಿ ೧೮ನೆಯ ಶತಮಾನವೆಂದರೆ ಗೊಂದಲದ ಕಾಲ. ಪ್ರಜೆರ ಹಿತದ ಬಗ್ಗೆ ರಾಜನಿಗೆ ಅತೀವ ಧಿಕ್ಕಾರ. ಪ್ರಜೆರಿಗೆ ಭಾವನೆಗಳಿವೆ, ಸುಖದುಃಖಗಳ ಪರಿವೆಯಿದೆ, ಪ್ರಜೆರು ಪಶುಗಳಲ್ಲದೆ ತಮ್ಮಂತೆ ಮಾನವ ಪ್ರಾಣಿಗಳೆಂಬ ಅರಿವು ರಾಜರಿಗೆ ತಿಲಮಾತ್ರವಿರಲಿಲ್ಲ. ತನ್ನ ಸುಖಕ್ಕಾಗಿ, ಐಷಾರಾಮಕ್ಕಾಗಿ ಪ್ರಜೆರ ರಕ್ತಶೋಷಣವನ್ನು ಮಾಡುವದು ರಾಜನ ಜನ್ಮಸಿದ್ಧ ಹಕ್ಕು; ಈ ಸತ್ಕೃತ್ಯವನ್ನು ! ಮಾಡುತ್ತಿರುವಾಗ ಪ್ರಜೆರು ಮೂಕ ಕುರಿಯಂತಿರಬೇಕೆಂದು ರಾಜನ ಅಭಿಪ್ರಾಯವಾಗಿತ್ತು.

ಪ್ರಜೆರ ಅಸಂತೋಷವು ಒಂದು ಶತಮಾನದಿಂದ ಒಳಗಿಂದೊಳಗೇ ಹೆಚ್ಚುತ್ತಲಿತ್ತು. ಕರಗಳ ಹೊರಲಾರದ ಹೊರೆಯಿಂದ ಪ್ರಜೆರು ನಿರ್ಜೀವಿಗಳಾಗಿದ್ದರು. ಕೊನೆಗೆ ಸಹನಶಕ್ತಿಯು ಪರಮಾವಧಿಯನ್ನು ಮುಟ್ಟಿ, ಹೊತ್ತುತ್ತಿದ್ದ ಬೆಂಕಿಯು ಉರಿಯ-ತೊಡಗಿತು. ಅದರಿಂದ ಜಗತ್ತಿನಲ್ಲಿಯ ಪ್ರಮುಖ ರಾಷ್ಟ್ರಗಳಿಗೂ ಈ ಬೆಂಕಿಯು ತಗುಲದೆ ಬಿಡಲಿಲ್ಲ. ಈ ಬೆಂಕಿಯು ೧೪ನೆ ಲುಯಿಯ ಕಾಲಕ್ಕೆ ಫ್ರಾನ್ಸದಲ್ಲಿ ಮೊದಲು ಕಾಲು ಮಾಡಿತು. ಲುಯಿಯು ಪರಾಕ್ರಮಿಶಾಲಿಯಾದ ರಾಜನಾಗಿದ್ದನು. ಅವನ ವಿಜಯ ದುಂದುಭಿಯು ದಶದಿಕ್ಕುಗಳನ್ನೂ ವ್ಯಾಪಿಸಿತ್ತು. ಆದರೂ ಪ್ರಜೆಗಳ ಪೀಡನೆ ಮಿತಿಮೀರಿತ್ತು. ಪರಪ್ರಾಂತವನ್ನಾಕ್ರಮಿಸುವ ರಾಜನು ತನ್ನ ಜನರಿಗೆ ಸುಖ ಕೊಡುತ್ತಾನೆಂಬ ಮಾತು ನೆಚ್ಚಿಕೆಯದಲ್ಲ. ೧೪ನೆ ಲುಯಿಯ ರಾಜ್ಯಕಾರಭಾರವು ಪ್ರಜೆರ ಪ್ರಾಣವನ್ನೇ ಹೀರಿತ್ತು. ಪ್ರಜೆರು ಕರಗಳ ಭಾರದಿಂದ ಅಷ್ಟದರಿದ್ರರಾಗಿದ್ದರು. ಅದರಲ್ಲಿ ಬರಗಾಲವೊಂದು ಬಿದ್ದಿತು ರಾಜನ ಸುಖಲೋಲುಪತೆಗೆ ಸೀಮೆಯಿಲ್ಲದಾಯಿತು. ಪ್ರಜೆ

ರಿಂದ ಬರತಕ್ಕ ಕರವು ಭಾಂಡಾಗಾರಕ್ಕೆ ಜಮೆಯಾಗುತ್ತಿದ್ದರೂ ರಾಜನ
ವೆಚ್ಚಕ್ಕೇ ಸಾಲದಾಯಿತು. ರಾಜನೊಡನೆ ಸರದಾರರೂ ಸೇರುತ್ತಿದ್ದುದ
ರಿಂದ ಹಣವು ನೀರಿನಂತೆ ವೆಚ್ಚವಾಗತೊಡಗಿತು. ಪ್ರಜೆರ ಗೋಳಿನ
ಬಾಳನ್ನು ಕೇಳುವವರಿಲ್ಲದಾಗಿದ್ದರು. ಇಂಥ ಪರಿಸ್ಥಿತಿಯು ೧೫ನೆ ಲುಯಿಯ
ಕಾಲದಲ್ಲುಂಟಾಗಿತ್ತು.

ಇವನ ತರುವಾಯ ೧೬ನೇ ಲುಯಿಯು ಗಾದಿಗೆ ಬಂದನು. ಆಗ
ಅವನು ಐದು ವರುಷದವನು. ಇವನ ಕಾಲವಾದರೂ ಸುಖಪ್ರದವಾದೀ
ತೆಂದು ಜನರು ಆಶಾತುರರಾಗಿದ್ದರು. ಅವನು ದೊಡ್ಡವನಾದಂತೆ ಅವನ
ಗುಣಗಳು ಒಂದೊಂದಾಗಿ ಪ್ರಕಟವಾಗತೊಡಗಿದವು. ಇವನ ಐಷಾ
ರಾಮಿಯೂ ಮಿತಿಮೀರಿತು. ಪ್ರಜೆರ ಸಂಪತ್ತಿಯ ವಿಶ್ವಾಸನಿಧಿ ತಾನೆಂಬ
ದನ್ನು ಮರೆತು—ಮನಬಂದಂತೆ ವೆಚ್ಚಮಾಡಬಾರದೆಂಬ ಸದ್ಬುದ್ಧಿಯು ಇವ
ನಿಗೂ ಬರಲಿಲ್ಲ. ಹೆಸರಿಗೆ ರಾಜನು; ರಾಜನ ಹೆಸರಿನಿಂದ ರಾಜ್ಯಶಕಟ
ಸಾಗಿತ್ತು. ರಾಜ್ಯಸೂತ್ರಗಳೆಲ್ಲವೂ ಅವನ ಮನೋಹಾರಿಣಿಯೊಬ್ಬಳ
ಕೈಯಲ್ಲಿದ್ದವು. ಆಕೆಯ ಕಾರಭಾರದಲ್ಲಿ ಅಂದಾಧುಂದಿಯಾಗಿ ಸರಕಾರದ
ಭಾಂಡಾರವು ಬರಿದಾಗುತ್ತ ನಡೆಯಿತು. ಜನರ ಮೇಲೆ ಕರಗಳ ಹೊಣೆಯು
ಸಿಕ್ಕಾಪಟ್ಟೆಯಾಗಿ ಬಿದ್ದಿತು. ಜನರ ಸೈರಣೆ ಮೀರಿತು. ಎಷ್ಟೆಂತು ಸಹನ
ಮಾಡಿಕೊಳ್ಳುವದು? ಹೆಚ್ಚಿನ ಕರಭಾರ ಹೊರದಾಗಿ ಪ್ರಜೆರು ಪ್ರತ್ಯಕ್ಷ
ಪ್ರತೀಕಾರವನ್ನು ತೋರಿಸಹತ್ತಿದರು.

ಇದೇ ಹೊತ್ತಿಗೆ ಫ್ರಾನ್ಸದಲ್ಲಿ ರೂಸೋ, ವ್ಹಾಲ್ಟೇಅರ್ ಮೊದಲಾದ
ಪ್ರತಿಭಾಸಂಪನ್ನ ಲೇಖಕರು ತಲೆಯೆತ್ತಿದರು. ಅವರು ತಮ್ಮ ವಿಚಾರಗ
ಳಿಂದ ಜನತೆಯಲ್ಲಿ ಜಾಗೃತಿಯನ್ನುಂಟು ಮಾಡಿದರು. ರಾಜನಿಗೆ ಪ್ರಜೆ
ರನ್ನು ಒತ್ತಾಯಪಡಿಸುವ ಅಧಿಕಾರವಿಲ್ಲೆಂದೂ ರಾಜ್ಯವು ಪ್ರಜಾಜನರ
ಕಲ್ಯಾಣಕ್ಕಾಗಿ ಸ್ಥಾಪಿತವಾದದ್ದೆಂದೂ, ರಾಜನ ವಿಲಾಸಕ್ಕಾಗಿ ಪ್ರಜೆರ
ಅಸ್ತಿತ್ವವಿಲ್ಲೆಂದೂ ಮೊದಲಾದ ವಿಚಾರಗಳ ಪ್ರಭಾವವು ಜನತೆಯ ಮನ
ಸಿನಲ್ಲಿ ಬಿಂಬಿಸಿತು. ಜನರ ಮನಸು ಮೊದಲೇ ರಾಜನ ವಿರುದ್ಧ ಕಲುಷಿತ
ವಾಗಿಯೇ ಇತ್ತು. ಅದರಲ್ಲಿ ಈ ಹೊಸ ವಿಚಾರಗಳ ಪ್ರಘಾತದಿಂದ ಇಡೀ
ಯುರೋಪಖಂಡವೇ ಗದಗುಟ್ಟಿ ನಡುಗಹತ್ತಿತು.

೧೫ನೇ ಲುಯಿಯ ತರುವಾಯ ೧೭೭೪ ರಲ್ಲಿ ೧೬ನೇ ಲುಯಿ ಪಟ್ಟಕ್ಕೆ ಬಂದನು. ಇವನು ಅವರಿಬ್ಬರಷ್ಟು ನೀಚನಾಗಿರಲಿಲ್ಲ. ಸಾಧ್ಯವಾದರೆ ಪ್ರಜೆರ ಕಲ್ಯಾಣ ಮಾಡಬೇಕೆಂಬ ಪ್ರವೃತ್ತಿಯವನಾಗಿದ್ದನು. ಆದರೆ ಪೂರ್ವಜರ ಸ್ವೇಚ್ಛಾಚಾರದ ಪಾತಕವನ್ನು ತೊಡೆದು ಹಾಕಬೇಕಾದ್ದರಿಂದ ಪ್ರಜೆರ ಹಿತಾಹಿತಗಳು ಬದಿಗುಳಿದು, ಅವನೇ ಗಲ್ಲಿಗೇರುವ ಹೊತ್ತು ಬಂದಿತು. ಇವನ ರಾಜ್ಯಕಾರಭಾರದ ಆರಂಭದಲ್ಲಿಯೇ ಭಾಂಡಾರವು ಭಣಗುಟ್ಟುತ್ತಿತ್ತು. ಜನರು ಜೇಷ್ಠಾಲಕ್ಷ್ಮಿಯ ಒಕ್ಕಲಾಗಿದ್ದರು. ರಾಜ್ಯ ಭಾರ ನಡೆಯುವದೇ ದುಸ್ತರವಾಯಿತು. ಪ್ರಜೆರು ರಾಜನಿಗೆ ತಿರುಗಿಬಿದ್ದರು. ರಾಜನಿಗೆ ಒಂದು ಕವಡಿಯನ್ನೂ ಕರವೆಂದು ಕೊಡಬಾರದೆಂದು ನಿರ್ಧರಿಸಿದರು. ರಾಜ್ಯದ ಉತ್ಪನ್ನವು ಹೆಚ್ಚಾಗಲೆಂದು ಹೊಸ ಹೊಸ ಆರ್ಥಿಕ ಮಂತ್ರಿಗಳ ಆಗಮನವಾಗುತ್ತಿತ್ತು. ನಾನಾ ತರಹದ ಯೋಜನೆಗಳು ಪ್ರಕಟಗೊಂಡವು ಆದರೆ ಏನು ಮಾಡಿದರೂ ಹಣವು ಮಾತ್ರ ಎಲ್ಲಿಯೂ ಕಾಣಬರಲಿಲ್ಲ. ಕೊನೆಗೆ ರಾಜನ ಸ್ವಂತ ವೆಚ್ಚಕ್ಕೂ ಸಂಚಕಾರ ಒದಗುವ ಹೊತ್ತೇ ಬಂದಿತು.

ಫ್ರಾನ್ಸದ ರಾಜ್ಯವ್ಯವಸ್ಥೆಯು ಮುರಕಳಿಗೆ ರಾಜರ ಸ್ವೈರಾಚಾರ ಕಾರಣವಾಗಿದ್ದಂತೆ ಉಳಿದ ಕೆಲವು ಕಾರಣಗಳೂ ಸಹಕಾರಿಯಾದವು. ಯುರೋಪದ ಉಳಿದ ರಾಷ್ಟ್ರಗಳಲ್ಲಿದ್ದಂತೆ ಫ್ರಾನ್ಸದಲ್ಲಿಯೂ ಸರಂಜಾಮೀ ಪದ್ಧತಿಯಿತ್ತು. ಈ ಪದ್ಧತಿಯಂತೆ ಸರದಾರರಿಗೂ, ಧರ್ಮಾಧಿಕಾರಿಗಳಿಗೂ ಕೆಲವೊಂದು ವಿಶಿಷ್ಟತರವಾದ ಹಕ್ಕುಗಳಿದ್ದುವಲ್ಲದೆ ಕರಭಾರವೂ ಅವರ ಮೇಲೆ ಹೇರಲ್ಪಡುತ್ತಿರಲಿಲ್ಲ. ಮುಂದೆ ಈ ಸರಂಜಾಮೀ ಪದ್ಧತಿ ಮುಗ್ಗಿತು. ರಾಜನೇ ಸರ್ವಾಧಿಕಾರಿಯಾದನು. ಆದರೂ ಸರದಾರ ಮತ್ತು ಧರ್ಮಾಧಿಕಾರಿಗಳ ವಿಶಿಷ್ಟ ಹಕ್ಕುಗಳಿಗೂ ಕರಭಾರಕ್ಕೂ ಚ್ಯುತಿ ಬಂದಿರಲಿಲ್ಲ. ಈ ಅನ್ಯಾಯವನ್ನು ಜನರು ಸಹಿಸದಾದರು. ಈ ಸರದಾರರೂ, ಧರ್ಮಾಧಿಕಾರಿಗಳೂ ತಮಗೆ ಯಾವುದೋ ಕಾಲಕ್ಕೆ ದೊರೆತ ಅಧಿಕಾರ ಮದದಿಂದ ಹೊಲಗಳ ಹಪ್ತೆಯನ್ನೂ, ಚರ್ಚಿಗಳ ವ್ಯವಸ್ಥೆಗಾಗಿ ಪಟ್ಟಿಯನ್ನೂ ಎತ್ತುತ್ತಲೆ ಇದ್ದರು. ಇದೂ ಅಲ್ಲದೆ ಪಾಪ! ಬಡಬಗ್ಗರು ಸರಂಜಾಮೀ ಪದ್ದತಿಯ, ಕರವನ್ನೂ, ತೆತ್ತಲೇ ಬೇಕಾಗುತ್ತಿತ್ತು. ಇಂಥ

ಕಷ್ಟದಾಯಕವಾದ ಪರಿಸ್ಥಿತಿಯಲ್ಲಿ ತೊಳಲಾಡುತ್ತಿರುವವರ ಉದ್ಧಾರಕ್ಕಾಗಿ ವ್ಹಾಲ್ಟೆಅರ್, ರೂಸೋ ಎಂಬವರಿಬ್ಬರು ಮುಂದೆ ಬಂದರು. ಅವರು ಸರದಾರ ಹಾಗೂ ಧರ್ಮಾಧಿಕಾರಿಗಳ ಕೃಷ್ಣಕಾರಸ್ಥಾನಗಳನ್ನು ಬಯಲಿಗೆಳೆದು **"ಸಮತೆ, ವಿಶ್ವಬಂಧುತ್ವ, ಸ್ವತಂತ್ರತೆ"** ಎಂಬ ಮೂರು ತತ್ವಗಳ ಡಂಗುರವನ್ನು ಸಾರಿದರು. ಆದ್ದರಿಂದ ಫ್ರಾನ್ಸದ ಸಮಾಜರಚನೆ, ಮತ್ತು ರಾಜ್ಯವ್ಯವಸ್ಥೆಗಳಲ್ಲಿ ಅರಾಜಕತೆಯುಂಟಾಗುವ ಲಕ್ಷಣಗಳು ತಲೆದೋರಹತ್ತಿದವು. ರಾಜನು ವಿಲಾಸಕ್ಕಾಗಿ ಹೂಡಿದ ಯುದ್ಧ, ಸ್ವಂತದ ಮಿತಿಮೀರಿದ ವೆಚ್ಚ, ರಾಜ್ಯಶಕಟವನ್ನು ನಿಸ್ತರಿಸಿಕೊಂಡು ಹೋಗಲು ತೆಗೆದ ಸಾಲ ಮೊದಲಾದವುಗಳಿಂದ ಫ್ರಾನ್ಸವು ಹಣ್ಣುಗಾಯಿ ನೀರುಗಾಯಿಯಾಯಿತು. ೧೬ನೇ ಲುಯಿಯು ಈ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವವಕ್ಕಾಗಿ ಟರ್ಗೋ ಮತ್ತು ನೇಕರ್ ಎಂಬಿಬ್ಬ ಅರ್ಥಶಾಸ್ತ್ರ ತಜ್ಞರನ್ನು ಆರ್ಥಿಕ ಮಂತ್ರಿಗಳೆಂದು ನಿಯಮಿಸಿದನು. ಅವರು ರಾಜ್ಯಕಾರಭಾರದ ವೆಚ್ಚವನ್ನು ಕಡಮೆ ಮಾಡಬೇಕೆಂದೂ, ಸರದಾರ ಮತ್ತು ಧರ್ಮಾಧಿಕಾರಿಗಳು ಕರವನ್ನು ಕೊಡುವಂತೆ ಆಜ್ಞೆ ವಿಧಿಸಬೇಕೆಂದೂ ಯೋಜನೆಯ ಕರಡನ್ನು ಸಿದ್ಧಗೊಳಿಸಿದರು. ಆದರೆ ಶ್ರೇಷ್ಠ ವರ್ಗದವರ ಮುಂದೆ ಯಾವ ಆಟವೂ ಸಾಗದ್ದರಿಂದ ಈ ಪ್ರಯತ್ನವು ನಿರರ್ಥಕವಾಯಿತು.

ಕೊನೆಗೆ ರಾಜನು ಬೇಸತ್ತು ೧೭೫ ವರುಷಗಳ ನಂತರ ರಾಷ್ಟ್ರೀಯ ಮಂಡಳದ ಸಭೆಯನ್ನು ೧೭೮೯ ರ ಮೇ ತಿಂಗಳಿನಲ್ಲಿ ಕರೆದನು. ಈ ಮಂಡಳಿಯ ಕಡೆಯಿಂದ ರಾಷ್ಟ್ರದ ಮೇಲೆ ಬಂದಿರುವ ಆಪತ್ತಿಯು ದೂರವಾಗಬಹುದೆಂದು ರಾಜನು ಆಶೆಪಟ್ಟನು. ಈ ಮಂಡಳಿಯಲ್ಲಿ ಮಿರಾಬೊ, ರೋಬೆಸ್‌ಪಿಅರ್, ಲಾಫೇಟ್ ಮೊದಲಾದ ಗೃಹಸ್ಥರಿದ್ದರು. ಮಿರಾಬೋನ ಇಚ್ಛೆಯು ರಾಜ್ಯಯಂತ್ರವನ್ನು ಸುಧಾರಿಸಬೇಕೆಂದಿತ್ತು. ಆದರೆ ಉಳಿದವರು ಅದನ್ನು ಕಿತ್ತು ಹಾಕಿ ಹೊಸ ಘಟನೆಯನ್ನು ಮಾಡಬೇಕೆಂಬ ಅಭಿಪ್ರಾಯದವರಾಗಿದ್ದರು.

ಲುಯಿಯು ಕರೆದ ಈ ಸಭೆಯಲ್ಲಿ ಸರದಾರರು, ಧರ್ಮಾಧಿಕಾರಿಗಳು ಮತ್ತು ಜನರು ಎಂಬ ಮೂರು ಪಕ್ಷಗಳ ಜನರ ಸಮಾವೇಶವಾಗಿತ್ತು.

ಈ ಮೂರೂ ಸಂಗಡಗಳಲ್ಲಿ ಹೇಗೆ ಒಕ್ಕಟ್ಟನ್ನುಂಟುಮಾಡಬೇಕೆಂಬದೆ ತಿಳಿಯದಾಗಿತ್ತು. ಸರದಾರ ಮತ್ತು ಧರ್ಮಾಧಿಕಾರಿ ಸಂಗಡದವರು ತಮ್ಮ ಸಭೆ ಮತ್ತು ಜನರ ಸಭೆ ಪ್ರತ್ಯೇಕವಿರಬೇಕೆಂಬ ಮತದವರಾಗಿದ್ದರು. ಜನತೆಯು ಈ ಭೇದವನ್ನು ಧಿಕ್ಕರಿಸಿತು. ಪ್ರತ್ಯೇಕ ಸಭೆಗಳಿದ್ದರೆ ಪ್ರತಿಯೊಂದು ಸಂಗಡದವರು ಸ್ವಾರ್ಥಿಗಳಾಗಿ ಇನ್ನೊಂದು ಸಂಗಡದವರನ್ನು ತಲೆಯೆತ್ತದಂತೆ ಮಾಡಿ, ದೇಶದ ಹಿತವನ್ನು ಮಣ್ಣುಗೂಡಿಸದಿರರೆಂದು ಜನತೆಯ ಅಭಿಪ್ರಾಯವಾಗಿತ್ತು.. ಸರದಾರ ಮತ್ತು ಧರ್ಮಾಧಿಕಾರಿ ಪಕ್ಷದವರು ಏನಾದರೂ ಮಾಡಿ ಐಕ್ಯವನ್ನುಂಟು ಮಾಡಿಕೊಂಡು, ಹಳೆಯ ಪದ್ಧತಿಯಲ್ಲಿಯೇ ರಾಜ್ಯಭಾರ ನಡೆಯಬೇಕೆಂದು ಪ್ರಯತ್ನಿಸುತ್ತಿದ್ದರು. ಆದರೆ ಜನರಿಗೆ ಆಮೂಲಾಗ್ರ ಬದಲಾವಣೆಯಾದ ನಿಶ್ಚಿತ ಧೋರಣವೇ ಬೇಕಾಗಿತ್ತು. ಒಂಧು ಒಂದುವರಿ ತಿಂಗಳು ಕಳೆದರೂ ಇಬ್ಬಣಗಳಲ್ಲಿ ಒಪ್ಪಂದವಾಗುವ ಲಕ್ಷಣ ತೋರಿಬರಲಿಲ್ಲ. ರಾಜನೂ ದಿನಮೋಕ ಮಾಡುತ್ತಿದ್ದುದನ್ನು ಜನರು ಸಹಿಸದೆ, ತಾವೇ ಫ್ರಾನ್ಸದ ನಿಜವಾದ ಪ್ರತಿನಿಧಿಗಳಿದ್ದೇವೆ; ತಮ್ಮ ಮೇಲೆಯೇ ಪ್ರಜೆರ ಸುಖದುಃಖಗಳು ಅವಲಂಬಿಸಿರುವದರಿಂದ ಇನ್ನು ಮುಂದೆ ಜನರು ಯಾವುದೇ ತರದ ಹೊಸ ಕರವನ್ನು ಕೊಡಲಾರರೆಂದು ಗುಡುಗು ಹಾಕಿದರು. ಈ ಗರ್ಜನೆಯನ್ನು ಕೇಳಿ ಆ ಎರಡೂ ವಿಶಿಷ್ಟ ವರ್ಗದ ಜನರು ಕೈಕಾಲುಗೆಟ್ಟು ರಾಜನನ್ನು ಹುರಿದುಂಬಿಸಿ ಈ ಜನರನ್ನು ಸಭಾಸ್ಥಾನದಿಂದ ಹೊರಗೆ ಹಾಕಿಸಿದರು ಜನರು ಬಹಿರಂಗವಾಗಿಯೇ ತಮ್ಮ ಸಭೆಯನ್ನು ಕೂಡಿಸಿ ರಾಜ್ಯದ ಸುಧಾರಣೆಯಾಗುವ ವರೆಗೆ ತಾವು ವಿಶ್ರಾಂತಿ ತೆಗೆದುಕೊಳ್ಳಲಾರೆವೆಂದು ಶಪಥ ಮಾಡಿದರು. ಈ ಜನತೆಯ ಸಭೆಯಲ್ಲಿ ಅನೇಕ ಧರ್ಮಾಧಿಕಾರಿಗಳೂ, ಸರದಾರರೂ ಸೇರಿಕೊಂಡರು. ಇಷ್ಟಾದ ನಂತರ ಲುಯಿಯು "ನಾನೇ ರಾಜ್ಯದ ಸುಧಾರಣೆಯನ್ನು ಮಾಡುತ್ತೇನೆ. ಇದಕ್ಕೆ ನೆರವಾಗಲು ಇಚ್ಛೆಯಿಲ್ಲದವರು ಮನೆಯಲ್ಲಿ ಸ್ವಸ್ಥವಾಗಿರಬೇ"ಕೆಂದು ಜಾಹೀರು ಪ್ರಕಟನೆಯನ್ನು ತೆಗೆದನು. ಈ ಜಾಹೀರನಾಮೆಯ ಪರಿವೆಯಿಲ್ಲದೆ ರಾಷ್ಟ್ರೀಯ ಪರಿಷತ್ತು "ಪಾಶವೀಶಕ್ತಿಗೂ ನಾವು ಬಗ್ಗಲಾರೆವು; ಸ್ವಸ್ಥವಾಗಿಯೂ ಕುಳಿತುಕೊಳ್ಳಲಾರೆವು" ಎಂದು ಮಾರುತ್ತರವನ್ನು ಕೊಟ್ಟಿತು. ಈ

ಪ್ರಶ್ನೆಯು ಸುಲಭವಾಗಿ ಬಗೆ ಹರಿಯಲಾರದೆಂದು ರಾಜನು ಜನತೆಯು ಸ್ಥಾಪಿಸಿದ ರಾಷ್ಟ್ರೀಯ ಪರಿಷತ್ತನ್ನು ಮನ್ನಿಸಿ, ಸರದಾರ ಮತ್ತು ಧರ್ಮಾಧಿಕಾರಿಗಳೂ ಈ ಸಭೆಯಲ್ಲಿ ಸೇರ್ಪಡೆಯಾಗುವಂತೆ ಅವರ ಮನಲಿವೊಲಿಸಿದನು.

ಜುಲೈ ೨ನೇ ತಾರಿಖೀಗೆ ಈ ಪರಿಷತ್ತು ಯಶಸ್ವಿಯಾಗಿ ಜರುಗಿ ಅತ್ಯಂತ ಬಲಿಷ್ಠವಾಯಿತು. ಆದರೆ ಸ್ವಾಭಾವಿಕವಾಗಿಯೇ ಮದಾಂಧವಾದ ರಾಜನ ದುರಭಿಮಾನೀ ಸ್ವಭಾವವು ಈ ಪರಾಭವದಿಂದೇನೂ ನಷ್ಟವಾಗಿರಲಿಲ್ಲ. ಅವನು ಪ್ಯಾರಿಸದಲ್ಲಿಯ ರಾಷ್ಟ್ರೀಯ ಪರಿಷತ್ತಿನ ಸದ್ದನ್ನಡಿಗಿಸಬೇಕೆಂದು ಪರದೇಶದ ಸೈನ್ಯವನ್ನು ಸಂಗ್ರಹಿಸತೊಡಗಿದನು. ಜನತೆಯು ಈ ಸೈನ್ಯದ ಬಗ್ಗೆ ಸಂಶಯವನ್ನು ವ್ಯಕ್ತಪಡಿಸಿದಾಗ ರಾಜನು "ನೀವೇ ಬೇಕಾದರೆ ದೇಶಬಿಟ್ಟು ಹೊರಟುಹೋಗಿರಿ. ನಾನೇನು ಈಸೈನ್ಯವನ್ನು ಹೊರಹಾಕುವದಿಲ್ಲ" ಎಂದು ಹೇಳಿದನು. ಮೊದಲೇ ಆಪದ್ಗ್ರಸ್ತರಾದ ಜನರುಈ ಮಾತಿನಿಂದ ಕೋಪಗೊಂಡು ರಾಜನ ಮೇಲೆ ಸೇಡನ್ನು ತೀರಿಸಿಕೊಳ್ಳುವ ಹೊಂಚು ಹಾಕಿದರು. ಜನರು ಬರಗಾಲದಿಂದ ಹೈರಾಣರಾಗಿದ್ದರು. ಈ ಉತ್ತರದಿಂದಂತೂ ಅವರ ಪಿತ್ತವು ನೆತ್ತಿಗೇರಿತು. ಅವರು ಪರಿಉಚ್ಚಿದ ಹಾವಿನಂತಾಗಿ ಬಾಯಿಗೆ ಬಂದಂತೆ ಮಾತುಗಳ ಮಳೆ ಸುರಿಸತೊಡಗಿದರು. ಪ್ರಸಂಗ ಬಿದ್ದರೆ ರಾಷ್ಟ್ರಕ್ಕಾಗಿ ಪ್ರಾಣತ್ಯಾಗ ಮಾಡಲೂ ಸಿದ್ಧರಾದರು. ಪ್ರಸಂಗ ಬಿದ್ದರೆ ಪ್ರಾಣತ್ಯಾಗ ಮಾಡಲಿಕ್ಕೂ ಪಣತೊಟ್ಟರು.

ಈ ದ್ವೇಷಾಗ್ನಿಯಿಂದ ಪರಿತಪ್ತವಾದ ಅವರ ಲಕ್ಷ್ಯವು ಫ್ರಾನ್ಸದ ತುರಂಗವಾದ ಬೆಸ್ಟಾಯಿಲ್ ಕಡೆಗೆ ಸೆಳೆಯಲ್ಪಟ್ಟಿತು. ಈ ತುರಂಗದಲ್ಲಿ ಸಾವಿರಾರು ಜನರು ಅಪರಾಧದ ವಿಚಾರಣೆಯಿಲ್ಲದೆ ಕೊಳೆಯುತ್ತ ಬಿದ್ದಿದ್ದರು. ಜನರು ತುರಂಗವನ್ನು ಮುತ್ತಿ ಅಲ್ಲಿಯ ಅಧಿಕಾರಿಗಳನ್ನು ಯಮಲೋಕಕ್ಕೆ ಅಟ್ಟಿ, ಸೆರೆಯಾಳುಗಳನ್ನೆಲ್ಲ ಬಂಧಮುಕ್ತ ಮಾಡಿದರು. ಇದೇ ರಾಜಸತ್ತೆಯನ್ನು ಕಿತ್ತೊಗೆಯುವ ಮೊಟ್ಟ ಮೊದಲಿನ ಶುಭಶಕುನವಾಯಿತು. ಈ ವಿಜಯದಿಂದ ಪ್ರಜಾಪಕ್ಷದ ಬಲವು ಬೆಳೆಯಹತ್ತಿತು. ಮುಂದಿಟ್ಟ ಹೆಜ್ಜೆಯನ್ನು ಹಿಂದೆ ಹಾಕತಕ್ಕದ್ದಲ್ಲೆಂದು ಪ್ಯಾರಿಸದಲ್ಲಿಯ ಲೋಕಪಕ್ಷದ ಪ್ರಮುಖ ಮುಖಂಡರನ್ನು, ರಾಷ್ಟ್ರೀಯ ಸೈನ್ಯವನ್ನು ತರಬೇತು ಮಾಡಲು ನಿಯಮಿಸಲಾಯಿತು. ತರುಣರು ನಾ ಮುಂದೆ, ನೀ

ಮುಂದೆ ಎಂದು ಸೈನ್ಯದಲ್ಲಿ ಸೇರ್ಪಡೆಯಾದರು. ರಾಷ್ಟ್ರೀಯ ಸೈನ್ಯ ಸಿದ್ಧ ವಾಗಿ ಮೊದಲಿಗೇ ಪ್ಯಾರಿಸಪಟ್ಟಣವನ್ನು ಕೈವಶಪಡಿಸಿಕೊಂಡಿತು. ರಾಜನು ಆಗ ಪ್ಯಾರಿಸದಿಂದ ೧೦ ಮೈಲು ದೂರವಿರುವ ಸ್ಥಳದಲ್ಲಿರುತ್ತಿದ್ದನು. ತನ್ನ ರಾಜಸತ್ತೆಯು ಇನ್ನು ಬದುಕಲಾರದೆಂದು ಬಗೆದು ಪರದೇಶೀಯ ಸೈನಿಕರನ್ನು ಹೊರಗೆ ಹಾಕುವೆನೆಂದು ಲೋಕಪ್ರತಿನಿಧಿಗಳಿಗೆ ಹೇಳಿಕಳುಹಿದನು. ಸೈನ್ಯವನ್ನು ಹೊರಗೆ ಹಾಕುವದಾಗಿ ಬಹಿರಂಗ ಪಡಿಸಿದ್ದರೂ ರಾಜನು ಆ ರೀತಿ ಅವರಿಗೆ ಆಜ್ಞೆ ವಿಧಿಸದೆ ಪ್ಯಾರಿಸಿದ ಸುತ್ತುಮುತ್ತಲಿರುವಂತೆ ವ್ಯವಸ್ಥೆ ಮಾಡಿದನು.

ಈ ಪ್ರಜಾಪಕ್ಷದ ಪ್ರಚಂಡ ಹಾವಳಿಯು ಇಡೀ ಫ್ರಾನ್ಸದಲ್ಲಿಯೇ ಹಬ್ಬಿತು. ಹಳ್ಳಿಹಳ್ಳಿಯಲ್ಲಿ ರಾಷ್ಟ್ರೀಯ ಸೈನ್ಯದ ಸಂಗ್ರಹವಾಯಿತು. ಅಲ್ಲಲ್ಲಿ ವಾಸಿಸುತಿದ್ದ ಸರದಾರ, ಜಮೀನದಾರ ಮೊದಲಾದವರನ್ನು ಯಾರೂ ಕೇಳದಾದರು. ಅವರ ಅರಮನೆಗಳನ್ನು ಮುತ್ತಿ ಅವರ ಸಂಪತ್ತನ್ನೆಲ್ಲ ಸೂರೆಗೊಂಡರು. ಅವರ ಕಾಗದಪತ್ರಗಳೆಲ್ಲ ಅಗ್ನಿನಾರಾಯಣನಿಗೆ ಆಹುತಿಯಾದವು.

ರಾಷ್ಟ್ರೀಯ ಪರಿಷತ್ತಿನವರು ಪ್ರತಿನಿತ್ಯವೂ ಹೊಸ ಹೊಸ ಕಾನೂನುಗಳನ್ನು ಹೊರಡಿಸುತ್ತಿದ್ದರು. ಸರದಾರ, ಧರ್ಮಾಧಿಕಾರಿ, ಜಮೀನುದಾರ ಇವರೇ ಮೊದಲಾದ ರಾಜನಿಷ್ಠರ ಸ್ಥಾವರ ಆಸ್ತಿಯನ್ನು ಕಿತ್ತುಕೊಂಡರು. ರಾಜಸತ್ತೆಯು ನಿರ್ಜೀವವಾಯಿತು. ಪ್ರಜಾಪಕ್ಷದಲ್ಲಿಯ ಅನೇಕಜನರು ರಾಜನ ಚಂಡನ್ನು ಹಾರಿಸಿರೆಂದು ಮುಚ್ಚು ಮರೆಯಿಲ್ಲದೆ ಪ್ರತಿಪಾದಿಸ ತೊಡಗಿದದರು.

ವ್ಹರ್ಸೆಲೀಸದಲ್ಲಿರುವ ರಾಜನು ಪ್ರಜೆರ ವಿರುದ್ಧವಾಗಿ ಗುಪ್ತಕಾರಸ್ಥಾನ ನಡೆಸುತ್ತಿದ್ದಾನೆ; ಸೈನ್ಯಾಧಿಕಾರಿಗಳೆಲ್ಲರನ್ನೂ ಬಲಮಾಡಿಕೊಂಡು ಅವರೊಡನೆ ವಿಚಾರವಿನಿಮಯ ನಡೆಸುತ್ತಿದ್ದಾನೆ—ಎಂಬುದನ್ನು ಕೇಳುತ್ತಲೆ ರಾಷ್ಟ್ರೀಯ ಸೈನ್ಯವು ಅಲ್ಲಿಗೆ ಹೋಗಿ, ರಾಜನಿಗೆ ಜಯವಾಗಲಿ! ಎಂದು ಘೋಷಿಸಿ, "ರಾಜರೇ, ಈಗಿಂದೀಗ ನೀವು ವ್ಹರ್ಸೆಲೀಸನ್ನು ಬಿಟ್ಟು ಪ್ಯಾರಿಸಿಗೆ ನಡೆಯಬೇಕು" ಎಂದು ಆಜ್ಞೆವಿಧಿಸಿತು. ಈ ಆಜ್ಞೆ

ಯನ್ನುಲ್ಲಂಘಿಸುವ ಧೈರ್ಯವು ರಾಜನಿಗೆ ಬರಲಿಲ್ಲ. ಪ್ಯಾರಿಸಿಗೆ ಬಂದನು. ಪ್ರಜಾಪಕ್ಷದ ಸೆರೆಯಾಳಾಗಿ ಬಂಧನದಲ್ಲಿರಬೇಕಾಯಿತು.

ರಾಷ್ಟ್ರೀಯ ಪರಿಷತ್ತು ಪರರಾಷ್ಟ್ರೀಯ ಕಾರಭಾರವನ್ನು ಕೈಯಲ್ಲಿ ತೆಗೆದುಕೊಂಡಿತು. ಆದರೂ ದೇಶದಲ್ಲಿ ಶಾಂತತೆ ನೆಲೆಸಲು ಶಕ್ಯವಾಗಲಿಲ್ಲ. ಹಣದ ಕೊರತೆ ಹೇಳತೀರದಷ್ಟಾಗಿತ್ತು ಸೈನ್ಯವು ಗಡಬಡಿಸುತ್ತಿತ್ತು. ಇಂಥ ದಾರುಣಾವಸ್ಥೆಯಲ್ಲಿ ದಿವಸಗಳನ್ನು ಹೇಗೆ ಕಳೆಯಬೇಕೆಂಬ ವಿವಂಚನೆಯು ರಾಷ್ಟ್ರೀಯ ಪರಿಷತ್ತನ್ನು ಜರ್ಜರಗೊಳಿಸಿತು. ರಾಜನು ಪರದೇಶದ ಸಹಾಯ ಬಂದೀತೆಂದು ಆಶಾಬದ್ಧನಾಗಿದ್ದನು. ಅವನಿಗೆ ಪಾರತಂತ್ರ್ಯವು ಅಸಹ್ಯವೆನಿಸಿತು ಆದಕಾರಣ ಅವನು ೨೦ನೇ ಜೂನ ೧೭೯೧ನೇ ದಿನ ತಪ್ಪಿಸಿಕೊಂಡು ಓಡಿದನು. ಆದರೆ ದುರ್ದೈವದಿಂದ ಅವನಿಗೆ ಕಷ್ಟವೇ ಒದಗಿತು. ನಡುದಾರಿಯಲ್ಲಿಯೇ ಅವನನ್ನು ಸೆರೆಹಿಡಿದು ಪ್ಯಾರಿಸದಲ್ಲಿ ಬಂಧಿಸಿಡಲಾಯಿತು. ಅವನ ವಿಚಾರಣೆ ನಡೆದು ಅವನನ್ನು ಪದಚ್ಯುತನನ್ನಾಗಿ ಮಾಡಲಾಗುವದೆಂಬ ಸುದ್ದಿ ಹರಡಿತು; ಆದರೆ ರಾಜನು ಇನ್ನೂ ಕೆಲವೊಂದುಕಾಲ ರಾಜನಾಗಿ ಉಳಿಯುವ ಆವಶ್ಯಕತೆ ಎನಿಸಿದ್ದರಿಂದ ಅವನನ್ನು ಹಾಗೆಯೇ ಇಟ್ಟುಬಿಟ್ಟರು. ರಾಷ್ಟ್ರೀಯ ಪರಿಷತ್ತಿನ ಕಾರ್ಯವು ಬಹುತೇಕವಾಗಿ ಪೂರ್ಣವಾಗಿದ್ದರಿಂದ ೧೭೯೧ರ ಮೇ ತಿಂಗಳಿನಲ್ಲಿ ಅದು ಅಂತರ್ಧಾನವಾಯಿತು. ಆಗ ೭೫೦ ಜನರದೊಂದು ಹೊಸ ಮಂಡಳವು ನಿರ್ಮಾಣವಾಯಿತು.

೧೬ನೆಯ ಲುಯಿಯ ಹೆಂಡತಿಯು ಆಸ್ಟ್ರಿಯಾದ ರಾಜನ ಮಗಳಾದ್ದ ಅವನಿಂದ ಸಹಾಯವು ದೊರಕಬಹುದೆಂದು ಲುಯಿಯು ಬಹುದಿನಗಳಿಂದ ಆಶೆಯನ್ನಿಟ್ಟುಕೊಂಡಿದ್ದನು. ಫ್ರಾನ್ಸದಲ್ಲಿಯ ಕೆಲವು ಜನರು ತಮ್ಮ ದೇಶವನ್ನು ಬಿಟ್ಟು ಸರಹದ್ದಿಯಲ್ಲಿದ್ದುಕೊಂಡು ಪರಪ್ರಾಂತದ ನೆರವು ಬರಬಹುದೆಂದು ದಾರಿಕಾಯುತ್ತಿದ್ದರು. ಕೊನೆಗೆ ಆಸ್ಟ್ರಿಯಾ ಫ್ರಾನ್ಸಗಳ ನಡುವೆಯೇ ಯುದ್ಧವೆದ್ದಿತು ಅದರಲ್ಲಿ ಇಬ್ಬರೂ ಜಯಶೀಲರಾಗಲಿಲ್ಲ. ಫ್ರಾನ್ಸದ ಸೈನ್ಯವು ದುರ್ಬಲವಾಗಿತ್ತು ಅವರು ದಿಕ್ಕು ತೋಚಿದತ್ತ ಓಡತೊಡಗಿದರು. ಅವರನ್ನು ಬೆನ್ನಟ್ಟುವಷ್ಟು ಶಕ್ತಿಯು ಆಸ್ಟ್ರಿಯಾದ ಸೈನ್ಯಕ್ಕಿರಲಿಲ್ಲ. ಮುಂದೆ ಪ್ರಶಿಯಾದ ಸೈನ್ಯವು ಆಸ್ಟ್ರಿಯಾದ ಸೈನಿಕರ ಬೆಂಬಲಕ್ಕೆ

ಬಂದಿತು. ಇದರಿಂದ ಫ್ರಾನ್ಸವು ಬಲು ಬೆದರಿತು. ಪ್ರಶಿಯನ್ನರ ಸೈನ್ಯವು ಪ್ಯಾರಿಸಿದ ಬಾಗಿಲಕ್ಕೆ ಬಂದೇಬಿಟ್ಟಿತು. ಪ್ರಶಿಯಾದ ಸೇನಾಪತಿಯಾದ ಬ್ರಸ್ಸ್‌ವಿಕ್‌ನು "ಲೂಯಿಯ ಕೂದಲು ಕೊಂಕಿದರೆ ಪ್ಯಾರಿಸ್ ನಗರವನ್ನೇ ಸುಟ್ಟುಹಾಕಲಾಗುವದು" ಎಂಬ ಬೆದರಿಕೆ ಹಾಕಿದನು. ಈ ಬೆದರಿಕೆಯಿಂದ ಫ್ರಾನ್ಸದ ಜನತೆಯು ಮತ್ತಿಷ್ಟು ಉದ್ರೇಕಗೊಂಡಿತು. ರಾಜನು ಪರ ಪ್ರಾಂತದ ಸೈನಿಕರೊಡನೆ ಗುಪ್ತಕಾರಸ್ಥಾನವನ್ನು ನಡಿಸಿದ್ದಾನೆಂದು ಜನರ ತಿಳಿವಳಿಕೆಯಾಯಿತು.

ಈ ಕಾಲಕ್ಕೆ ಈ ಕ್ರಾಂತಿಕಾರಕರಲ್ಲಿ ಮೌಂಟನೆನ್ಸ್ ಮತ್ತು ಜಿರೊಂಡಿಸ್ಟ ಎಂಬೆರಡು ಪ್ರಮುಖ ಪಕ್ಷಗಳಿದ್ದವು ಮೌಂಟನೆನ್ಸ ಪಕ್ಷದವರು ರಾಜನಿಗೆ ದಯೆ-ಮಾಯೆ ತೋರಿಸದೆ ಅವನ ಚಂಡನ್ನು ಹಾರಿಸಬೇಕೆನ್ನುತ್ತಿದ್ದರು. ಎರಡನೆಯ ಪಕ್ಷವಾದ ಜಿರೊಂಡಿಸ್ಟರು ಇಷ್ಟು ಕ್ರೂರರೂ ನಿರ್ದಯಿಗಳೂ ಇರಲಿಲ್ಲ. ರಾಜನು ನಮ್ಮ ಮಾತಿನಂತೆ ನಡೆದರೆ ಸಾಕು ಎಂದು ಅವರ ಅಭಿಪ್ರಾಯವಾಗಿತ್ತು. ಮೌಂಟನೆಸ್ಸ ಪಕ್ಷವೇ ಪ್ರಬಲವಾಗಿತ್ತು. ಯುದ್ಧದ ಸರ್ವಸನ್ನಾಹದೊಂದಿಗೆ ಅವರು ೧೦ನೇ ಆಗಸ್ಟ ೧೭೯೨ ರಲ್ಲಿ ರಾಷ್ಟ್ರೀಯ ಮಂಡಳವು ರಾಜನನ್ನು ಪದಚ್ಯುತನನ್ನಾಗಿ ಮಾಡುವದಕ್ಕೂ, ಲೋಕಸತ್ತಾತ್ಮಕ ರಾಜ್ಯಪದ್ಧತಿಯ ಘಟನೆಯನ್ನು ರಚಿಸುವದಕ್ಕೂ, ಒಂದು ಮಂಡಳವನ್ನು ಸ್ಥಾಪಿಸಿದರು. ಈ ಮಂಡಳಿಯ ನೇತೃತ್ವದಲ್ಲಿಯೇ ಅರಮನೆಗೆ ಮುತ್ತಿಗೆ ಹಾಕಿ ರಾಜ-ರಾಣಿಯರನ್ನು ಬಂಧಿಸಿ, ಶಾಸ್ತ್ರೋಕ್ತವಾಗಿ ರಾಜನನ್ನು ಪದಚ್ಯುತ ಮಾಡಲಾಯಿತು.

ರಾಜನನ್ನು ಪದಚ್ಯುತ ಮಾಡಿದ ಮೇಲೆ ಫ್ರಾನ್ಸದ ರಾಜ್ಯಸೂತ್ರಗಳು ಉದ್ರೇಕಗೊಂಡ ಜನರ ಕೈಗೆ ಬಂದವು. ಈ ಜನರಲ್ಲಿ ರಾಬೆಸ್ಪಿಯರ್, ಡಾಂಟನ್, ಮಾರೆ ಮೊದಲಾದವರೇ ಮುಖ್ಯವಾಗಿದ್ದರು. ಅವರು ಒಂದೂ ವರಿತಿಂಗಳಂತೂ ಕಾರಭಾರ ಸಾಗಿಸಿದರು. ಮುಂದೆ ಪ್ರಶಿಯಾದ ವ್ಹಾಲ್ಮೀ ಎಂಬಲ್ಲಿ ಯುದ್ಧವಾಗಿ ಅವರ ಸೈನ್ಯದ ತಂಡವೊಂದನ್ನು ಹೊರಗೋಡಿಸಿ ಬಿಡಲಾಯಿತು. ಆ ಮೇಲೆ ಡಾಂಟನ್, ಮಾರೆ ಮೊದಲಾದವರು ಫ್ರಾನ್ಸದಲ್ಲಿ ಘೋರವಾದ ಅನನ್ವಿತ ಕೃತ್ಯಗಳನ್ನೆಸಗಿದರು. ರಾಜಸತ್ತೆಯ ಕಡೆಗೆ ಒಲವಿದ್ದವರನ್ನು ಹುಡುಕಿ ತೆಗೆದು ಅವರನ್ನು ಕಾರಾಗೃಹಕ್ಕೆ ಕಳಿಸುತ್ತಿದ್ದರು.

ತುರಂಗಗಳು ಸಾಲದೆ ಹೋದರೆ ಒಳಗಿದ್ದವರನ್ನೆಲ್ಲ ಕೊಂದುಹಾಕಿ ಹೊಸ ಬರನ್ನು ಒಳಗಿಡುತ್ತಿದ್ದರು. ಸಪ್ಟೆಂಬರ ೨, ೩, ೪ ತಾರೀಖು ಈ ಮೂರೇ ದಿನಗಳಲ್ಲಿ ೨೦೦೦ ಸಾವಿರ ಜನರ ರುಂಡಗಳನ್ನು ಹಾರಿಸಲಾಯಿತು

೨೧-೯-೧೭೯೨ರಲ್ಲಿ ರಾಷ್ಟ್ರೀಯ ಮಂಡಳವು ನೆರೆಯಿತು. ಫ್ರಾನ್ಸದಲ್ಲಿ ನಡೆವ ಕಗ್ಗೊಲೆಯು ನಿಂತಿತು. ಈ ಮಂಡಳದ ಮೊದಲನೆಯ ಸಭೆಯ ಲ್ಲಿಯೇ ಫ್ರಾನ್ಸ್ ಲೋಕಸತ್ತಾತ್ಮಕವಾಯಿತೆಂದು ಸಾರಲಾಯಿತು. ಇದೇ ಸಭೆಯಲ್ಲಿಯೇ ರಾಜನನ್ನು ವಿಚಾರಣೆಗಾಗಿ ನಿಲ್ಲಿಸಬೇಕೆಂದು ಗೊತ್ತಾ ಯಿತು. ಡಿಸೆಂಬರ ೧೭೯೨ರಲ್ಲಿ ರಾಜನ ಮೇಲಿನ ನ್ಯಾಯವಿಚಾರಣೆ ಮೊದಲಾಯಿತು. ಅರಸನ ತಲೆಯನ್ನು ಇಳಿಸಲೇಬೇಕೆಂದು ಬಹು ಜನರು ಆಗ್ರಹಪಟ್ಟಿದ್ದರಿಂದ ಜಿರೋಂಡಿಸ್ಟರ ಮಾತಿಗೆ ಬೆಲೆಬಾರದೆ ರಾಜ ನಿಗೆ ಗಲ್ಲಿನ ಶಿಕ್ಷೆಯನ್ನು ಕೊಡಬೇಕೆಂದು ನಿರ್ಣಯವಾಯಿತು. ೨೧-೧-೧೭೯೩ರಲ್ಲಿ ರಾಜನ ಶಿರಚ್ಛೇದವಾಯಿತು. ಈ ರೀತಿಯಲ್ಲಿ ನೂರಾರುವರುಷ ಗಳಿಂದ ನಡೆಯುತ್ತಿದ್ದ ಒತ್ತಾಯದ ಇತಿಶ್ರೀಯು ಒಮ್ಮೆ ಮುಗಿದು ಬಿಟ್ಟಿತು. ಜನರಿಗೆ ಸಮಾಧಾನವಾಯಿತು.

ಲುಯಿಯ ಗಲ್ಲಿನ ಶಿಕ್ಷೆಯಿಂದ ಇಡೀ ಫ್ರಾನ್ಸದಲ್ಲಿ ಭೀತಿ ನೆಲೆಯೂ ರಿತು. ಇಂಗ್ಲಂಡದಲ್ಲಿಯೂ ಪಿಟ್, ಫಾಕ್ಸ, ಬರ್ಕ ಮೊದಲಾದ ಮುತ್ಸದ್ದಿಗ ಳಲ್ಲಿ ವೈಮನಸ್ಯವು ತಲೆದೋರಿತು. ಅವರಲ್ಲಿ ಕೆಲವರು ಕ್ರಾಂತಿಕಾರರನ್ನು ಎತ್ತಿ ಹಿಡಿದರು; ಕೆಲವರು ಕ್ರಾಂತಿಕಾರರನ್ನು, ಸಮೂಲ ನಾಶಗೊಳಿಸಿಯೇ ತೀರಬೇಕೆಂಬ ಅಭಿಪ್ರಾಯದವರಿದ್ದರು. ಫ್ರೆಂಚ ಜನರು ಎಲ್ಲೆಲ್ಲಿ ಹೋಗು ವರೋ ಅಲ್ಲಲ್ಲಿ ರಾಜ ಸತ್ತೆಯ ವಿರುದ್ಧವಾಗಿ ಪ್ರಚಾರ ನಡೆಸುತ್ತಿದ್ದರು; ಜನರಿಗೆ ಲೋಕಸತ್ತೆಯನ್ನು ಸ್ಥಾಪಿಸಿರೆಂದು ಉಪದೇಶಿಸುತ್ತಿದ್ದರು. ಫ್ರಾನ್ಸದ ಈ ಹೊಸ ಧೋರಣೆಯಿಂದ ಇಡೀ ಯುರೋಪಖಂಡವೇ ನಡು ಗಿತು. ಫ್ರಾನ್ಸದ ವಿರುದ್ಧವಾಗಿ ಎಲ್ಲ ರಾಷ್ಟ್ರಗಳೂ ಸೇರಿಕೊಂಡು ಒಂದು ಸಂಘವನ್ನು ಸ್ಥಾಪಿಸದಿದ್ದರೆ ತಮಗೆ ತರಣೋಪಾಯವೇ ಇಲ್ಲವೆಂದು ಡಂಗುರ ಹೊಡೆದರು. ಈ ಸಂಘವು ಬೇಗನೆ ಸ್ಥಾಪನವಾಯಿತು. ಅದರಲ್ಲಿ ಯುರೋಪದ ಪ್ರಮುಖ ರಾಷ್ಟ್ರಗಳೆಲ್ಲವೂ ಸಮಾವೇಶವಾಗಿದ್ದವು. ಫ್ರಾನ್ಸಕ್ಕೆ ಇದೊಂದು ದೊಡ್ಡ ಗಂಡಾಂತರವೇ ಉಂಟಾಯಿತು. ಫ್ರಾನ್ಸದೊ

ಳಗೇ ಸ್ವಾಸ್ಥ್ಯವಿರಲಿಲ್ಲ. ಆದರೂ ಹೊರಗಿನ ಸಂಕಟವೇ ಮಹತ್ವದ್ದಾದ್ದ ರಿಂದ ಅವರು ೩ಲಕ್ಷ ಸೈನಿಕರ ಸೈನ್ಯಪಡೆಯನ್ನು ತಯಾರುಮಾಡಬೇಕೆಂದು ಗೊತ್ತು ಮಾಡಿದರು. ಒತ್ತಾಯದಿಂದಲೇ ಜನರನ್ನು ಸೈನ್ಯದಲ್ಲಿ ಸೇರಿಸಿ ಕೊಂಡರು. ಇದೇ ಕಾಲಕ್ಕೆ ವೆಂಡಿಯ ಒಕ್ಕಲಿಗರು ಬಂಡನ್ನೆಬ್ಬಿಸಿದರು. ಈ ಒಕ್ಕಲಿಗರಲ್ಲಿ ಅಷ್ಟೇನೂ ನೀರಿರಲಿಲ್ಲ. ಆದರೂ ಅವರಿಗೆ ರಾಜಕೀಯ ಮತ್ತು ಧಾರ್ಮಿಕ ಪರಿವರ್ತನೆಯು ಮನಸಿಗೆ ಬಂದಿರಲಿಲ್ಲ. ಸರದಾರರು, ಧರ್ಮಾಧಿಕಾರಿಗಳು, ಮತ್ತು ರಾಜಕೀ ಮೊದಲಾದವರ ಪಾಡು ಹೀಗಾದುದನ್ನು ಕಂಡು ನಿಷ್ಪಾಪ ಬುದ್ಧಿಯ, ಪರಂಪರಾ ಪದ್ಧತಿಯ ಪ್ರೇಮಿಗಳಾದ ಆ ಒಕ್ಕಲಿಗರಿಗೆ ಸಿಟ್ಟು ಬಂದು, ಬಲಿಯಾದುದೇನು ಆಶ್ಚರ್ಯದ ಮಾತಲ್ಲ. ಈ ಅವರ ಬಂಡಾಯದಲ್ಲಿ ಅಸಂತುಷ್ಟ ವರ್ಗದ ಜನರೂ ಕೂಡಿಕೊಂಡರು. ಸರದಾರರೂ, ಧರ್ಮಾಧಿಕಾರಿಗಳೂ ಕೂಡಿಯೇ ಈ ಬಂಡಾಯದ ಸೂತ್ರಧಾರಿಗಳಾಗಿದ್ದರು. ಫ್ರಾನ್ಸದ ಪ್ರಚಂಡ ರಾಜ್ಯಕ್ರಾಂತಿಯ ಇತಿಹಾಸದಲ್ಲಿ ವೆಂಡಿಯ ಬಂಡಾಯವೆಂಬದೊಂದು ಚಿಕ್ಕ ಅಧ್ಯಾಯವಾದರೂ ಬಹು ಮಹತ್ವದ್ದಾಗಿದೆ.

ಈ ಕಾದಂಬರಿಯ ವಿಷಯವಾದರೂ ಈ ವೆಂಡಿಯ ಬಂಡಾಯಕ್ಕೆ ಸಂಬಂಧಪಟ್ಟದ್ದಾಗಿದೆ. ಕಾದಂಬರಿಯ ಮೊದಲು ಫ್ರಾನ್ಸದಲ್ಲಿ ಎಂಥ ಪರಿಸ್ಥಿತಿ ಇತ್ತೆಂಬದನ್ನು ಇಲ್ಲಿ ಕೊಡಲಾಗಿದೆ. ಇನ್ನು ಮುಂದೆ ಈ ಕ್ರಾಂತಿಯು ಯಾವ ಸ್ವರೂಪವನ್ನು ತಾಳಿತು, ಅದರ ಪರ್ಯವಸಾನವು ಹೇಗಾಯಿತೆಂಬದನ್ನು ನೋಡಬೇಕಾಗಿದೆ.

ಪ್ರಜಾಪಕ್ಷದವರು ವೆಂಡಿಯ ಬಂಡಾಯವನ್ನು ಸದೆಬಡಿದೊಗೆದರು. ಒಳಗೆ ಬರಬೇಕೆಂದು ಕಾಯ್ದು ಕುಳಿತ ಶತ್ರುಗಳನ್ನು ಸರಹದ್ದಿನಾಚೆಗೆ ಅಟ್ಟಿಬಿಟ್ಟರು. ಆ ಮೇಲೆ ಜಾಕೋಬಿನ್ಸರು ಫ್ರಾನ್ಸವನ್ನು ರಕ್ಷಿಸುವದಕ್ಕೆಂದು ಒಂಬತ್ತು ಜನರಿಂದೊಡಗೂಡಿದ "ನಗರರಕ್ಷಕ ಮಂಡಳ"ವೊಂದನ್ನು ರಚಿಸಿದರು. ಈ ಮಂಡಳದ ಕಾರಭಾರಕ್ಕೇ ಭೀತಿಪ್ರದವಾದ ಆಳಿಕೆ ( Reign of terrer ) ಎಂದೆನ್ನುತ್ತಾರೆ. ಈ ಆಳಿಕೆಯು ಒಂದೇ ವರುಷ ಬದುಕಿತು. ಈ ಮಂಡಲಕ್ಕೆ ನೆರವಾಗಲೆಂದು ಇನ್ನೆರಡು ಮಂಡಳಗಳ ರಚನೆಯಾಯಿತು. ಈ ಹೊಸದಾಗಿ ರಚಿತವಾದ ಮಂಡಳ

ಗಳಲ್ಲೊಂದು ಮಂಡಳವು ಗುಹ್ನೆಗಳನ್ನು ಶೋಧಿಸಿತೆಗೆಯುವದು ಇನ್ನೊಂದು ಮಂಡಳವು ಅವುಗಳ ವಿಚಾರಣೆ ಮಾಡಿ ಆಗಿಂದಾಗ ನಿರ್ಣಯವನ್ನು ಹೇಳುವ ಕೆಲಸ ಮಾಡುತ್ತಿತ್ತು. ಈ ಮೂರೂ ಮಂಡ ಳಗಳ ಸಹಕಾರದಿಂದ ಫ್ರಾನ್ಸವು ಕೊಲೆ ಪಾತಕಿದಳ ಬೀಡಾಗಿತ್ತು ಈ ಮಂಡಳದಲ್ಲಿ ಡಾಂಟೆನ್‌ನ ಬದಲಾಗಿ ರಾಬೆಸ್ಪಿಯರನು ನಿಯಮಿಸಲ್ಪ ಟ್ಟನು. ಇಬ್ಬರ ಸ್ವಭಾವವು ಒಂದಕ್ಕೊಂದು ವಿರುದ್ಧವಾಗಿದ್ದುದೇ ಈ ಬದ ಲಾವಣೆಗೆ ಕಾರಣವಾಯಿತು. ರಾಬೆಸ್ಪಿಯರನು ತನ್ನ ಮನಸ್ಸಿನಲ್ಲಿ ಆದರ್ಶ ರಾಜ್ಯಪದ್ಧತಿಯ ರೂಪರೇಷೆಯ ಹೊಳವು ಹಾಕಿದ್ದನು. ಅದಕ್ಕೊಂದು ಮೂರ್ತ ಸ್ವರೂಪವನ್ನು ಕೊಟ್ಟು ಅದನ್ನು ರೂಢಿಯಲ್ಲಿ ತರಬೇಕೆಂದು ಅವನು ಪ್ರಯತ್ನಿಸುತ್ತಿದ್ದನು.

ಈ ನವಗ್ರಹ ಮಂಡಲವು ಫ್ರಾನ್ಸದಲ್ಲಿ ಮಾಡಿದ ಅಮಾನುಷ ಹೃದಯದ್ರಾವಕ ಸಂಗತಿಗಳನ್ನು ಇಲ್ಲಿ ವಿವರಿಸುವದು ಬೇಡೆಂದು ಬಿಡಲಾ ಗಿದೆ. ತುರಂಗದಲ್ಲಿದ್ದ ಲುಯಿಯ ರಾಣಿಯ ತಲೆಯನ್ನು ಹಾರಿಸಲಾಯಿತು ಮುಂದೆ ಜಾಕೊಬಿನ್ಸರ ಪಕ್ಷದಲ್ಲಿಯೇ ಒಳಜಗಳವುಂಟಾಯಿತು. ಅದರಂತೆ ಫ್ರಾನ್ಸದ ಪರದೇಶದ ಶತ್ರುಗಳಲ್ಲಿಯೂ ಭೇದವುಂಟಾದ್ದರಿಂದ ಫ್ರಾನ್ಸವು ಬದುಕಿಕೊಳ್ಳಲು ಅವಕಾಶವಾಯಿತು. ಜಾಕೊಬಿನ್ಸ ಪಕ್ಷದ ನಗರ ರಕ್ಷಕ ಮಂಡಲಿಗೂ ರಾಷ್ಟ್ರೀಯ ಪರಿಷತ್ತಿಗೂ ಜಗಳವುಂಟಾಯಿತು. ಈ ಜಗಳ ದಲ್ಲಿ ಡಾಂಟನ್‌ನಿಗೆ ಮರಣ ದಂಡನೆಯಾಯಿತು. ೫—೪—೧೭೯೪ ರಲ್ಲಿ ಡಾಂಟನ್‌ನು ತನ್ನ ಅನುಯಾಯಿಗಳೊಂದಿಗೆ ಗಲ್ಲಿಗೇರಿಸಲ್ಪಟ್ಟನು. ಅವನು ಸಾಯುವ ಮೊದಲು ತನ್ನ ಪ್ರತಿಪಕ್ಷಿಯಾದ ರಾಬೆಸ್ಪಿಯರನಿಗೆ "ನಿನಗೂ ನನ್ನಂತೆ ಬೇಗನೆ ಆಗುವದು"ಎಂದು ಭವಿಷ್ಯ ಹೇಳಿದನು. ಡಾಂಟನ್‌ನ ತರು ವಾಯ ರಾಬೆಸ್ಪಿಯರನು ಸರ್ವಾಧಿಕಾರಿಯಾಗಿ ರಾಜ್ಯಸೂತ್ರ ವಹಿಸಿದನು. ಆ ಕಾಲಕ್ಕೆ ಪ್ರತಿಯೊಬ್ಬ ಅಪರಾಧಿಗೆ ದೇಹದಂಡನೆಯ ಶಿಕ್ಷೆಯು ಹೊರತು ಬೇರೆ ಶಿಕ್ಷೆಯೇ ಇರಲಿಲ್ಲ. ಇವನ ಕಾಲಕೀರ್ದಿಯಲ್ಲಿಯೂ ಅಸಂಖ್ಯ ಜನರು ಗಲ್ಲಿಗೇರಿಸಲ್ಪಟ್ಟರು. ರಾಬೆಸ್ಪಿಯರನು ಸರ್ವಗುಣ ಸಂಪನ್ನನಿದ್ದರೂ ಅವ ನಲ್ಲಿ ಮುಂದಾಳಾಗುವ ಶಕ್ತಿಯೂ ಗುಣವೂ ಇರಲಿಲ್ಲ. ದೇಶದಲ್ಲಿ ಇದಕ್ಕೂ ಹೆಚ್ಚಿನ ಕರಾಳ ಕೃತ್ಯಗಳನ್ನೆಸಗಬೇಕೆಂದು ರಾಬೆಸ್ಪಿಯರನೂ ಅವನ ಮಿತ

ನಾದ ಸೆಂಟ್ ಜಸ್ಟನೂ ಹಂಚಿಕೆ ಹಾಕುತ್ತಿದ್ದರು. ನಿಜವಾಗಿ ನೋಡಿದರೆ ಇದಕ್ಕೂ ಹೆಚ್ಚಿನ ನರಹತ್ಯೆಯ ಆವಶ್ಯಕತೆ ಇರಲಿಲ್ಲ. ಆದರೂ ಈ ಮತ ವನ್ನು ಪ್ರತಿಪಾದಿಸುವವರ ಮೇಲೆಯೆ ರಾಬೆಸ್ಪಿಯರನು ಕತ್ತಿಯನ್ನೆತ್ತಿದನು. ಕೊನೆಗೆ ಇವನ ಪಕ್ಷಕ್ಕೆ ಯಶವು ದೊರೆಯಲಿಲ್ಲ ಇವನೇ ದೇಶ ವಿಘಾತುಕ ನೆಂದು ನಿರ್ಣಯಿಸಿ, ಗಲ್ಲಿಗೆ ಹಾಕಬೇಕೆಂದು ಆಜ್ಞೆವಿಧಿಸಲ್ಪಟ್ಟಿತು. ೨೭—೭-೧೭೯೪ ರಲ್ಲಿ ರಾಬೆಸ್ಪಿಯರನೂ ಅವನ ಅನುಯಾಯಿಗಳೂ ಮರಣಕ್ಕೀಡಾದರು.

ಫ್ರಾನ್ಸದೊಳಗೆ ಒಂದೇ ವರುಷದಲ್ಲಿ ೧೭೦೦೦ ಜನರು ಗಲ್ಲಿಗೇರಿಸಲ್ಪ ಟ್ಟರು. ಇದಲ್ಲದೆ ಗಾಯ ಹೊಂದಿದವರೆಷ್ಟು, ಬೇರೆ ರೀತಿಯಿಂದ ಮರಣ ಪಟ್ಟವರೆಷ್ಟು ಎಂಬುದರ ಲೆಕ್ಕಕ್ಕೆ ಮಿತಿಯೇ ಇರುವದಿಲ್ಲ. ಲಕ್ಷಾವಧಿ ಜನರು ಅನಾಥ ದೆಸೆಗೀಡಾದರು. ದೇಶಾಂತರ ಹೊರಟು ಮರಳಿ ಬಂದವರನ್ನು ಯಮಲೋಕಕ್ಕೆ ಕಳಿಸಲಾಗುತ್ತಿತ್ತು. ಈ ಪ್ರಕಾರ ಫ್ರಾನ್ಸದಲ್ಲಿಯ ರಾಜ್ಯ ಕ್ರಾಂತಿಯ ಸಂಕ್ಷಿಪ್ತ ಚರಿತ್ರೆಯಿದೆ. ರಾಜಕ್ರಾಂತಿಯು ಒಳಿತೋ ಕೆಡುಕೋ ಎಂಬದನ್ನು ವಿವೇಚಿಸುವ ಸ್ಥಳವಿದಲ್ಲ. ಆದರೂ ಒಟ್ಟಿನ ಮೇಲೆ ಹೇಳಬೇ ಕೆಂದರೆ ಫ್ರಾನ್ಸವು ಕ್ರಾಂತಿಯ ಸಲುವಾಗಿ ಎಂಥ ಬೆಲೆಯನ್ನು ಕೊಟ್ಟಿತೋ ಅದು ಮಾತ್ರ ಜಗತ್ತಿಗೆ ಲಾಭದಾಯಕವಾಯಿತೆಂದೇ ಸಾರವ ವಿಧಿಯಿಲ್ಲೆನ ಬಹುದು.

ಕ್ರಾಂತಿಯ ಬಸಿರಿನ ಪ್ರಸವವೇದನೆ ನಿಂತ ಮೇಲೆ ಜಗತ್ತಿನಲ್ಲಿಯೇ ಲೋಕೈಕ ವೀರನೆಂದು ಹೆಸರು ವಾಸಿಯಾದ ನೇಪೋಲಿಯನ್ನನ ಅವತಾರ ವಾಯಿತು. ಅವನೂ ಜಗತ್ತನ್ನೇ ಹೇಗೆ ಜರ್ಜರಗೊಳಿಸಿದನು; ಕೊನೆಗೆ ಅವನ ಅಂತ್ಯವೂ ಹೇಗೆ ದುಃಖಪ್ರದವಾಯಿತೆಂಬ ಇತಿಹಾಸವು ಜಗತ್ ಪ್ರಸಿದ್ಧವಿದ್ದು ಸರ್ವಶ್ರುತವಿದೆ.

—— ೦ ——

# ಪ್ರಾಣಾಹುತಿ

## ೧

ಮೇ ತಿಂಗಳದೊಂದು ದಿನ. ೪-೫ ತಾಸು ಹೊತ್ತೇರಿರಬಹುದು. ಘೋರವಾದ ಅರಣ್ಯದಲ್ಲಿ ೩೦೦ ದಂಡಾಳುಗಳ ತಂಡವೊಂದು ಮರೆಮರೆಯಾಗಿ ಅಡಗಿಕೊಳ್ಳುತ್ತ ಮಾರ್ಗ ಕ್ರಮಿಸಹತ್ತಿದೆ. ದಟ್ಟವಾದ ಅಡವಿಯಾದ್ದರಿಂದ ಆ ದಂಡಾಳುಗಳಿಗೆ ತಾವು ಎತ್ತ ಹೊರಟಿದ್ದೇವೆ, ಸುತ್ತುಮುತ್ತಲು ಏನಿದೆ, ಹೊತ್ತು ಎಷ್ಟಾಗಿದೆ ಎಂಬುದರ ಅರಿವು ಕೂಡ ಉಂಟಾಗುವಂತಿರಲಿಲ್ಲ. ಅವರು ಹಾಕುತ್ತಿರುವ ಹೆಜ್ಜೆಗಳು ಮನುಷ್ಯರ ರುಂಡ, ಮುಂಡಗಳ ಮೇಲೆಯೇ ಬೀಳುತ್ತಿದ್ದುದರಿಂದ ಅವರ ಅಂತಃಕರಣವು ದುಃಖದಿಂದ ತುಂಬಿ ಬಿಡುತ್ತಿತ್ತು. ವೈರಿಗಳು ಎಲ್ಲಿದ್ದಾರೆ, ಯಾವಾಗ ತಮ್ಮ ಮೇಲೆ ಹಲ್ಲೆಮಾಡಿಯಾರು ಎಂಬ ಕಲ್ಪನೆ ಇಲ್ಲದ್ದರಿಂದ, ಎಲ್ಲಾದರೂ ಸದ್ದು ಕೇಳೀತೋ ಎಂದು ಕಿವಿಗೊಟ್ಟು, ಅಷ್ಟಷ್ಟಕ್ಕೆ ನಿಲ್ಲುತ್ತ ಅವರ ಮಾರ್ಗಕ್ರಮಣ ನಡೆದಿತ್ತು. ಆ ಅರಣ್ಯದಲ್ಲಿ ಅಡವೀ ಹೂಗಳ ಸುವಾಸನೆಗೆ ಕೊರತೆ ಕಡಿಮೆ. ನಾನಾತರದ ಹಕ್ಕಿಪಕ್ಕಿಗಳ ಕಿಲಕಿಲಾಟಕ್ಕೆ ಮಿತಿಯಿರಲಿಲ್ಲ. ನೂರಾರು ವರುಷಗಳಿಂದ ಬಾಳಿದ ಅನೇಕ ದೊಡ್ಡ ದೊಡ್ಡ ಮರಗಳು ತಪಸ್ವಿಗಳಂತೆ ನಿಂತು ತಪಶ್ಚರ್ಯೆ ಮಾಡುತ್ತಿದ್ದವು. ನೆಲವೆಲ್ಲ ಹುಲ್ಲಿನ ಹಸಿರು-ಹಾಸಿಗೆಯಿಂದ ಆಚ್ಛಾದಿತವಾದ್ದರಿಂದ ಕಾಲ ಸಪ್ಪಳವೂ ಆಗುವಂತಿರಲಿಲ್ಲ. ದಟ್ಟವಾದ ಕಂಟಿಗಳ ಮೆಳೆಗಳು ಅಲ್ಲಲ್ಲಿ ಬೆಳೆದುದರಿಂದ ದಾರಿಯು ಕಟ್ಟಾಗಿ ಮುಂದಿನ ಮಾರ್ಗವೇ ಕಾಣುತ್ತಿದ್ದಿಲ್ಲ. ಶಾಂತತೆಯ ಕಾಲವಲ್ಲಿ ಈ ಅಡವಿಯು ಮೃಗಯಾವಿಹಾರಕ್ಕಾಗಿ ಮೀಸಲಾಗಿತ್ತು; ಆದರೆ ಅದೇ ಈಗ ಮಾನವ-ಬೇಟೆಯ ಕ್ರೀಡಾಂಗಣವಾಗಿತ್ತು.

ಆದುದರಿಂದಲೆ ನಿಮಿಷ-ನಿಮಿಷಕ್ಕೂ ಸಂಕಟಕ್ಕೀಡಾಗುವ ಸಂಭವವೆ ಇದ್ದುದರಿಂದ ಆ ತಂಡವು ಯುದ್ಧದ ಸನ್ನದ್ಧತೆಯಲ್ಲಿಯೇ ಸಾಗಿತ್ತು. ಈ ತಂಡದೊಂದಿಗೆ ಒಬ್ಬ ಪರಿಚಾರಿಕೆ ಇದ್ದಳು. ಅವಳು ಎಲ್ಲರಿಗಿಂತಲೂ ಮುಂದೆಯೇ ನಡೆದಿದ್ದಳು. ಅವಳು ಮುಂದಿರುವದರಿಂದ ಸಂಕಟವಿಲ್ಲದಿರಲಿಲ್ಲ. ಆದರೂ ಸ್ತ್ರೀ ಸ್ವಭಾವವು ಹೆಚ್ಚು ಜಿಜ್ಞಾಸೆಯುದಾಗಿದ್ದರಿಂದ ಅವಳು ಎಲ್ಲರಗಿಂತಲೂ ಮುಂದೆಯೇ ಸಾಗಿದ್ದಳು. ಒಮ್ಮಿಂದೊಮ್ಮೆಲೆ ಆ ತಂಡದ ಮುಂದಿನ ದಂಡಾಳುಗಳು ನಿಂತುಬಿಟ್ಟರು. ತಮ್ಮ ಮುಂದಿರುವ ದಟ್ಟವಾದ ಗಿಡ-ಗಂಟಿಗಳೊಳಗಿಂದ ಮನುಷ್ಯಪ್ರಾಣಿಯ ಶ್ವಾಸೋಚ್ಛ್ವಸವು ಕೇಳಬರುತ್ತಿದೆ ಎಂಬಂತೆ ಅವರಿಗೆ ಭಾಸವಾಯಿತು. ನಾಲ್ಕೆಂಟು ಹೆಜ್ಜೆ ಹಾಕಿದ ಮೇಲೆ ಗಿಡಗಂಟಿಗಳ ಟೊಂಗೆಗಳು ಅಲೆದಾಡಿದಂತೆ ಕಂಡುಬಂದಿತು.

ಕೂಡಲೆ ಅವರು ಒಬ್ಬರಿಗೊಬ್ಬರು ಸನ್ನೆಮಾಡಿದರು. ಒಂದು ಕ್ಷಣದಲ್ಲಿಯೇ ಚಲನವಲನವಾಗುತ್ತಿರುವ ಸ್ಥಳವು ಗೊತ್ತು ಹಚ್ಚಲ್ಪಟ್ಟಿತು. ಸೈನಿಕರೆಲ್ಲರೂ ಬಂದೂಕುಗಳನ್ನು ಕೈಯಲ್ಲಿ ತೆಗೆದುಕೊಂಡು, ಕುದುರೆಯ ಮೇಲೆ ಬೆರಳಿಟ್ಟುಕೊಂಡು ನಿಂತುಕೊಂಡರು. ಮುಖ್ಯಾಧಿಕಾರಿಯ ಆಜ್ಞೆಯಾಗುವದೊಂದೇ ತಡ, ಬಂದೂಕು ಹಾರಿಸುವ ಸಿದ್ಧತೆಯಲ್ಲಿಯೇ ಇದ್ದರು. ಅಷ್ಟರಲ್ಲಿಯೇ ಆ ಪರಿಚಾರಿಕೆಯು ತಲೆ ಬಾಗಿಸಿ ಆ ಕಡೆಗೆ ಏನಿದೆಯೋ ಎಂಬದನ್ನು ನೋಡತೊಡಗಿ " ತಡೆಯಿರಿ, ಬಂದೂಕು ಹಾರಿಸಬೇಡಿರಿ " ಎಂದು ಕೂಗಿಕೊಂಡು ಆ ಮರದ ಝುಡುಪಿನಲ್ಲಿ ನುಗ್ಗಿಯೇ ಬಿಟ್ಟಳು. ಸೈನಿಕರೂ ಅವಳ ಬೆನ್ನು ಹಿಂದೆಯೇ ಓಡಿದರು. ಅಂಥ ಭೀಕರ. ನಿರ್ಜನ ಪ್ರದೇಶದಲ್ಲಿ ಹೆಂಗುಸೊಬ್ಬಳು ಕುಳಿತಿದ್ದಾಳೆ; ಮಗುವೊಂದು ಹೊಟ್ಟೆಗೆ ತಿನ್ನುತ್ತಿದೆ; ತೊಡೆಯ ಮೇಲೆ ಎರಡು ಸುಂದರ ಮಗುಗಳು ಮಲಗಿಕೊಂಡಿವೆ ಎಂಬ ದೃಶ್ಯವು ಅವರ ಕಣ್ಣಿಗೆ ಬಿದ್ದಿತು.

" ನೀನಿಲ್ಲಿ ಮಾಡುತ್ತೀಯೇನು ? " ಎಂದು ಪರಿಚಾರಿಕೆಯು ಕೇಳಿದ್ದಕ್ಕೆ ಆ ಹೆಂಗುಸು ಮುಖವೆತ್ತಿ ನೋಡಿದಳು. ಪರಿಚಾರಿಕೆಯು ತುಸು

ಸಿಟ್ಟಿನ ದನಿಯಲ್ಲಿ "ಇಲ್ಲಿ ಕುಳಿತುಕೊಳ್ಳಲು ನಿನಗೆ ಹುಚ್ಚು-ಗಿಚ್ಚು ಹಿಡಿದಿಲ್ಲವಷ್ಟೇ ? ಒಂದು ಕ್ಷಣ ಕಳೆದಿದ್ದರೆ ನೀನು ಚೂರು ಚೂರು ಆಗಬಹುದಿತ್ತು. ನೀನು ಇಂಥ ಅರಣ್ಯದಲ್ಲಿ ಸಾಯಬೇಕೆಂದು ಬಂದಿರುವಿಯಾ ?" ಎಂದು ವಿಚಾರಿಸಿದಳು.

ಪರಿಚಾರಿಕೆಯ ಮಾತನ್ನು ಕೇಳಿ ಅವಳು ಭಯಭೀತಳಾಗಿ ಬಂದೂಕು, ಬರ್ಚಿ, ಸಿಪಾಯಿ ಮೊದಲಾದವರನ್ನು ಹರಿದು ತಿನ್ನುವಂತೆ ನೋಡತೊಡಗಿದಳು. ಅಷ್ಟರಲ್ಲಿ ಮಲಗಿದ ಮಗುಗಳೆರಡೂ ಎದ್ದು ಅಳಲು ತೊಡಗಿದವು. 'ಅವ್ವಾ, ಹೊಟ್ಟೆ ಹಸಿವಾಗಿವೆ' ಎಂದು ಒಂದು ಮಗುವು, 'ಅವ್ವಾ, ಹೆದರಿಕೆ ಬರುತ್ತಿದೆ' ಎಂದು ಇನ್ನೊಂದು ಮಗುವು ಚೀರತೊಡಗಿದವು. ಮೊಲೆಗೂಸು ತಿನ್ನುತ್ತಲೇ ಇತ್ತು. ಭೀತಿಗೊಂಡ ಆಕೆಯ ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಇವನ್ನು ಕಂಡ ಆ ತಂಡದ ನಾಯಕನು "ಅಂಜಬೇಡ, ನಾವು ಪ್ರಜಾಸಂರಕ್ಷಕ ಸೈನಿಕರಿದ್ದೇವೆ" ಎಂದು ಅವಳಿಗೆ ಹೇಳಿದನು.

ಆ ಹೆಣ್ಣುಮಗಳು ಥರಥರ ನಡುಗತೊಡಗಿದಳು. ನೆಟ್ಟನೋಟದಿಂದ ಆ ನಾಯಕನ ಮುಖವನ್ನು ನೋಡುತ್ತಿದ್ದಳು. ಅವನ ಮುಖಚರ್ಯೆಯು ಭೀತಿದಾಯಕವಾಗಿತ್ತು. ಉದ್ದವಾದ ಮೀಸೆ, ಗಂಟಿಕ್ಕಿದ ಹುಬ್ಬು, ಕೆಂಪು ಲಾಲವಾದ ಕಣ್ಣುಗಳಿಂದ ಅವನು ಹೆಚ್ಚು ಭೀಕರವಾಗಿ ತೋರುತ್ತಿದ್ದನು.

"ನೀನು ಯಾರು ?" ಎಂದು ಆ ನಾಯಕನು ಪುನಃ ಕೇಳಿದನು.

ಅವಳು ಬೆದರಿ ಹೌಹಾರಿದಳು. ಅವಳು ಕಾಣಲು ತರುಣಿಯಾಗಿದ್ದರೂ ಮುಖವು ಬಿಳುಪೇರಿತ್ತು. ಮೈಮೇಲಿನ ಬಟ್ಟೆಗಳೆಲ್ಲವೂ ಹರಕು ಚಿಂದಿಯಾಗಿದ್ದವು. ಅವಳ ಪ್ರತಿಯೊಂದು ಅವಯುವವೂ ಬಡತನದ ಸಾಕ್ಷಿಯನ್ನು ಕೊಡುತ್ತಿದ್ದವು; ಬಡತನದ ಮೂರ್ತಿಯೇ ಆಗಿದ್ದಳು. ಕಾಲಲ್ಲಿ ಇಲ್ಲದ್ದರಿಂದ ಅವಳ ಕಾಲು ರಕ್ತ ಬಂಬಾಳವಾಗಿದ್ದವು.

"ಈಕೆಯು ಭಿಕ್ಷುಕಿ ಇರಬೇಕು." ಎಂದು ನಾಯಕನೆಂದನು.

ಪರಿಚಾರಿಕೆಯು ಸಮಾಧಾನದಿಂದ "ನಿನ್ನ ಹೆಸರು ಏನು ?" ಎಂದು ಮೆಲ್ಲನೆ ವಿಚಾರಿಸಿದಳು. ಕೊನೆಗೊಮ್ಮೆ ಅವಳು ಬಾಯಿ ಬಿಚ್ಚಿ ಅಸ್ಪಷ್ಟ ಶಬ್ದಗಳಿಂದ 'ಮಾಯಕೇಲ್-ಪ್ಲೆಶಾರ್ಡ್' ಎಂದು ಉಚ್ಚರಿಸಿದಳು. ಪರಿಚಾರಿಕೆಯು ಆ ಸಣ್ಣ ಕೂಸಿನ ಮೈಮೇಲೆ ಕೈಯಾಡಿಸುತ್ತ '೧೮ ತಿಂಗಳು' ಎಂದು ಅವಳು ಉತ್ತರವಿತ್ತಳು.

"ಅಂದರೆ ದೊಡ್ಡವನೇ ಆಗಿದ್ದಾನೆ. ಇನ್ನು ಮೇಲೆ ಹೊಟ್ಟೆಗೆ ಕೊಡುವದನ್ನು ನಿಲ್ಲಿಸಬೇಕು. ನಾನು ಅವನಿಗೆ ಹಾಲು ಕುಡಿಯಲು ಕಲಿಸುತ್ತೇನೆ" ಎಂಬ ಪರಿಚಾರಿಕೆಯ ಸ್ತ್ರೀಸಹಜವಾದ ಮಾತು ಕೇಳಿ ಆ ಹೆಂಗುಸಿಗೆ ಧೈರ್ಯವುಂಟಾಗತೊಡಗಿತು. ಆ ಉಳಿದೆರಡೂ ಮಗುಗಳು ಅಂಜಿಕೆಯನ್ನು ತೊರೆದು ಹುಳುಹುಳು ಎಲ್ಲರ ಕಡೆಗೆ ನೋಡತೊಡಗಿದವು. ಅಷ್ಟರಲ್ಲಿ, ಆ ತಾಯಿ ಬಾಯಿ ಬಿಚ್ಚಿ "ನನ್ನ ಮಗುಗಳಿಗೆ ಬಹಳ ಹಸಿವೆಯಾಗಿವೆ. ನಿಮ್ಮ ಹತ್ತಿರ ತಿನ್ನುವ ಪದಾರ್ಥ ಮತ್ತು ಹಾಲು ಇದ್ದರೆ ಒಂದಿಷ್ಟು ಕೊಡುವಿರಾ ?" ಎಂದು ದೈನ್ಯಾಸದಿಂದ ಬೇಡಿಕೊಂಡಳು.

"ನಾವು ನಿನಗೆ ಬೇಕಾದುದನ್ನು ಕೊಡುತ್ತೇವೆ. ನೀನು ಯಾವ ಪಕ್ಷದವಳು ಎಂಬದನ್ನು ಮೊದಲು ಹೇಳು." ಎಂದು ನಾಯಕನು ಅವಳನ್ನು ವಿಚಾರಿಸಿದನು.

ಅವಳು ಮತ್ತೆ ಬೆದರುಗಣ್ಣುಗಳಿಂದ ಅವನನ್ನು ನೋಡತೊಡಗಿದಳು. ಆದರೆ ಪಿಟ್ಟೆಂದು ತುಟಿ ಎರಡು ಮಾಡಲಿಲ್ಲ. ನಾಯಕನು "ನನ್ನಪ್ರಶ್ನೆಗೆ ಮೊದಲು ಉತ್ತರ ಕೊಡು." ಎಂದು ಮತ್ತೆ ಕೇಳಿದನು.

ಅವಳು ಅರ್ಧಮರ್ಧ ಶಬ್ದಗಳನ್ನು ಬಾಯಲ್ಲಿ ನುಂಗಿಕೊಳ್ಳುತ್ತ "ನಾನು ಚಿಕ್ಕವಳಿದ್ದಾಗ ನನ್ನನ್ನು ಒಂದು ಆಶ್ರಮದಲ್ಲಿಟ್ಟಿದ್ದರು. ಆದರೆ ಈಗ ನನ್ನ ಮದುವೆಯಾಗಿದೆ. ನಮ್ಮ ಊರಿಗೆ ಬೆಂಕೀ ಹಚ್ಚಿದರು. ಅದರಿಂದ ನಾನು ಗಡಿಬಿಡಿಯಿಂದ ಜೀವ ಉಳಿದರೆ ಸಾಕು; ಎಂದು ಓಡಿ ಬಂದೆವು. ಸಂಗಡ ಏನಾದರೂ ಸಾಮಾನು ತರಬೇಕೆಂಬ ಅರಿವೂ ನನಗು ಳಿಯಲಿಲ್ಲ." ಎಂದು ಹೇಳಿದಳು.

" ನೀನು ಯಾವ ಪಕ್ಷದವಳಿರುವಿ ಎಂಬದನ್ನು ವಿಚಾರಿಸಿದ್ದೇನೆ. ಅದನ್ನು ಹೇಳುವದು ಬಿಟ್ಟು ನಿನ್ನ ಕತೆಯನ್ನು ಹೇಳಬೇಡ. "

" ನನಗೆ ಏನೂ ತಿಳಿಯಲೊಲ್ಲದು. "

" ಈ ಕಾಲದಲ್ಲಿ ಹೆಂಗಸರೂ ಸಹ ಗುಪ್ತಚಾರರ ಕೆಲಸ ಮಾಡುತ್ತಿದ್ದಾರೆ. ಅಂಥವರಿಗೆ ನಾವು ಗುಂಡು ಹೊಡೆದು ಕೊಂದುಹಾಕುತ್ತೇವೆ. ಹುಂ, ಹೇಳು, ಬೇಗ, ನಿನ್ನ ಪಕ್ಷ ಯಾವುದೆಂಬದನ್ನು. "

" ನೀವು ಬೇಕಾದ್ದನ್ನು ಅನ್ನಿರಿ. ನೀವೇನೆನ್ನುವಿರೋ ಅದೇ ನನಗೆ ತಿಳಿಯದಾಗಿದೆ. "

" ನಿನ್ನ ದೇಶ ಯಾವುದೆನ್ನುವದೂ ನಿನಗೆ ಗೊತ್ತಿಲ್ಲವೆ ? "

" ದೇಶ ? ಓಹೋ ಗೊತ್ತಿದೆ. "

" ಅದರ ಹೆಸರೇನು ? "

" ಸಿಸ್ಯೊಯಿ ನಾರ. "

" ಸಿಸ್ಯೊಯಿನಾರ ! ಅದು ದೇಶವಲ್ಲ. "

" ಅಹುದು, ಅದೇ ನನ್ನ ದೇಶವು. " ಅವಳು ತುಸು ವಿಚಾರ ಮಾಡುತ್ತ " ಅಹುದು, ನೀವು ಫ್ರಾನ್ಸದವರು; ನಾನು ಬ್ರಿಟನ್ನಿನಾಕೆ. " ಎಂದಂದಳು.

" ಅದು ದೇಶವಲ್ಲ. ಇರಲೊಲ್ಲದು. ಅಲ್ಲಿ ನಿಮ್ಮ ಮನೆ-ಮಾರು ಇದೆಯೋ ? "

" ಎಲ್ಲಾ ಇತ್ತು. ಮನೆಯವರಾರೂ ಉಳಿಯಲಿಲ್ಲ. "

" ಯಾರಾದರೂ ಇದ್ದರೆ ಹೇಳಿಬಿಡು; ಬಚ್ಚಿಡಬೇಡ. " ಎಂದು ಆ ನಾಯಕನು ಉಚ್ಚಸ್ವರದಲ್ಲಿ ಕೇಳಿದನು. ಅದಕ್ಕೆ ಅವಳು ಬೆಚ್ಚಿಬಿದ್ದಳು. ಇನ್ನು ಭಟ್ಟಿಯು ಕೆಡುವದೆಂದು ಬಗೆದು ಆ ಪರಿಚಾರಿಕೆಯು ನಡುವೆಯೇ ಬಾಯಿಹಾಕಿ, ಒಬ್ಬ ಹುಡುಗನನ್ನಪ್ಪಿಕೊಂಡು ಮುದ್ದಿಸಿ, ಇನ್ನೊಬ್ಬನ ತಲೆಯ ಮೇಲೆ ಕೈಯಾಡಿಸಿ ಹುಡುಗರಿಗೆ ಹೆಸರೇನು ಇಟ್ಟಿರುವಿಯೆಂದು ಕೇಳಿದಳು.

" ಹುಡುಗರಿಗೆ ರೀನಿಜೀನ್, ಗ್ರಾಸಲೇನ್ ಎಂದೂ ಹುಡುಗಿಗೆ ಜಾರ್ಜೆಟ್ ಎಂದೂ ಹೆಸರಿಟ್ಟಿದ್ದೇನೆ. "

" ಗ್ರಾಸಲೇನ್ ಲಠ್ಠಮುಟ್ಟ ಇದ್ದಾನೆ. ಉತ್ತಮ ಮಕ್ಕಳನ್ನು ಹಡೆದಿರುವಿ. ಬುದ್ಧಿವಂತರೂ ಆಗುವರು. "

ನಾಯಕನು ಮತ್ತೆ ಪ್ರಶ್ನೆಮಾಡಿದನು. " ನಿನ್ನ ಮನೆ ಎಲ್ಲಿದೆ " ಹೇಳೆಂದು.

" ಅಲ್ಲಿಯೇ ಇದೆಯೆಂದು ಹೇಳಿದೆನಲ್ಲವೇ ? "

" ಅದನ್ನೇಕೆ ಬಿಟ್ಟು ಬಂದಿ ? "

" ಅವರು ಬೆಂಕೀ ಹಚ್ಚಿ ಸುಟ್ಟು ಹಾಕಿದರು. "

" ಅವರು ಎಂಥರೆ ಯಾರು ? "

" ಅವರದು ನನಗೇನು ಗೊತ್ತು ? ಯುದ್ಧವಾಯಿತು. ಆದ ಅವರೇ ಸುಟ್ಟು ಹಾಕಿದರು.

" ನೀನು ಬಂದದ್ದಾದರೂ ಎಲ್ಲಿಂದ ? ಎಲ್ಲಿಗೆ ಹೊರಟಿರುವಿ ? "

" ಅಲ್ಲಿಂದಲೇ ಬಂದೆ. ಎಲ್ಲಿಗೋ ಏನೋ ಹೊರಟಿದ್ದೇನೆ. "

" ನೀನು ಯಾರು ಎಂಬದನ್ನು ಇನ್ನೂ ಹೇಳುವದಿಲ್ಲವೇ ? "

" ನನಗೆ ಗೊತ್ತಿಲ್ಲ. "

" ನೀನು ಯಾರು, ಏನು ಇರುವಿ ಎಂಬದೇ ನಿನಗೆ ಗೊತ್ತಿಲ್ಲವೇ ? "

" ಅಹುದು. ನಾನು ಮನೆ-ಮಾರು-ಕುಂಟಿ-ಎಲ್ಲವನ್ನೂ ತೊರೆದು ಓಡಿ ಬಂದಿರುವಾಕೆ. "

" ನೀನು ಯಾವ ಪಕ್ಷಕ್ಕೆ ಸೇರಿದವಳು ? ರಾಜಪಕ್ಷವೋ ಅಥವಾ ಪ್ರಜಾಪಕ್ಷವೋ, ಹೇಳು. "

" ನನಗೆ ಪಕ್ಷ-ಗಿಕ್ಷಗಳು ಗೊತ್ತಿಲ್ಲ. ನನ್ನ ಹುಡುಗರದಷ್ಟೆ ಗೊತ್ತಿದೆ. "

ತುಸು ಹೊತ್ತಿನ ಮೇಲೆ ಆ ನಾಯಕನು ಮತ್ತೆ ಕೇಳಿದನು. " ನಿನ್ನ ಬಂಧುಬಳಗದವರ ಸುದ್ದಿಯನ್ನು ಹೇಳು. ಇಲ್ಲಿ ನೋಡು, ನಾನು ನನ್ನ

ದನ್ನು ಹೇಗೆ ಹೇಳುತ್ತೇನೆಂಬದನ್ನು. ನನ್ನ ಹೆಸರು ರೇಡೋ. ನಾನು ಇವರ ನಾಯಕ. ನನ್ನ ಊರು ಮಿಡಿ. ನನ್ನ ತಾಯಿ–ತಂದೆ ಅಲ್ಲಿಯೇ ವಾಸಿಸುತ್ತಾರೆ. ಅವರಂತೆ ಈ ಫ್ಲೋಶಾರ್ಡನು ಏನು ಮಾಡುತ್ತಾನೆ ? "

" ಅವರು ಕೆಲಸ ಮಾಡುತ್ತಿದ್ದರು. ನನ್ನ ತಂದೆಗೆ ಬಡಿತ ಬಿದ್ದುದರಿಂದ ಕುಂಟನಾಗಿದ್ದನು. ಅವನ ಒಡೆಯನು ಅವನನ್ನು ಹೊಡೆದಿದ್ದ. ಒಮ್ಮೆ ನನ್ನ ತಂದೆ ನಮ್ಮೊಡೆಯನ ಮೊಲವೊಂದನ್ನು ಹಿಡಿದಿದ್ದನು. ಅದಕ್ಕಾಗಿ ಅವನಿಗೆ ಫಾಸೀ ಶಿಕ್ಷೆಯಾಗುವದಿತ್ತು. ಆದರೆ ನಮ್ಮೊಡೆಯನು ದಯಾಳುವಾಗಿ ನನ್ನ ತಂದೆಗೆ ೧೦೦ ಛಟಕಿ ಶಿಕ್ಷೆ ವಿಧಿಸಿದನು. ಅಂದಿನಿಂದ ನನ್ನ ತಂದೆ ಕುಂಟನಾದನು. "

" ಸರಿ. ನಿಮ್ಮ ಅಜ್ಜ ? "

" ನಮ್ಮ ಅಜ್ಜನು ಸುಧಾರಕನಾದ್ದರಿಂದ ಕರ್ಮಠರು ಅವನಿಗೆ ದೇಹಾವಧಿ ಶಿಕ್ಷೆ ಕೊಟ್ಟರು. ಆಗ ನಾನು ಚಿಕ್ಕವಳಾಗಿದ್ದೆ. "

" ಹುಂ, ಮುಂದೆ ಹೇಳು. "

" ನನ್ನ ಮಾವನು ಉಪ್ಪು ಕದ್ದು ತಂದಿದ್ದನು. ಆದ್ದರಿಂದ ರಾಜನು ಅವನಿಗೆ ಫಾಶೀ ಶಿಕ್ಷೆ ಕೊಟ್ಟನು. "

" ಹುಂ, ನಿನ್ನ ಗಂಡ ಏನು ಮಾಡುತ್ತಿದ್ದ ? "

" ಅವರು ಆ ದಿನಗಳಲ್ಲಿ ಯುದ್ಧ ಮಾಡುತ್ತಿದ್ದರು. "

" ಯಾರ ಸಲುವಾಗಿ ? "

" ರಾಜನಿಗಾಗಿ, ಜಮೀನದಾರಿಗಾಗಿ, ಧರ್ಮ ಗುರುಗಳಿಗಾಗಿ. "

" ರಾಜ, ಜಮೀನುದಾರ, ಧರ್ಮಗುರು- ಈ ಮೂರೂ ಶಬ್ದಗಳು ಜನಾವಾದ ಸಹಸ್ರ ನಾಮಾವಳಿಯಲ್ಲಿಯವೇ " ಎಂಬ ನಾಯಕನ ಮಾತನ್ನು ಕೇಳಿ ಅವಳು ಪುನಃ ಗಾಬರಿಗೊಂಡಳು.

" ನೀನು ಅಂಜಬೇಡ. ನಾವು ಪ್ಯಾರಿಸದವರಿದ್ದೇವೆ. "

" ದೇವಾ ! ನಮ್ಮ ಜೀವವನ್ನುಳಿಸು " ಎಂದು ಅವಳು ದೊಡ್ಡ ದನಿಯಿಂದ ಉದ್ಗಾರ ತೆಗೆದಳು.

ಆ ಪರಿಚಾರಿಕೆಯು ಆ ಹೆಣ್ಣುಮಗಳ ಹತ್ತಿರ ಹೋಗಿ ಕುಳಿತು ಹಿರೇ ಹುಡುಗನನ್ನು ತನ್ನ ತೊಡೆಯ ಮೇಲೆ ತೆಗೆದುಕೊಂಡಳು. ಚಿಕ್ಕ ಮಗುಗಳಿಗೆ ಹೆದರಿಕೆ ಬರುವದೂ ತಡವಾಗುವದಿಲ್ಲ; ಹೆದರಿಕೆ ದೂರಾಗಿ ಮುದ್ದು ಮುದ್ದು ಮಾತನಾಡಲೂ ತಡವಾಗುವದಿಲ್ಲ. ಆ ಪರಿಚಾರಿಕೆಯು "ನಿನ್ನ ಮಗುಗಳು ದೃಷ್ಟಿ ಹತ್ತುವಂತಿವೆ. ನೀನೂ ಬಹಳ ಹೆದರಿಕೊಂಡಂತೆ ಕಾಣುವದು. ಹೆದರಿಕೆಯನ್ನು ಬಿಡು. ನಮ್ಮ ತಂಡದೊಡನೆ ನಡೆ; ನಾನು ಹೇಳಿದಂತೆ ನಡೆದುಕೋ. ನನ್ನ ಹತ್ತಿರ ಹಾಲು, ನೀರು ಎಲ್ಲವೂ ಇದೆ. ಯುದ್ಧವು ನಡೆದು ಸೈನಿಕರು ಗಾಯಹೊಂದಿ ಬಿದ್ದುಕೊಂಡಲ್ಲಿ ನಾನು ಒಳ ನುಗ್ಗಿ ಹೋಗಿ ಅವರಿಗೆ ಹಾಲು, ನೀರು ಕೊಟ್ಟು ಶುಶ್ರೂಷೆ ಮಾಡಬೇಕಾ ಗುತ್ತದೆ. ಅವರ ಮೈಯ್ಯೊಳಗಿಂದ ರಕ್ತಸ್ರಾವವಾಗುವದರಿಂದ ಅವರಿಗೆ ಬಾಯಾರಿಕೆ ಆಗುತ್ತದೆ. ಅಂಥ ವೇಳೆಯಲ್ಲಿ ಸೈನಿಕನು ಯಾವ ಪಕ್ಷದವ ನೆಂಬ ವಿಚಾರವನ್ನೇ ಗಣನೆಗೆ ತರುವದಿಲ್ಲ. ಯುದ್ಧ ಮಾಡುವದೆಂದರೆ ನಿಜವಾಗಿಯೇ ಮೂರ್ಖತನದ ಸಂತೆಯೇ ಸರಿ. ನನ್ನೊಡನೆ ನಡೆ. ನಿನಗೆ ಲ್ಲವನ್ನೂ ಹೇಳುತ್ತೇನೆ. ನಾನು ಸತ್ತೆನೆಂದರೆ ನನ್ನ ಸ್ಥಾನದಲ್ಲಿ ನೀನಿರುವಿ ಯಂತೆ. ನಿನ್ನ ಮೈಯಲ್ಲಿಯೂ ಗಂಡಸರಷ್ಟೆ ಧೈರ್ಯ-ಶೌರ್ಯಗಳು ತಾವೇ ಬರುವವು. ನನ್ನ ಚಪ್ಪಲುಗಳಿವೆ. ನಿನ್ನ ಕಾಲಿಗೆ ಸರಿಯಾಗಬಹುದು. ರಣರಂಗದಲ್ಲಿ ಬರಿಗಾಲಿನಿಂದ ಅಡ್ಡಾಡಬಾರದು." ಎಂದು ಅವಳಿಗೆ ಹೇಳಿ ದಳು.

ಇತ್ತ ಇವರಿಬ್ಬರ ಮಾತುಕತೆ ನಡೆದಾಗ ಇನ್ನೊಂದೆಡೆಯಲ್ಲಿ ಸೈನಿ ಕರು ಚೇಷ್ಟೆಯನ್ನು ಮಾಡುತ್ತಿದ್ದರು. ಅವರು ರಾಜ, ಜಮೀನುದಾರರ ಬಗ್ಗೆ ಅಲ್ಲದ ಸಲ್ಲದ ಮಾತುಗಳನ್ನಾಡುತ್ತಿದ್ದರು. ಇದನ್ನು ಕೇಳಿದ ಅವರ ನಾಯಕನು ಅವರನ್ನು ಬೆದರಿಸಿ, ಇಂಥ ಮಾತುಗಳನ್ನು ಹೆಂಗಸರ ಮುಂದೆ ಆಡಬಾರದೆಂದು ಅಪ್ಪಣೆ ಮಾಡಿದನು.

ನಾಯಕನು ಆ ಸ್ತ್ರೀಯ ಕಡೆಗೆ ಹೊರಳಿ "ಮುಂದೆ ನಿನ್ನ ಗಂಡನ ಪರಿಣಾಮವೇನಾಯಿತು?" ಎಂದು ವಿಚಾರಿಸಿದನು.

" ಅವರು ಅವರನ್ನು ಕೊಂದು ಹಾಕಿದರು "

" ಎಲ್ಲಿ, ಯಾವಾಗ ಕೊಂದರು ? "

" ಒಂದು ಗಿಡದ ಝುಡುಪಿನಲ್ಲಿ. ಮೂರೇ ದಿನಗಳ ಹಿಂದೆ. "

" ಕೊಂದವರು ಯಾರು ? "

" ನನಗೆ ಗೊತ್ತಿಲ್ಲ. "

" ನಿನ್ನ ಗಂಡನನ್ನು ಕೊಂದವರಾರೆಂಬದೂ ನಿನಗೆ ಗೊತ್ತಿಲ್ಲವೇ ?"

" ಛೇ, ನನಗೆ ಗೊತ್ತಿಲ್ಲ. "

" ರಾಜಪಕ್ಷದವರೋ ಅಥವಾ ಪ್ರಜಾಪಕ್ಷದವರೋ ? "

" ಬಂದೂಕಿನ ಗುಂಡುಗಳು. "

" ಇರಲಿ, ಮೂರು ದಿನಗಳಿಂದ ನೀನು ಮಾಡಿದ್ದಾದರೂ ಏನು ? "

" ನಾನೆ ! ನನ್ನ ಕಂದಮ್ಮಗಳನ್ನು ತೆಗೆದುಕೊಂಡು ತಿರುಗುತ್ತಿರುತ್ತೇನೆ."

" ಅವರನ್ನು ತೆಗೆದುಕೊಂಡು ಎಲ್ಲಿಗೆ ಹೋಗಬೇಕೆಂದು ಮಾಡುರುವಿ ? "

" ದೇವರಿಗೇ ಗೊತ್ತು. ದಾರಿ ಸಿಕ್ಕತ್ತ ಹೊರಟಿದ್ದೇನೆ. "

" ಎಲ್ಲಿ ಮಲಗುತ್ತಿದ್ದಿ ? ಏನು ತಿನ್ನುತ್ತಿದ್ದಿ ? "

" ಭೂಮಿಯ ಮೇಲೆ. ಹಣ್ಣು-ಕಾಡುಹಣ್ಣು-ಹಂಪಲ, ಗಡ್ಡೆ-ಗೆಣಸು ತಿಂದು ಕಾಲಹಾಕಿದ್ದೇನೆ. "

ಇಷ್ಟರಲ್ಲಿ ಚೊಚ್ಚಿಲ ಮಗುವು ' ಅವ್ವಾ ನನ್ನ ಹೊಟ್ಟೆ ಹಸಿವು ' ಎಂದು ಚೀರಹತ್ತಿತು. ಇದನ್ನು ನೋಡಿ ನಾಯಕನು ತನ್ನ ಚೀಲದಲ್ಲಿಯ ರೊಟ್ಟಿಯನ್ನು ತೆಗೆದು ಆಕೆಯ ಕೈಯಲ್ಲಿ ಕೊಟ್ಟನು. ಆವಳು ಎರಡು ತುಣುಕುಮಾಡಿ ಒಂದೊಂದನ್ನು ಒಬ್ಬೊಬ್ಬರಿಗೆ ಕೊಟ್ಟಳು. ಆ ಹುಡುಗರು ರೊಟ್ಟಿಯನ್ನು ಗಪಗಪನೆ ತಿಂದುಬಿಟ್ಟವು.

" ಅಯ್ಯೋ, ಅವಳು ತನಗೆ ಏನೂ ಇಟ್ಟುಕೊಳ್ಳಲಿಲ್ಲವಲ್ಲ! " ಎಂದು ನಾಯಕನೆನ್ನಲಾಗಿ " ಓಹೋ ಅವಳ ಹೊಟ್ಟೆ ತುಂಬಿರಬೇಕು " ಎಂದು ಸೈನಿಕ ಎಂದನು.

" ಹಾಗಲ್ಲ, ಅವಳು ತಾಯಿ ಇದ್ದಾಳೆ. " ಎಂದು ನಾಯಕನೆನ್ನುವಷ್ಟರಲ್ಲಿ ಹುಡುಗನೊಬ್ಬನು " ಅವ್ವಾ ನೀರು " ಎಂದನು.

" ಈ ಅರಣ್ಯದಲ್ಲಿ ಹಳ್ಳಗಿಳ್ಳ ಇಲ್ಲವೇ " ಎಂದು ನಾಯಕನು ಸೈನಿಕರ ಮುಖ ನೋಡತೊಡಗಿದಾಗ, ಆ ಪರಿಚಾರಿಕೆಯು ತನ್ನ ಹತ್ತಿರಿರುವ ನೀರನ್ನು ಆ ಹುಡುಗರಿಗೆ ಕುಡಿಸಿದಳು. ನಾಯಕನ ವಿಚಾರಣೆ ಮಾತ್ರ ನಡೆಯಿತು.

" ಹುಂ, ಹೀಗೆ ಓಡಿಬಂದಿ. ಮುಂದೇನಾಯಿತು ? "

" ಅಹುದು, ಬೇರೆ ಉಪಾಯವೇ ಇರಲಿಲ್ಲ. ಎಷ್ಟು ಒತ್ತರದಿಂದ ಓಡಲು ಬಂದಿತೋ ಅಷ್ಟು ಓಡಿಬಂದೆ. ದಣಿವಾದಾಗ ನಡೆಯಹತ್ತಿದೆ. ನಡೆದೂ ಕಾಲು ಏಳಲಾರದಾಗ ಭೂಮಿಯ ಮೇಲೆ ಬಿದ್ದುಬಿಟ್ಟೆ. ನಮ್ಮ ದುರಿನಲ್ಲಿ, ಸುತ್ತುಮುತ್ತಲು ಜೊಂಬಿ ನಡೆದೇ ಇತ್ತು. ಗುಂಡುಗಳೂ ಹಾರುತ್ತಿದ್ದವು. ಜನರಿಗೆ ಬೇಕಾದುದೇನೋ ದೇವರೇ ಬಲ್ಲ ! ಅವರು ನನ್ನ ಗಂಡನನ್ನು ಕೊಂದರು. ಎಂಬುದಿಷ್ಟೇ ತಿಳಿಯಿತು. " ಎಂದು ಅವಳು ಅಳತೊಡಗಿದಳು. ಅಳುವಿನ ಆವೇಶ ಕಡಮೆಯಾದಮೇಲೆ " ನಿನ್ನೆ ರಾತ್ರಿಯಂತೂ ನಾವು ನಾಲ್ವರೂ ಒಂದು ಗಿಡದ ಹೊದರಿನಲ್ಲಿಯೇ ಕಾಲು ಕಳೆದೆವು. " ಎಂದು ಹೇಳಿದಳು

" ನಿಂತುಕೊಂಡೇ ಮಲಗಿಕೊಂಡಿರಾ ? "

" ಅಹುದು, ಹಾಗೆಯೇ ಮಾಡಬೇಕಾಯಿತು " ಎಂದು ಹೇಳಿ ನೆಲದಲ್ಲಿ ತನ್ನ ದೃಷ್ಟಿಯನ್ನಿಟ್ಟು, ಅವಳು ವಿಚಾರಮಗ್ನಳಾದಳು. ಸೈನಿಕರೆಲ್ಲರೂ ಅವಳ ಸುತ್ತುಮುತ್ತು ನಿಂತಿದ್ದರು. ನಾಯಕನು ಆಕೆಯ ಹತ್ತಿರ

ಬಂದ, ಹೊಟ್ಟೆಗೆ ತಿನ್ನುತ್ತಿದ್ದ ಕೂಸಿನ ಕಡೆಗೆ ಕಣ್ಣುಬಿಟ್ಟನು. ಆ ಕೂಸೂ ಅವನನ್ನು ಎವೆ ಪಿಳುಕಿಸದೆ ನೋಡತೊಡಗಿತು.

ನಾಯಕನು ತನ್ನ ದೃಷ್ಟಿಯನ್ನು ಬೇರೆ ಕಡೆಗೆ ಹೊರಳಿಸಿ, ಕಣ್ಣು ತುಂಬ ಬಂದ ನೀರನ್ನು ಒರೆಸಿಕೊಂಡು "ಗೆಳೆಯರೇ, ಅಕಸ್ಮಾತ್ ಸಂಭವಿಸಿದ ಈ ಘಟನೆಯಿಂದ ನನಗೆ ಕಂಡುಬಂದದ್ದೇನೆಂದರೆ ನಮ್ಮ ಈ ತಂಡವು ಬೇಗನೆ ಪಿತೃಪದವಿಗೆ ಏರಬಹುದೆಂದು. ಇದು ತಮಗೆ ಒಪ್ಪಿಗೆಯಾಗುವದೆಂದು ಭಾವಿಸಿದ್ದೇನೆ. ನಾವು ಈ ಮೂರೂ ಮಗುಗಳನ್ನು ದತ್ತಕ ತೆಗೆದುಕೊಂಡು ಇವರನ್ನು ಜೋಕೆ ಮಾಡೋಣ" ವೆಂದು ಹೇಳಿದನು.

"ಪ್ರಜಾಪಕ್ಷಕ್ಕೆ ಜಯವಾಗಲಿ" ಎಂದು ಸೈನಿಕರೆಲ್ಲರೂ ಘೋಷಣೆ ಮಾಡಿದರು.

"ಹಾಗಾದರೆ ನನ್ನ ಸೂಚನೆ ತಮಗೆ ಮಾನ್ಯವಾಯಿತು" ಎಂದೆಂದು ಆ ನಾಯಕನು ತನ್ನ ಎರಡೂ ಕೈಗಳನ್ನು ಆ ತಾಯಿ-ಮಕ್ಕಳ ತಲೆಯ ಮೇಲಿಟ್ಟು "ಈ ಸೈನಿಕ ತಂಡವು ಇಂದಿನಿಂದ ಈ ಹುಡುಗರನ್ನು ತಮ್ಮ ಮಕ್ಕಳೆಂದು ಭಾವಿಸುತ್ತದೆ" ಎಂದು ಕೂಗಿದನು. ಆ ಪರಿಚಾರಿಕೆಗೆ ಇದೆಲ್ಲ ಪ್ರಸಂಗವನ್ನು ಕಂಡು ಬಲು ಆನಂದವಾಯಿತು. ಅವಳ ಕಣ್ಣುಗಳಿಂದಲೂ ಆನಂದಬಾಷ್ಪಗಳುದುರತೊಡಗಿದವು. ಅವಳು ಆ ಆನಂದಭರದಲ್ಲಿ ಆ ಸ್ತ್ರೀಯನ್ನು ತಬ್ಬಿಕೊಂಡು "ನೋಡು ಈ ಸಣ್ಣ ಕೂಸು ಎಷ್ಟು ಮುದ್ದು ಮುದ್ದಾಗಿದೆ" ಎಂದು ಉದ್ಗಾರ ತೆಗೆದಳು.

ಸೈನಿಕರ ತಂಡವು 'ಪ್ರಜಾಪಕ್ಷಕ್ಕೆ ಜಯವಾಗಲಿ' ಎಂದು ಮೂರು ಬಾರಿ ಜಯಘೋಷ ಮಾಡಿ, ಆ ಹೆಣ್ಣುಮಗಳಿಗೆ ತಮ್ಮೊಡನೆ ಬರಬೇಕೆಂದು ಹೇಳಿ ಮುಂದೆ ಮಾರ್ಗಕ್ರಮಣ ಮಾಡಿತು.

---

## ೨.

ವಸಂತಋತುವಿನ ಒಂದು ಸಾಯಂಕಾಲ. ನಾಲ್ಕೂಕಡೆಗೂ ಹೊಗೆ ಮುಸುಕಿದೆ. ಇಂಗ್ಲಂಡದ ಸಮೀಪದಲ್ಲಿಯ ಒಂದು ಒತ್ತಿನಿಂದ ಸಣ್ಣ ಹಡಗವೊಂದು ಪ್ರಯಾಣ ಹೊರಡುವ ಸಿದ್ಧತೆಯಲ್ಲಿದೆ. ಅದರ ಮೇಲೆ ಫ್ರೆಂಚರ ಧ್ವಜ ಫಡಫಡಿಸುತ್ತಿದೆ. ಮೇಲ್ನೋಟಕ್ಕೆ ಅದು ವ್ಯಾಪಾರೀ ಹಡಗವೆಂದು ಕಾಣಬರುತ್ತಿದ್ದರು, ತೋಫು-ಬಂದೂಕು-ಮದ್ದುಗಳಿಂದ ಸಜ್ಜಾದ ಯುದ್ಧದ ಹಡಗವಾಗಿತ್ತು. ತೋಫನ್ನು ಮಾತ್ರ ಇಂದು ಮೇಲ್ಭಾಗ ದಲ್ಲಿಟ್ಟು ಅದನ್ನು ಕಬ್ಬಿಣದ ಮೂರು ದೊಡ್ಡ ಸರಪಣಿಗಳಿಂದ ಗಟ್ಟಿ ಮುಟ್ಟೆಯಾಗಿ ಕಟ್ಟಲಾಗಿತ್ತು. ಇದು ಯುದ್ಧದ ಹಡಗವೆಂದು ತಿಳಿಯ ಬರದಂತೆ ಈ ತೋಫನ್ನು ಮುಚ್ಚಲಾಗಿತ್ತು. ಈ ಹಡಗದಲ್ಲಿಯ ಜನರಲ್ಲಿ ಕೆಲವರು ಫ್ರಾನ್ಸದಲ್ಲಿಯ ಅಧಿಕಾರಿಗಳಿದ್ದು ಅವರು ದೇಶಾಂತರ ಮಾಡು ತ್ತಿದ್ದರು. ಉಳಿದವರಲ್ಲಿ ಕೆಲವರು ಹಡಗದಲ್ಲಿಯ ಕೆಲಸಕ್ಕೆ ತಿಲಾಂಜಲಿ ಬಿಟ್ಟು ಓಡಿಹೋಗುವಂಥವರಾಗಿದ್ದರು. ಆದರೂ ಎಲ್ಲರೂ ನಿಷ್ಣಾತನಾವಾ ಡಿಗಳೂ, ನುರಿತ ಸೈನಿಕರೂ ಆಗಿದ್ದು ರಾಜನಿಷ್ಠರಾಗಿದ್ದರು. ಹಡಗದ ಮುಖ್ಯಸ್ಥನ ಹೆಸರು ಕೌಂಟಬೋಯಿವರಥೇಲೋ. ಅವನ ಕೈಕೆಳಗಿನವರ ಹೆಸರು ವ್ಯೂವಿಲೆ ಎಂದಿತ್ತು. ಈ ಹಡಗವು ಯಾವುದೋ ಒಂದು ವಿಶಿಷ್ಟವಾದ ಕೆಲಸಕ್ಕಾಗಿ ಹೊರಟಿತ್ತೆಂಬದರಲ್ಲಿ ಯಾವ ಸಂಶಯವೂ ಇರಲಿಲ್ಲ.

ಈ ಹಡಗದ ಮೇಲೆ ಅದೇ ಒಬ್ಬ ಮನುಷ್ಯನು ಹತ್ತಿದ್ದನು. ಅವನ ಮುಖಚರ್ಯೆಗಳು ಅವನು ಸಾಮಾನ್ಯ ಮನುಷ್ಯನಲ್ಲವೆಂದು ಹೇಳುತ್ತಿದ್ದವು. ಆತನು ಆಜಾನುಬಾಹುಃ; ವಯಸೂ ಆದವನು. ಆದರೂ ಅವನ ಶರೀರ ಪ್ರಕೃತಿಯು ಸದೃಢವಾದುದು. ಅವನ ಮುಖಮುದ್ರೆಯು ಗಂಭೀರವಾ ಗಿತ್ತು. ಅವನಲ್ಲಿ ತಾರುಣ್ಯದ ಉಕ್ಕೂ ಮುಪ್ಪಿನ ಕಳೆಯೂ ತಲೆದೋರದ ಮಿಃಶ್ರಣವು ಎದು-ಕಾಣುತ್ತಿದ್ದುದರಿಂದ ಅವನಿಗೆ ಆದ ವಯಸ್ಸೆಷ್ಟೆಂಬಬು

ತಿಳಿಯುವಂತಿರಲಿಲ್ಲ. ಶಕ್ತಿಯ ದೃಷ್ಟಿಯಿಂದ ಅವನ ವಯಸು ೪೦ ಆಗಿರ
ಬೇಕೆಂದೆನಿಸುವದು. ಆದರೆ ಬುದ್ಧಿ ಮತ್ತು ಅನುಭವಗಳ ಮೇಲಿಂದ
ಹೇಳಬೇಕಾದರೆ ಅವನಿಗೆ ೬೦ ಆಗಿರಬೇಕೆಂದು ತೋರುವದು. ಅವನ
ಉಡುಪು ತೀರ ಸಾದಾ-ಬಡ ಒಕ್ಕಲಿಗನ ಉಡುಪಿನಂತಿತ್ತು. ಅದೂ ಅಲ್ಲಲ್ಲಿ
ಹರಿಹರಿದು ಚಿಂದಿಯಾಗಿತ್ತು. ಒಂದು ದೊಡ್ಡ ನಿಲುವಂಗಿಯೂ ಇತ್ತು.
ಅದೂ ಕೂಡ ಭಿಕ್ಷುಕರು ಒಕ್ಕೊಟ್ಟ ಬಟ್ಟೆಯಿಂದ ಹೊಲಿದಿರುವಂತಿತ್ತು.
ತಲೆಯ ಮೇಲೊಂದು ಟೊಪ್ಪಿಗೆ. ಅದೂ ಅಂಥದೇ. ಅದರಲ್ಲಿಯೇ
ಸೈನಿಕನ ಬಿಲ್ಲಿಯೂ ಇತ್ತು.

ಅವನು ಕಾಣಿಸುವಷ್ಟು ಬಿಕ್ಕೆ ಬೇಡುವವನಿರಲಿಲ್ಲ. ಯಾಕೆಂದರೆ
ಹಡಗದ ವರೆಗೆ ಅವನನ್ನು ಕಳುಹಬಂದವರು ಅಲ್ಲಿಯ ವರಿಷ್ಠ ಅಧಿಕಾರಿ
ಗಳೂ, ರಾಜಪುತ್ರರೂ ಆಗಿದ್ದರು. ಆ ಅಧಿಕಾರಿಗಳು ಹೋಗಿಬರುತ್ತೇ
ವೆಂದು ಹೇಳುವಾಗ ಅವನಿಗೆ ಸೇನಾಪತಿಯೆಂದೂ ರಾಜಪುತ್ರರು ಬಂಧು
ವರ್ಗದವನೆಂದೂ ಸಂಬೋಧಿಸಿದರು. ಅವನು ಹಡಗವನ್ನೇರಿದ ತುಸು
ಹೊತ್ತಿನಲ್ಲಿಯೇ ಆ ಹಡಗವು ಹೊರಟು ಕತ್ತಲೆಯಲ್ಲಿ ಮಟಾಮಾಯ
ವಾಯಿತು. ಹಡಗವು ಹೊರಟ ಒಂದು ತಾಸಿನ ಮೇಲೆ ಇಂಗ್ಲಂಡದಲ್ಲಿಯ
ರಾಜಪಕ್ಷದ ಜನರಿಗೆ “ ಮಹಾರಾಜರು ಹೊರಟರು. ಯಶವು ಕಟ್ಟಿಟ್ಟಿದ್ದು.
ಎಂಟೇ ದಿನಗಳಲ್ಲಿ ಸಮುದ್ರ ದಂಡೆಯ ಮೇಲಿನ ಭಾಗವೆಲ್ಲವೂ ಸುಟ್ಟು
ಬೂದಿಯಾಗುವದು ” ಎಂದು ಗುಪ್ತಚಾರರ ಮುಖಾಂತರವಾಗಿ ಜಾಹೀರು
ಪಡಿಸಲಾಯಿತು.

   

ಈ ಗುಪ್ತಕಾರಸ್ಥಾನದ ನಾಲ್ಕು ದಿವಸ ಮೊದಲೇ ಇನ್ನೊಬ್ಬ ಗುಪ್ತ
ಚಾರನು ಪ್ರಜಾಪಕ್ಷದ ಅಧಿಕಾರಿಗಳಿಗೆ “ ಇಲ್ಲಿಂದ ವ್ಯಾಪಾರಿ ಹಡಗದ
ಸೋಗಿನಿಂದ ಒಂದು ಯುದ್ಧದ ಹಡಗವು ಒಬ್ಬ ಮನುಷ್ಯನನ್ನು ಫ್ರಾನ್ಸದ
ದಂಡೆಯ ಮೇಲೆ ಇಳಿಸುವದಕ್ಕಾಗಿ ಸಮುದ್ರದ ಭರತಿಯ ವೇಳೆಯಲ್ಲಿಯೇ
ಹೋಡುವದಿದೆ. ಆ ಮನುಷ್ಯನು ದೊಡ್ಡ ಆಳು, ಮುದುಕ, ಬಿಳಿಗೂದಲು,

ಒಕ್ಕಲಿಗನ ಉಡುಪಿನಲ್ಲಿದ್ದಾನೆ. ಹೆಚ್ಚಿನ ವಿವರಗಳನ್ನು ನಾಳಿಗೆ ಕಳುಹಲಾಗುವದು. ಅವನು ಅಲ್ಲಿಗೆ ಜೂನ ೨ ನೇ ತಾರೀಖಿಗೆ ತಲುಪಬಹುದು. ನಿಮ್ಮ ಹಡಗು ಸಿದ್ಧವಾಗಿರಲಿ. ಆ ಹಡಗವನ್ನು ಹಿಡಿದು, ಆ ಮನುಷ್ಯನಿಗೆ ಫಾಶೀ ಕೊಡಿರಿ. " ಎಂದು ಒಂದು ಪತ್ರವನ್ನು ಕಳಿಸಿದ್ದನು.

★ ★ ★ ★

ಅಂದಿನ ರಾತ್ರಿ ತೀರ ಕತ್ತಲಾಗಿದ್ದಿತ್ತು. ಆಕಾಶದಲ್ಲಿ ಮೋಡಗಳೂ ಎದ್ದಿದ್ದವು. ಹಡಗವು ಫ್ರಾನ್ಸದ ದಂಡೆಯ ಮಾರ್ಗ ಹಿಡಿದು ಸಾಗಿತ್ತು. ೯ ಗಂಟೆಯ ಸುಮಾರಿಗೆ ಗಾಳಿ ಜೋರಿನಿಂದ ಬೀಸತೊಡಗಿತು. ಸಮುದ್ರದ ತೆರೆಗಳು ಆನೆಗಳೋಪಾದಿಯಲ್ಲಿ ಅಪ್ಪಳಿಸುತ್ತಿದ್ದವು. ಹೊಗೆಮಂಜು ದಟ್ಟವಾಗುತ್ತ ನಡೆದಿದೆ. ಗುಪ್ತವಾಗಿ ಹೊರಟ ಈ ಹಡಗದ ಪ್ರಯಾಣಕ್ಕೆ ಇಲ್ಲ ಪರಿಸ್ಥಿತಿ ಅನುಕೂಲವೇ ಆಗಿತ್ತು. ಆ ಮುದುಕನು ತನ್ನ ಸ್ಥಳದಲ್ಲಿಯೇ ಅತ್ತಿಂದಿತ್ತ ತಿರುಗಾಡುತ್ತಿದ್ದನು. ಅವನು ಯಾರೊಡನೆಯೂ ಮಾತನಾಡುತ್ತಿದ್ದಿಲ್ಲ. ಮಾತಾಡಿದರೆ ಕಪ್ತಾನನೊಡನೆ ಮಾತ್ರ; ಅದೂ ಒಂದೆರಡೇ ಶಬ್ದ. ಹತ್ತುಗಂಟೆಯ ಸುಮಾರಿಗೆ ತನ್ನ ಕೋಣೆಯೊಳಗೆ ಹೋಗುವಾಗ ಆ ಕಪ್ತಾನರಿಬ್ಬರನ್ನೂ ಕರೆದು " ನಿಮಗೆ ವಹಿಸಿಕೊಟ್ಟ ಗುಪ್ತಕಾರಸ್ಥಾನವು ಬಹಳ ಮಹತ್ವದ್ದಿದೆ. ಈ ಸುದ್ದಿಯ ಸದ್ದು ಯಾರಿಗೂ ತಿಳಿಯಲಾಗದು. ನಿಮ್ಮಿಬ್ಬರನ್ನು ಬಿಟ್ಟು ಮೂರನೆಯವರಾರಿಗೂ ಇದು ಗೊತ್ತಿಲ್ಲ. ಕಾರಣ ಬಾಯಿಗೆ ಬೀಗ ಜಡಿದುಕೊಂಡಿರಬೇಕು. " ಎಂದು ಹೇಳಿದನ .

" ಜೀವ ಹೋದರೂ ನಾವು ಒಂದು ಅಕ್ಷರವನ್ನಾದರೂ ಯಾರ ಮುಂದೆಯೂ ಹೇಳುವದಿಲ್ಲ " ಎಂದು ಕಪ್ತಾನನು ಉತ್ತರವಿತ್ತನು ಅದನ್ನು ಕೇಳಿಕೊಂಡು ಆ ಮುದುಕನು ಕೋಣೆಯೊಳಹೊಕ್ಕನು. ಇತ್ತ ಕಪ್ತಾನನೂ ಅವನ ಸಹಾಯಕನೂ ಅತ್ತಿತ್ತ ಅಲೆದಾಡತೊಡಗಿ ಅವನ ಬಗ್ಗೆ ಮಾತಾಡತೊಡಗಿದರು. ಕಪ್ತಾನನೆಂದನು:—" ಈ ಮನುಷ್ಯನು ಮುಂದಾಳುವಾಗಲು ಯೋಗ್ಯನಿರುವನೋ ಇಲ್ಲವೊ ? "

“ ಓಹೋ, ಇರದೆಯೇನು ? ಅವನು ರಾಜಪುತ್ರನೇ ಇರುತ್ತಾನೆ.”

“ ನಿಜವಾಗಿಯೇ ರಾಜಕುಮಾರನಂತಯೇ ಇರುತ್ತಾನೆ ”

“ ಅವನು ಫ್ರಾನ್ಸದ ಸರದಾರನು. ಆದರೂ ಬ್ರಿಟನ್ನಿನ ರಾಜಪುತ್ರನಾಗಿದ್ದಾನೆ ”

“ ಫ್ರಾನ್ಸದ ಸರದಾರನು ಬ್ರಿಟನ್ನಿನ ರಾಜನಾಗುತ್ತಾನೆನ್ನು ಅಂದರೆ ನಾನೂ, ನೀನೂ ಅಲ್ಲಿಯ ದೊಡ್ಡ ಮನುಷ್ಯರಾಗಲು ಯಾವ ಆತಂಕವಿದೆ?”

“ ಯಾವುದೂ ಇಲ್ಲ. ”

“ ಆದರೆ ಫ್ರಾನ್ಸದಲ್ಲಿ ರಾಜಪುತ್ರರಿಗೆ ಇಷ್ಟೊಂದು ಕೊರತೆ ಆಗಿದೆಯೇ? ಬ್ರಿಟನ್ನಿನ ರಾಜಪುತ್ರರ ಸಲುವಾಗಿ ಓಡಾಡುತ್ತಿದ್ದಾರೆ ? ”

“ ಮಾಡುತ್ತಾರೇನು? ವೇಳೆಯೇ ಹಾಗೆ ಬಂದಿದೆ. ಹಾಲಿನ ಹಸಿವೆಯನ್ನು ಮಜ್ಜಿಗೆಯ ಮೇಲೆ ತೀರಿಸಬೇಕಾಗುತ್ತದೆ.”

“ ಇದೇನೋ ನನಗೆ ಒಪ್ಪದ ಮಾತು. ಇಷ್ಟು ದೊಡ್ಡ ದೊಡ್ಡ ಸರದಾರರಿದ್ದಾರೆ. ಅವರೆಲ್ಲರೂ ಬಾತಿಗೆ ಬಾರದವರಾಗಿದ್ದಾರೆಯೇ?”

“ ಹೌದೆಂದೇ ಹೇಗಾಗಿದೆ. ನನಗೆ ಎಲ್ಲರ ಪರಿಚಯವಿದೆ. ಆದರೆ ಈ ಹೊತ್ತಿಗೆ ಎಲ್ಲರೂ ನಿರುಪಯೋಗಿಗಳೇ. ಈ ವೆಂಡಿಯ ಶಾಪಗ್ರಸ್ತ ಭೂಮಿಯಲ್ಲಿ ಶೂರನೂ, ಕಾರಸ್ಥಾನಿಯೂ ಆದಂಥವನ ಆವಶ್ಯಕತೆಯಿದೆ. ಶತ್ರುಗಳ ಸಮೂಲ ನಾಶ ಮಾಡಬಲ್ಲ ವೀರಾಗ್ರಣಿ ಬೇಕಾಗಿದ್ದಾನೆ. ವೆಂಡಿಯ ಸೈನಿಕರೊಳಗೆ ಅನೇಕ ಶೂರರಿದ್ದಾರೆ. ಆದರೆ ಯಾರಲ್ಲಿಯೂ ಮುಂದಾಳಾಗಬಲ್ಲ ಗುಣಗಳಿಲ್ಲ. ಇದ್ದಂಥ ಸೈನ್ಯವನ್ನು ತನ್ನ ಅಂಕಿತದಲ್ಲಿಟ್ಟುಕೊಂಡು, ಅವರನ್ನು ಸಂಘಟಿಸಿಕೊಂಡು, ಅವರಲ್ಲಿ ಹುರುಪು ತುಂಬಿ ಹೋರಾಡುವ ಹಿರಿಹುದ್ದರಿಯು ಬೇಕಾಗಿದ್ದಾನೆ. ಕೀಳು ದರ್ಜೆಯ ಜನರೇ ಇಂದು ಮುಂದಾಗಿದ್ದಾರೆ. ಅಂಥವರ ಪ್ರೌಢಿಯ ಮೆರವಣಿಗೆಯೇ ನಡೆದಿದೆ. ಗಸ್ಟನ್ ಎಂಬ ನೆನೆಯಬಾರದವನೊಬ್ಬನು ಮಹತ್ವದ ಸ್ಥಾನದಲ್ಲಿ ಮಂಡಿಸಿದ್ದಾನೆ. ಇಂಥವರ ಅಧಿಕಾರವೆ ಸಭ್ಯಗ್ರಹಸ್ಥರ ಮೇಲೆ ನಡೆಯಿತೆಂದರೆ ಕ್ರಾಂತಿಕಾರಕ

ಜನರೊಡನೆ ಹೊಡೆದಾಡುವದರಿಂದಾಗುವ ಲಾಭವಾದರೂ ಏನು? ನಮ್ಮ ಮತ್ತು ಅವರ ನಡುವೆ ಯಾವ ಭೇದವುಳಿಯಿತು? ”

“ ಆದರೆ ಅವರು ಕೀಳು ದರ್ಜೆಯವರಿರುವದರಿಂದ ಏನಾಯಿತು? ಅವರಲ್ಲಿಯೇ ಒಳ್ಳೆ ಜನರು ಇರುವದಿಲ್ಲೆಂದು ಯಾತರ ಮೇಲೆ ಹೇಳುತ್ತೀ? ಈ ಗಸ್ಟವನನ್ನೇ ತೆಗೆದುಕೊಳ್ಳೋಣ. ಜಾತಿಯಿಂದ ನಾಪಿಕನಾದರೂ ಎಷ್ಟು ಒಳ್ಳೆಯವನಾಗಿದ್ದಾನೆ! ಒಂದೇ ಏಟಿಗೆ ಮೂರು ಸೈನಿಕರನ್ನು ಹೇಗೆ ಯಮಸದನಕ್ಕೆ ಅಟ್ಟಿದ್ದನ್ನು ನೋಡಲಿಲ್ಲವೇ ? ”

“ ಹಂ, ಅದೇನು ದೊಡ್ಡ ಮಾತು, ಬಿಡು. ನಾನೂ ಹಾಗೆ ಮಾಡಬಹುದಾಗಿತ್ತು. ಆದರೆ ಯುದ್ಧವನ್ನು ಮಾಡುವವರೆಂದರೆ ಸರದಾರರೇ ಸೈ. ಕೂದಲು ಕತ್ತರಿಸುವವರಿಗೇನು ಗೊತ್ತಾಗುತ್ತದೆ ? ”

“ ನಿನ್ನ ಮಾತಿನ ಅರ್ಥವೇ ನನಗಾಗದು. ಸರದಾರರಿಗೇ ದೇವರು ಯುದ್ಧಮಾಡುವ ಜನ್ಮಸಿದ್ಧ ಹಕ್ಕನ್ನು ಕೊಟ್ಟಿಲ್ಲ. ಜಾತಿಗಿಂತಲೂ ಗುಣಗಳಿಗೇ ಹೆಚ್ಚು ಬೆಲೆಯಿದೆ. ಇನ್ನೊಂದು ಉದಾಹರಣೆಯಿದೆ ನೋಡು. ಒಬ್ಬ ಸಾದಾ ಸೈನಿಕನು; ಮುಂದೆ ನಾಯಕನಾದನು. ಅವನಿಗೊಬ್ಬ ಮಗನಿದ್ದಾನೆ. ಅವನ ತಂದೆಯ ವಿರುದ್ಧ ಪ್ರಜಾಪಕ್ಷದಲ್ಲಿ ಸೇರಿಕೊಂಡನು. ಮುಂದೊಂದು ದಿನ ರಣಾಂಗಣದಲ್ಲಿ ಅವರಿಬ್ಬರಿಗೂ ಗಂಟುಬಿತ್ತು. ತಂದೆಯ ಕೈಯೇ ಮೇಲಾಯ್ತು. ಮಗನನ್ನು ಬಂಧಿಸಿ, ಅವನ ಚಂಡನ್ನೇ ಹಾರಿಸಿದನು. ಅವನ ದೇಶಭಕ್ತಿ ಎಷ್ಟು ಉಜ್ವಲವಾಗಿದೆ ನೋಡು! ಹೊಟ್ಟೆಯ ಮಗನ ಜೀವವನ್ನು ತೆಗೆದುಕೊಳ್ಳಲು ಸಹ ಅವನೇನು ಹಿಂದೆ ಮುಂದೆ ನೋಡಲಿಲ್ಲ. ಇಂಥವನ ಗುಣಗೌರವವನ್ನು ಎಷ್ಟು ಮಾಡಿದರೂ ಕಡಮೆಯೆ ಅಲ್ಲವೇ ? ”

“ ನಿಜವಾಗಿಯೆ ಅವನಿಗೆ ಧನ್ಯವಾದಗಳು ಸಲ್ಲಬೇಕಾದುದು. ”

“ ಹೀಗೆ ನಮ್ಮ ಕಡೆಗೆ ಕೀಳು ದರ್ಜೆಯವರಿದ್ದಂತೆ ಅವರ ಕಡೆಗೆ ಸರದಾರರಿರುತ್ತಾರೆ. ಒಟ್ಟಿನಲ್ಲಿ ಇಬ್ಬರಿಗೂ ಸಮಾಧಾನವಾಗುವ ಅವಕಾಶವೇ ಇಲ್ಲ. ”

ಈ ಪ್ರಕಾರ ಅವರ ಸಂಭಾಷಣ ಸಾಗಿದಾಗ ಒಮ್ಮಿಂದೊಮ್ಮೆಲೆ ದೊಡ್ಡದೊಂದು ಸಪ್ಪುಳ ಕೇಳಬಂದಿತು. ಕೂಗೂ ಎದ್ದಿತು. ಭೀತಿಪ್ರದವಾದ ವಾತಾವರಣವೆ ಉಂಟಾಯಿತು. ಈ ಸಪ್ಪುಳವು ಹಡಗದ ಮಧ್ಯಭಾಗ ದಿಂದ ಕೇಳಬರುತ್ತಲಿತ್ತು.

ಕಪ್ತಾನನೂ, ಅವನ ಸಂಗಡಿಗನೂ ಏನಾಯಿತೆಂಬದನ್ನು ನೋಡಲು ಕೆಳಗಿಳಿಯುತ್ತಿರುವಾಗ ಹೆದರಿದ ನಾವಿಕರೂ, ಸೈನಿಕರೂ ಮೇಲೇರ ತೊಡಗಿದ್ದದನ್ನು ಕಂಡು ಏನೋ ಅಪಘಾತ ಸಂಭವಿಸಿದೆಯೆಂದು ಅವರಿಗೆ ಕಂಡುಬಂದಿತು. ತೋಫುಖಾನೆಯಲ್ಲಿಯ ಒಂದು ತೋಫಿಗೆ ಬಿಗಿ ದಿದ್ದ ಕಬ್ಬಿಣದ ಸರಪಳಿಗಳು ಬಿಚ್ಚಿದ್ದರಿಂದ, ಅದು ಅತ್ತಿತ್ತ ಅಲುಗಾಡ ಹತ್ತಿ ಇಡೀ ಹಡಗಕ್ಕೇ ತೊಂದರೆಯುಂಟಾಗಿತ್ತು. ನಡು ಕಡಲಲ್ಲಿ ಹಡಗು ಕಡು ವೇಗದಿಂದ ಓಡಹತ್ತಿದೆ. ಇಂಥದರಲ್ಲಿ ಈ ತೋಫಿನಿಂದುಂಟಾದ ಆಪತ್ತಿಯೇನು ಸಾಮಾನ್ಯವೆ ? ಗಾಳಿಯಿಂದ ತೆರೆಗಳೇಳುತ್ತವೆ, ತೆರೆಗಳಿಂದ ಹಡಗು ಹೊಯ್ದಾಡಹತ್ತುತ್ತದೆ. ಹಡಗದ ಹೊಯ್ದಾಟದಿಂದ ಆ ತೋಫು ಅತ್ತಿತ್ತ ಸರಿದಾಡುತ್ತಿದೆ. ಅದರಿಂದ ಅಲ್ಲಲ್ಲಿ ಧಕ್ಕಿಯಾಗುತ್ತದೆ. ಇದರಿಂದ ಆ ತೋಫಿನ ಹರದಾಟವೂ ಚಲ್ಲಾಟವೂ ಮತ್ತಿಷ್ಟು ಹೆಚ್ಚಾಗುತ್ತಲೇ ಇತ್ತು. ಹಡಗಕ್ಕೆ ಕುತ್ತಾಗಿರುವ ಈ ತೋಫಿನ ಆರ್ಭಟವನ್ನು ಹೇಗೆ ನಿಲ್ಲಿಸ ಬೇಕೆಂಬುದೇ ಅವರಾರಿಗೂ ಹೊಳೆಯದಾಗಿತ್ತು. ಎಲ್ಲರೂ ಹೌಹಾರಿ ಹೋಗಿದ್ದರು.

ಈ ಗದ್ದಲದಿಂದ ಭ್ರಾಂತರಾದ ನಾವಿಕರೆಲ್ಲರೂ ಅಲ್ಲಿಗೆ ಧಾವಿಸಿದರು. ಈ ಪ್ರಸಂಗವು ಮುಖ್ಯ ನಾವಾಡಿಗನ ದುರ್ಲಕ್ಷತೆಯಿಂದ ಉದ್ಭೂತ ವಾಗಿತ್ತು. ಈ ತೋಫನ್ನು ಬಿಗಿಯುವಾಗ ಸರಪಣಿಗಳನ್ನು ಬಿಗಿಯಾಗಿ ಕಟ್ಟಿರಲಿಲ್ಲ. ಗಾಲಿಗಳೂ ಸೈಲಾಗಿಯೇ ಕಟ್ಟಲ್ಪಟ್ಟಿದ್ದವು. ಈಗಿನಂಥ ಸೌಕರ್ಯಗಳು ಆಗ ಇರಲಿಲ್ಲವೆಂದೇ ಈ ಅನಾಹುತಕ್ಕೀಡಾಗಬೇಕಾಯಿತು.

ಹಡಗದ ವೇಗವು ಕಡಿಮೆಯಾಗಿರಲಿಲ್ಲ. ಅಷ್ಟರಲ್ಲಿಯೇ ಒಂದು ಪ್ರಚಂಡವಾದ ತೆರೆಯು ಹಡಗಕ್ಕೆ ಅಪ್ಪಳಿಸಿತು. ತೋಫು ಹೊಡಮರಳಿತು. ಹತಭಾಗ್ಯನೊಬ್ಬನ ಆಹುತಿಯಾಯಿತು. ಇನ್ನೊಂದು ತೋಫಿಗೆ

ಹೋಗಿ ಅಪ್ಪಳಿಸಿತು. ಚೀರಾಟ ಹೆಚ್ಚಾಯಿತು. ಕೆಳಗಿದ್ದವರು ಜೀವ ವುಳಿಸಿ ಕೊಳ್ಳಲು ಮೇಲೇರಲು ಧಾವಿಸಿದರು. ಕೆಳಗಿನ ಭಾಗದಲ್ಲಿ ಒಂದು ನರಪ್ರಾಣಿಯೂ ಉಳಿಯಲಿಲ್ಲ. ತೋಫಿನ ಹೊಯ್ದಾಟಕ್ಕೆ ಆತಂಕವೆ ಉಳಿಯದಾಯಿತು. ಕಾಳಗದಲ್ಲಿ ಒಬ್ಬರೊಬ್ಬರ ಪ್ರಾಣ ಹೀರುತ್ತಿರುವಾಗ ನಗುತ್ತಿದ್ದ ಸೈನಿಕರು ಗದಗುಟ್ಟಿ ನಡುಗತೊಡಗಿದರು. ಕಪ್ತಾನನೂ ಅವನ ಸಂಗಡಿಗರೂ ದಿಕ್ಕುತೋಚದೆ ನಿಂತುಬಿಟ್ಟರು. ಅವರ ಮುಖಗಳು ಕಪ್ಪಿಟ್ಟಿ ದ್ದವು. ಆ ಒಕ್ಕಲಿನ ಉಡುಪಿನವನು ಎಂಥ ಪ್ರಸಂಗಕ್ಕೂ ಹೆದರದವ ನಾಗಿದ್ದನು. ಅವನು ಎದೆಗುಂದದೆ ಏನಾಯಿತೆಂಬದನ್ನು ನೋಡಲು ಬಂದು ಅಲ್ಲಿ ನಿಂತುಬಿಟ್ಟನು.

ಆ ತೋಫಿನ ವಿಧ್ವಂಸಕ ಕಾರ್ಯವು ನಡೆದೇ ಇತ್ತು. ಇಷ್ಟರಲ್ಲಿಯೇ ಅದು ಇನ್ನೂ ನಾಲ್ಕು ತೋಫುಗಳನ್ನು ಸ್ಥಾನಭ್ರಷ್ಟ ಮಾಡಿತ್ತು. ಒಂದೆ ರಡು ಕಡೆಯಲ್ಲಿ ಹಡಗದ ಹೊರಬದಿಯ ಹಲಿಗೆಗಳು ಮುರಿದಿದ್ದವು. ಸುದೈ ವದಿಂದ ಮೇಲ್ಭಾಗದ ಹಲಿಗೆಗಳು ಮುರಿದಿದ್ದರಿಂದ ಹಡಗವು ಜಲಸಮಾಧಿ ಹೊಂದಲಿಲ್ಲ. ಅದರ ಬುಡಕ್ಕೆ ಸಿಕ್ಕು ಸತ್ತುಬಿದ್ದವರ ದೇಹದ ತುಂಡುಗಳು ಚೂರುಚೂರಾಗಿ ಹಾರಾಡುತ್ತಿದ್ದವು.

ತುಸು ಹೊತ್ತು ಕಳೆದನಂತರ ಕಪ್ತಾನನಿಗೆ ಎಚ್ಚರವುಂಟಾಯಿತು. ತೋಫನ್ನು ಒಂದೇ ಕಡೆಗೆ ತಡೆಹಿಡಿಯುವದಕ್ಕಾಗಿ ಕೈಗೆ ಸಿಗುವದೆಲ್ಲ ವನ್ನೂ ಆಸರವಾಗಿ ಒಗೆಯಲು ಆಜ್ಞೆಮಾಡಿದನು. ಯುದ್ಧದ ಹಡಗದಲ್ಲಿ ಅಂಥ ಬಾತಿಗೆಬಾರದ ಸಾಮಾನಾದರೂ ಏನಿರಬೇಕು ? ನಾವಿಕರು ಹಗ್ಗ, ಚೀಲ, ತಟ್ಟು ಮೊದಲಾದ ಸಾಮಾನುಗಳನ್ನು ಒಗೆದರು. ಮೇಲೆ ನಿಂತು ಸಾಮಾನು ಒಗೆದದ್ದರಿಂದ ಅವು ಅವ್ಯವಸ್ಥಿತವಾಗಿ ಬಿದ್ದುದರಿಂದ ಎಷ್ಟು ಉಪಯೋಗವಾಗಬೇಕಿತ್ತೋ ಅಷ್ಟಾಗಲಿಲ್ಲ. ಕೆಳಗೆ ಹೋಗಿ ಅದಕ್ಕೆ ಅಡ್ಡಿ ಯಾಗುವಂತೆ ಸರಿಯಾಗಿ ಅಡುವು ಕೊಟ್ಟಿದ್ದರೆ ಅದು ಒಂದು ಕಡೆಗೆ ನಿಲ್ಲ ಬಹುದಿತ್ತು. ಆದರೆ ಹಾಗೆ ಮಾಡಲು ಯಾರಿಗೂ ಧೈರ್ಯವಿರಲಿಲ್ಲ. ಅಲ್ಪ ವೇಳೆಯಲ್ಲಿಯೇ ಆ ಸಾಮಾನುಗಳೆಲ್ಲವೂ ಚೂರುಚೂರಾದವು. ತೋಫು ಅಪ್ಪಳಿಸುತ್ತಿರುವದರಿಂದ ಹಡಗಕ್ಕೆ ಧಕ್ಕೆ ತಗಲಿ ತೂತು ಬಿದ್ದಿತು. ನೀರು

ಒಳಗೆ ಬರಹತ್ತಿತು. ೩೦ ತೋಫುಗಳಲ್ಲಿ ೧೦ ತೋಫುಗಳು ಕೆಲಸಕ್ಕೆ ಬಾರದಾದವು.

ಆ ಮುದುಕನು ಕೆಳಗಿಳಿದು ಎಲ್ಲವನ್ನೂ ಸೂಕ್ಷ್ಮವಾಗಿ ನಿರೀಕ್ಷಿಸಿದನು. ಹೀಗೆಯೆ ಇನ್ನೂ ಸ್ವಲ್ಪ ಹೊತ್ತು ಬಿಟ್ಟರೆ ಹಡಗವು ಛಿನ್ನವಿಚ್ಛಿನ್ನವಾಗಿ ಎಲ್ಲರೂ ಜೀವಕ್ಕೆ ಎರವಾಗುವ ಪ್ರಸಂಗ ಬರುತ್ತಿತ್ತು. ಆದರೆ ಮಾಡಬೇಕೇನು? ಯಾರಿಗೂ ಏನೂ ಹೊಳೆಯದಾಗಿತ್ತು.

ಕಪ್ತಾನನು ತನ್ನ ಸಂಗಡಿಗನಿಗೆ "ದೇವರ ಮೇಲೆ ನಿನ್ನ ವಿಶ್ವಾಸ ಇದೆಯೋ ಇಲ್ಲವೋ" ಎಂದು ಕೇಳಲಾಗಿ, ಅವನು "ಇಲ್ಲ—ಆದರೆ ಒಮ್ಮೊಮ್ಮೆ ವಿಶ್ವಾಸವಿಡುತ್ತೇನೆ" ಎಂದು ಉತ್ತರವಿತ್ತನು.

"ಇಂಥ ಆಪತ್ಕಾಲದಲ್ಲಿಯೇ ಏನು?"

"ಅಹುದು, ಇಂಥವೇಳೆಯಲ್ಲಿಯೇ ಅವನ ಹೊರತಾಗಿ ಇನ್ನಾರು ರಕ್ಷಿಸುವವರು?" ಎಂದೊಡನೆಯೆ ಎಲ್ಲರೂ ದೇವನಿಗಾಗಿ ಮೊರೆಯಿಟ್ಟು ಬೇಡಿಕೊಳ್ಳತೊಡಗಿದರು. ಇಷ್ಟರಲ್ಲಿ ಗಾಳಿಯೂ ಹೆಚ್ಚಾಯಿತು. ಹಡಗಕ್ಕೆ ಒಳಗಿನಿಂದಲೂ ಹೊರಗಿನಿಂದಲೂ ಆಘಾತ ನಡೆಯಿತು. ಅಷ್ಟರಲ್ಲಿಯೇ ಮುಖ್ಯ ನಾವಿಕನೊಬ್ಬನು ಕೈಯಲ್ಲಿ ಕಬ್ಬಿಣದ ಸುತ್ತಿಗೆಯನ್ನು ತೆಗೆದುಕೊಂಡು ಕೆಳಗಿಳಿದನು. ಇವನ ದುರ್ಲಕ್ಷ್ಯದಿಂದಲೆ ಈ ಆಪತ್ತಿಯು ಬಂದಿತ್ತು. ಈಗ ಆಗಿಹೋದ ತಪ್ಪನ್ನು ತಿದ್ದಿಕೊಳ್ಳಬೇಕೆಂಬ ಬುದ್ಧಿ ಅವನಿಗೆ ಬಂದಂತೆ ಕಂಡಿತು.

ನಿರ್ಜೀವ ವಸ್ತುವಿನೊಡನೆ ಸಜೀವ ವಸ್ತುವು ಬಡಿದಾಟ ಹೂಡಿತು. ಅವನು ಒಂದು ಮೂಲೆಯಲ್ಲಿ ಹೋಗಿ ನಿಂತನು. ಹಗ್ಗವನ್ನು ಸಿದ್ಧಪಡಿಸಿಯೇ ಕೊಂಡಿದ್ದನು. ಅವನು ಒಂದು ಕಂಬಕ್ಕೆ ಆತು ಜೀಪುಗಾಲು ಕೊಟ್ಟು ಗಟ್ಟಿಯಾಗಿ ನಿಂತನು. ತೋಫು ಆಟೋಪಿನಲ್ಲಿ ಬಂತೆಂದರೆ ಸರಗುಣಿಕೆಯ ಹಗ್ಗವನ್ನು ಅದರ ಕೊರಳಿಗೆ ಹಾಕಿ, ಜಗ್ಗಿ ಅದನ್ನು ಬಿಗಿಯಾಗಿ ಕಟ್ಟಿ, ಗಾಲಿಯಲ್ಲಿ ಹಾರಿಯನ್ನು ಜಡಿದು ನಿಲ್ಲಿಸಬೇಕೆಂದು ಹೊಂಚು ಹಾಕಿದ್ದನು. ಅದು ಆಟೋಪಿನಲ್ಲಿ ಬರತೊಲ್ಲದು. ಇವನ ಹಂಚಿಕೆ ಕೈಗೂಡಲೊಲ್ಲದು. ಹೀಗೆ ಕೆಲಹೊತ್ತು ಕಳೆದ ಮೇಲೆ ಗಾಳಿಯು

ಸ್ವಲ್ಪ ಸ್ತಬ್ಧವಾಯಿತು. ತೋಫಿನ ಹೊಯ್ದಾಟ ಕಡಮೆಯಾಯಿತು. ಪಾಶವೀ ಮತ್ತು ಬೌದ್ಧಿಕ ಶಕ್ತಿಗಳ ದ್ವಂದ್ವ ನಡೆಯಿತು. ಇದೆಲ್ಲವೂ ಆ ಕಗ್ಗತ್ತಲೆಯಲ್ಲಿಯೇ ಸಾಗಿತ್ತು. ಆ ತೋಫಿಗೆ ಎಷ್ಟು ಶಕ್ತಿ ಬಂದಿತ್ತೋ ಏನೋ. ಅಂತೂ ಕಡೆಗೊಮ್ಮೆ ಅದು ಇವನ ಬಲಿಯಲ್ಲಿ ಸಿಕ್ಕಿತು. ಅವನು ಉತ್ಸಾಹದಿಂದ ಅದನ್ನು ಬಿಗಿದು ಹಾಕಬಹುದೆನ್ನುವಷ್ಟರಲ್ಲಿ ಅವನ ಮೈಮೇಲೆಯೇ ಬಂದುಬಿಟ್ಟದ್ದನ್ನು ಆ ಮುದಕನು ನೋಡಿ, ಇನ್ನು ತಡೆಯುವದು ವಿಹಿತವಲ್ಲೆಂದು ಮುಂದೆ ಬಂದು, ಒಂದು ಉಸುಕಿನ ಚೀಲವನ್ನು ಗಾಲಿಯ ಬುಡಕ್ಕೆ ಸರಿಸಿದನು. ಸರಿಸುವಾಗ ಆ ಮುದುಕನೂ ಸಿಕ್ಕುಬೀಳುವವನೇ. ಆದರೆ ಆ ಮುದುಕನು ಅನುಭವಿಕನೂ ಹುಟ್ಟಾಶೂರನೂ ಇದ್ದುದರಿಂದ ಆ ಉಸುಕಿನ ಚೀಲವನ್ನು ಸರಿಸಿ, ಅದರ ಗತಿಯನ್ನು ಕುಂಠಿತಗೊಳಿಸಿದನು. ಮುಂದೆ ಆ ನಾವಿಕನು ಅದನ್ನು ಬಿಗಿಯಾಗಿ ಕಟ್ಟಿ, ಗಾಲಿಯಲ್ಲಿ ಹಾರಿಯನ್ನು ಜಡಿದುಬಿಟ್ಟನು. ತೋಫಿನ ಆಟವು ನಿಂತೇ ಬಿಟ್ಟಿತು.

ಆ ನಾವಿಕನ ಮೈಯಿಂದ ಬೆವರು ಒಂದೇ ಸವನೆ ಸುರಿಯುತ್ತಿತ್ತು. ಈ ಅದ್ಭುತ ಕಾರ್ಯವನ್ನು ಮಾಡಿ ಅವನು ಮುಂದೆ ಬಂದವನೆ ಮೊದಲಿಗೆ ಆ ಒಕ್ಕಲಿಗನ ವೇಷದ ಮುದುಕನಿಗೆ ಧನ್ಯವಾದಗಳನ್ನರ್ಪಿಸಿ "ನಿಮ್ಮಿಂದಲೇ ನನ್ನ ಜೀವ ಉಳಿಯಿತು" ಎಂದು ಹೇಳಿದನು. ಆದರೆ ಆ ಮುದುಕನು ಉತ್ತರವನ್ನೇ ಕೊಡಲಿಲ್ಲ. ಉಳಿದವರೆಲ್ಲರೂ ಕುತ್ತಿನಿಂದ ಪಾರಾದೆವೆಂಬ ಸಂಭ್ರಮವನ್ನು ವ್ಯಕ್ತಗೊಳಿಸಿದರು.

ಹಡಗವು ಈ ತೋಫಿನ ಸಂಕಟದಿಂದ ಮಾತ್ರ ಪಾರಾಯಿತಲ್ಲದೆ ಜಲಸಮಾಧಿಯಿಂದ ಇನ್ನೂ ಪಾರಾಗಿರಲಿಲ್ಲ. ಹಡಗಕ್ಕೆ ಸಂಭವಿಸಿದ ಹಾನಿಯೇನು ತುಂಬಿಬರುವಂತಿರಲಿಲ್ಲ. ಐದು ತೂತುಗಳು ಬಿದ್ದಿರುವದಲ್ಲದೆ ಒಂದು ಮಾತ್ರ ಬಹಳ ದೊಡ್ಡದೇ ಇತ್ತು. ಹಡಗದಲ್ಲಿ ನೀರುಹೊಕ್ಕದ್ದರಿಂದ ಎಲ್ಲರೂ ಕೂಡಿಕೊಂಡು ಆ ನೀರನ್ನು ಹೊರಗೆ ಹಾಕುವ ಆವಶ್ಯಕತೆ ಬಹಳಿತ್ತು. ಈ ಹಡಗವಂತೂ ಗುಪ್ತವಾಗಿಯೇ ಹೊರಟಿದ್ದರಿಂದ ಅದು ಪ್ರಕಟವಾಗಬಾರದಾಗಿತ್ತೆಷ್ಟೇ ಅಲ್ಲದೆ ಅದರಲ್ಲಿರುವವರ ಪ್ರಾಣರಕ್ಷ

ಣೆಯೂ ಬಹಳ ಮಹತ್ವವಾಗಿತ್ತು. ಆದ್ದರಿಂದ ಹಡಗದಲ್ಲಿಯ ಭಯ ಸೂಚಕ ದೀಪಗಳೆಲ್ಲವನ್ನೂ ಹಚ್ಚಲಾಯಿತು. ತಮ್ಮ ಪ್ರಾಣವನ್ನು ಉಳಿಸಿಕೊಳ್ಳುವ ಸಂಭವವಿದೆಯೆ—ಎಂಬದನ್ನು ತಲೆಯಲ್ಲಿ ತುಂಬಿಕೊಂಡು ಎಲ್ಲರೂ ಸುತ್ತಮುತ್ತಲೆಲ್ಲ ನೋಡಿದರು. ಹೊಗೆಮಂಜು ದಟ್ಟವಾಗಿಬಿದ್ದು ದರಿಂದ ಹೊರಗಿನದೇನೂ ಕಾಣುತ್ತಿದ್ದಿಲ್ಲ. ಪುನಃ ಗಾಳಿಯು ಜೋರಿನಿಂದ ಬೀಸಹತ್ತಿದ್ದರಿಂದ ಹಡಗವು ತನ್ನ ದಾರಿಯನ್ನು ಬಿಟ್ಟು ಗಾಳಿಯಗುಂಟ ಹೊರಟುಬಿಟ್ಟಿತು.

ನಾವಿಕರೆಲ್ಲರೂ ಚಿಂತಾಮಗ್ನರಾಗಿದ್ದರು. ಆ ಮುದುಕನು ಮೇಲೇರಿ ತನ್ನ ಸ್ಥಳದಲ್ಲಿ ಕುಳಿತುಬಿಟ್ಟಿದ್ದನು. ನಾವಿಕರೂ, ಕಪ್ತಾನರೂ ಕೂಡಿಕೊಂಡು ಆ ಪ್ರವಾಸಿಯ ಕಡೆಗೆ ಧಾವಿಸಿದರು. ತೋಫನ್ನು ಬಿಗಿದ ನಾವಿಕನೂ ಅಲ್ಲಿಗೆ ಹೋಗಿದ್ದನು. ಅವನ ಮುಖದಲ್ಲಿ ನಗೆಯು ಮಿನುಗುತ್ತಿತ್ತು. ಸಂತೋಷದ ಚಿನ್ಹಗಳೂ ಒಡೆದು ಕಾಣುತ್ತಿದ್ದವು.

ಕಪ್ತಾನನು ಆ ಮುದುಕನಿಗೆ ನಮಸ್ಕರಿಸಿ "ಸರದಾರರೇ, ಇವನೇ ಆ ಮನುಷ್ಯ" ಎಂದು ಅವನನ್ನು ತೋರಿಸಿದನು. ಆ ನಾವಿಕನು ನೆಟ್ಟಗೆ ನಿಂತುಕೊಂಡು, ಮುಂದೇನಾಗುವದೋ ಎಂಬ ವಿಚಾರದ ಸುಳಿಯಲ್ಲಿ ಸಿಕ್ಕಂತೆ ಕಾಣುತ್ತಿದ್ದನು.

ಕಪ್ತಾನನು "ಸರದಾರ, ಇವನೇ ಇಂದು ಆ ಅದ್ಭುತ ಪರಾಕ್ರಮವನ್ನು ತೋರಿಸಿದವನು. ಆದಕ್ಕಾಗಿ ಅವನಿಗೆ ಬಹುಮಾನ ಕೊಡುವದಾಗಬೇಕು" ಎಂದನು.

"ಅಹುದು, ಬಹುಮಾನ ಕೊಡಬೇಕೆದೆಂನಿಸುವದು."

"ಹಾಗಾದರೆ ಆಜ್ಞೆಯಾಗಲಿ."

"ಛೇ, ನಾನೆ—? ನನಗೆಲ್ಲಿದೆ ಅಧಿಕಾರ ಅಪ್ಪಣೆ ಮಾಡಲು? ಕಪ್ತಾನನು ನೀನಾದ್ದರಿಂದ ನಿನಗೇ ಅಧಿಕಾರವಿದೆ."

"ನಾನು ಕಪ್ತಾನನಿದ್ದರೇನಾಯಿತು? ನೀವು ನನಗಿಂತ ಹೆಚ್ಚಿನ ದರ್ಜೆಯವರಿರುತ್ತೀರಿ." ಎಂದು ಕಪ್ತಾನನೆನ್ನಲಾಗಿ ಆ ಮುದುಕನು ಆ ನಾವಿಕನನ್ನು ತೀಕ್ಷ್ಣ ದೃಷ್ಟಿಯಿಂದ ನೋಡಿ, ತನ್ನ ಹತ್ತಿರ ಬರಮಾಡಿ

ಕೊಂಡು ಅವನಿಗೆ ಒಂದು ಪದಕವನ್ನು ಕೊಟ್ಟನು. ಇದನ್ನು ನೋಡಿ ಎಲ್ಲ ನಾವಿಕರಿಗೆ ಆನಂದವುಂಟಾಯಿತು. ಆ ನಾವಿಕನು ಆ ಮುದುಕನಿಗೆ ನಮಸ್ಕರಿಸಿದನು. ಕೂಡಲೇ ಆ ವೃದ್ಧನು ಆ ನಾವಿಕನ ಕಡೆಗೆ ಬೆರಳು ಮಾಡಿ "ಈಗ ಇವನನ್ನು ಗುಂಡು ಹೊಡೆದು ಕೊಂದು ಹಾಕಿರಿ" ಎಂದು ಆಜ್ಞಾಪಿಸಿದನು. ಈ ಆಜ್ಞೆಯನ್ನು ಕೇಳಿ ಎಲ್ಲರೂ ಬೆಚ್ಚಿಬಿದ್ದರು. ಮುದುಕನು ದೊಡ್ಡ ಧ್ವನಿ ತೆಗೆದು "ಇವನ ನಿಷ್ಕಾಳಜಿಯಿಂದಲೇ ನಮ್ಮೆಲ್ಲರ ಜೀವವು ಆಪತ್ತಿಗೀಡಾಗಿದೆ. ನಾವು ಇನ್ನೊಂದು ಕ್ಷಣದಲ್ಲಿ ಸಮುದ್ರದಲ್ಲಿ ಮುಳುಗಿಬಿಡುತ್ತೇವೆ. ಸಮುದ್ರ ಪ್ರವಾಸವೆಂದರೆ ವೈರಿಯೊಡನೆ ಸಮರಾಂಗಣದಲ್ಲಿ ನಿಂತಂತೆ. ಪ್ರವಾಸಕ್ಕೆ ಹೊರಟ ಹಡಗವು ಸೇನಾಪತಿಯೊಡನೆ ಹೊರಟ ಸೈನಿಕರಿದ್ದಂತೆ. ಬಿರುಗಾಳಿಯು ವೈರಿಯಂತೆ ಹೊಂಚು ಹಾಕಿ, ಯಾವಾಗ ದಾಳಿಮಾಡೀತೋ ಎಂಬ ನಿಯಮವಿಲ್ಲ. ಇಂಥ ಪ್ರಸಂಗದಲ್ಲಿ ಒಬ್ಬ ಮನುಷ್ಯನು ತನ್ನ ಕರ್ತವ್ಯವನ್ನು ಚನ್ನಾಗಿ ಮಾಡದೆ ಹೋದರೆ ಅವನನ್ನು ಕೊಂದುಹಾಕದೆ ವಿಧಿಯಿಲ್ಲ. ಈ ನಾವಿಕನು ಪರಾಕ್ರಮವನ್ನು ತೋರಿಸಿದ್ದಕ್ಕೆ ಹೇಗೆ ಬಹುಮಾನ ಮಾಡಿದೆವೋ ಹಾಗೆಯೇ ಇವನಿಗೆ ಇವನ ಕರ್ತವ್ಯಚ್ಯುತಿಯ ಬಗ್ಗೆ ಶಿಕ್ಷೆಯನ್ನು ಕೊಡಬೇಕಾಗಿದೆ" ಎಂದು ಗುಡುಗು ಹಾಕಿದನು.

ಈ ಮಾತುಗಳು ಅವನ ಮುಖದಿಂದ ಮೆಲ್ಲ ಮೆಲ್ಲನೆಯಾದರೂ ಪರಿಣಾಮಕಾರಿಯಾಗಿ ಹೊರಬರುತ್ತಿದ್ದವು. ಆ ಮುದುಕನು ನಾವಿಕರನ್ನು ನೋಡಿ "ನೀವು ಹೋಗಿ ನಿಮ್ಮ ಕರ್ತವ್ಯವನ್ನು ಮಾಡಿರಿ" ಎಂದು ಆಜ್ಞಾಪಿಸಿದನು. ನಾವಿಕರೆಲ್ಲರೂ ಸಣ್ಣ ಮೋರೆ ಮಾಡಿದರು. ಕೆಳಗೆ ಮುಖಮಾಡಿ ನಿಂತರು. ಕಪ್ತಾನನ ಆಜ್ಞೆಯಾಯಿತು. ೧೨ ಜನ ನಾವಿಕರು ಕೆಳಗಿಳಿದು, ಆರಾರು ಜನರಂತೆ ಎರಡು ಸಾಲಾಗಿ ನಿಂತರು. ನಡುವೆ ಆ ಅಪರಾಧಿ ನಾವಿಕನನ್ನು ನಿಲ್ಲಿಸಲಾಯಿತು.

ಎಲ್ಲ ಕಡೆಗೂ ಶಾಂತತೆ ಪಸರಿಸಿದೆ. ಗಾಳಿಯು ಬೀಸುತ್ತ ತನ್ನ ಪ್ರಭಾವವನ್ನು ತೋರಿಸುತ್ತಿದೆ. ಸ್ವಲ್ಪ ಹೊತ್ತಿನಲ್ಲಿಯೆ ಒಂದು ಮಿಂಚು ಮಿಂಚಿತು. ಝಗ್ಗನೆ ಬೆಳಕು ಬಿದ್ದಿತು. ಯಾರೋ ಸಮುದ್ರದಲ್ಲಿ ಡಬಕ್ಕನೆ

ಹಾರಿಕೊಂಡಂಥ ಸದ್ದಾಯಿತು. ಆ ವೃದ್ಧನು ಕೈಕಾಲುಗಳನ್ನು ಜೋಡಿಸಿಕೊಂಡು ವಿಚಾರಮಗ್ನನಾಗಿ ಕುಳಿತುಕೊಂಡಿದ್ದನು. ಕಪ್ತಾನನು ತನ್ನ ಸಂಗಡಿಗನ ಕಿವಿಯಲ್ಲಿ ಸಣ್ಣ ದನಿಯಿಂದ "ಕೊನೆಗೆ ವೆಂಡಿಯ ಸೈನ್ಯಕ್ಕೆ ಯೋಗ್ಯ ಸೇನಾಪತಿ ದೊರಕಿದನಲ್ಲವೆ?" ಎಂದು ಗೊಣಗಿದನು.

---

೩

ಸಮುದ್ರದಲ್ಲಿಯು ಬಿರುಗಾಳಿಯ ವೇಗ ಹಾಗೆಯೇ ಇತ್ತು. ಸುತ್ತಲೂ ದಟ್ಟ ಕತ್ತಲೆ ಕವಿದಿದೆ. ಒಂದೆರಡೆ ಮೊಳದಲ್ಲಿದ್ದ ವಸ್ತುಗಳೆ ಕಾಣಿಸುತ್ತಿದ್ದಿಲ್ಲ. ದೊಡ್ಡದೊಡ್ಡ ತೆರೆಗಳೇಳುತ್ತಿದ್ದವು. ಹಡಗದ ಭಾರವು ಹಗುರಾಗಲೆಂದು ತೋಫಿನಿಂದ ಹಾಳಾದ ಸಾಮಾನುಗಳನ್ನು ಕೆಲ ನಾವಿಕರು ಸಮುದ್ರಕ್ಕೆಸೆಯುವದರಲ್ಲಿ ತೊಡಗಿದ್ದರು. ಅಷ್ಟರಲ್ಲಿ ಸಹ-ಕಪ್ತಾನನು ಮುಖ್ಯ ನಾವಿಕನ ಹತ್ತಿರ ಬಂದು "ಈಗ ನಾವು ಎಲ್ಲಿದ್ದೇವೆ?" ಎಂದು ವಿಚಾರಿಸಿದನು.

ನಾವಿಕನು ಗಂಭೀರತೆಯಿಂದ "ಈಗ ನಾವು ದೇವರ ಕೈಯಲ್ಲಿದ್ದೇವೆ" ಎಂದುತ್ತರಿಸಿದನು. ಹಡಗವು ಹೊರಟಿತೆಂದರೆ ಮುಖ್ಯ ಸೂತ್ರಗಳೆಲ್ಲ ಮುಖ್ಯ ನಾವಿಕನ ಕೈಯಲ್ಲಿರುತ್ತವೆ. ಅವನು ಮಾಡೆಂದುದನ್ನು ಮಾಡಬೇಕು, ಹೇಳಿದ್ದನ್ನು ಕೇಳಬೇಕು. ಆದರೂ ನಾವಿಕನು ಸರಿಯಾಗಿ ಅವರಿಗೆ ಉತ್ತರವೀಯಲಿಲ್ಲ. ಅವನಿಗೆ ನಿಜವಾಗಿ ದೇವರ ಕಡೆಯಿಂದಲೇ ಉತ್ತರಬಂದಿತ್ತು.

ಮೆಲ್ಲ ಮೆಲ್ಲನೆ ರಾತ್ರಿಯು ಮುಗಿಯುತ್ತ ಬಂತು. ಪ್ರಭಾತ ಸಮಯವು ಸಮೀಪಿಸಿದಂತೆಲ್ಲ ದಿಕ್ಕುಗಳು ಕಾಣತೊಡಗಿದವು. ಆದರೂ ಆಕಾಶದೊಳಗಿನ ಹೊಗೆಮಂಜು ಕಡಮೆಯಾಗಿರಲಿಲ್ಲ. ಪೂರ್ವ ದಿಗಂತದಲ್ಲಿ ಉಷಾದೇವಿಯ ಕೆಂಬಣ್ಣವು ಪಸರಿಸಹತ್ತಿತ್ತು. ಪಶ್ಚಿಮದಲ್ಲಿ ಅಸ್ತಂಗತನಾ

ಗಿರುವ ಚಂದ್ರನ ಮಲಿನ ಪ್ರಕಾಶವು ಲಪ್ತಪ್ರಾಯವಾಗುತ್ತಲಿತ್ತು. ಇವೆರಡೂ ಪ್ರಕಾಶಮಿಶ್ರಣದಲ್ಲಿ ಕೆಲವು ಕಪ್ಪಗಿನ ಸ್ಥಿರಪದಾರ್ಥಗಳು ಮಾತ್ರ ಕಾಣಿಸುತ್ತಿದ್ದವು. ಪಶ್ಚಿಮ ದಿಕ್ಕಿನಲ್ಲಿ ಮೂರು ಎತ್ತರವಾದ ಬಂಡೆಗಲ್ಲುಗಳು ಕಾಣತೊಡಗಿದ್ದವು. ಆ ಸ್ಥಳವು ಗಂಡಾಂತರದ್ದೆಂದು ಹೆಸರಾಗಿತ್ತು. ಪೂರ್ವ ದಿಕ್ಕಿನಲ್ಲಿ ಒಂದೇ ಸಾಲಿನಲ್ಲಿ ಎಂಟು ಹಡಗುಗಳು ತಮ್ಮ ಧ್ವಜವನ್ನು ಫಡಫಡಾಯಿಸುತ್ತ ನಿಂತಿವೆ. ಕಾಣುತ್ತಿರುವ ಆ ಹಡಗಗಳಂತೂ ಶತ್ರುಗಳ ಹಡಗಗಳಾದ್ದರಿಂಧ ಅವುಗಳ ಬಗ್ಗೆ ಹೇಳುವದೇ ಬೇಡ. ಹೀಗೆ ಈ ಹಡಗದ ಸ್ಥಿತಿಯು ಒಂದು ಕಡೆ ಭಾವಿ, ಒಂದು ಕಡೆ ಕೆರೆ ಎಂಬಂತಾಗಿತ್ತು. ಈ ಬಂಡೆಗಲ್ಲುಗಳೊಡನೆ ಹೋರಾಡಬೇಕೆಂದರೆ ಈ ಹಡಗವು ಮೊದಲೇ ಛಿನ್ನವಿಚ್ಛಿನ್ನವಾಗಿತ್ತು. ಇತ್ತ ಶತ್ರುಗಳ ಹಡಗುಗಳಿಗೆ ಕೈತೋರಿಸಬೇಕೆಂದರೆ ತೋಫುಗಳೆಲ್ಲವೂ ನಿರುಪಯೋಗವಾಗಿದ್ದವು. ಆದಕಾರಣ ಇಂಥ ಬಿಕ್ಕಟ್ಟಿನ ಪ್ರಸಂಗದಲ್ಲಿ ಯಾವ ಮರಣಕ್ಕೆ ಆಹುತಿಯಾಗಬೇಕೆಂಬ ಪ್ರಶ್ನೆಗೆ ಉತ್ತರ ದೊರೆಯದಾಗಿತ್ತು.

ಬೆಳಗು ಇನ್ನೂ ಮಸಮುಸಕಾಗಿತ್ತು. ಮುಂಜಾವಿನ ಗಾಳಿಯು ಯಥಾಸ್ಥಿತಿ ಬೀಸುತ್ತಿತ್ತು. ಗಾಳಿಯ ವೇಗವು ಈ ಹಡಗವನ್ನು ಬಂಡೆಗಲ್ಲುಗಳ ಕಡೆಗೆ ಎಳೆದೊಯ್ಯುತ್ತಿತ್ತು. ದುರ್ಬಲವಾದ ಈ ಹಡಗವು ನಾವಿಕರ ಅಂಕಿತವನ್ನು ಮೀರಿತ್ತು. ಪ್ರತನಿತ್ಯವೂ ಕಾಣುತ್ತಿದ್ದ ಈ ಬಂಡೆಗಲ್ಲುಗಳು ಇಂದು ಭೀಷಣಾಕೃತಿಯಿಂದ ತೋರುತ್ತಿದ್ದವು. ತೆರೆಗಳು ಅಪ್ಪಳಿಸುವಿಕೆಯಿಂದ ಈ ಬಂಡೆಗಲ್ಲುಗಳು ಅಲ್ಲಲ್ಲಿ ಸೀಳು ಸೀಳಾಗಿದ್ದವು. ಒಂದೊಂದು ತೆರೆಯೆಂದರೆ ಹರಿತವಾದ ಕತ್ತಿಯ ಹೊಡೆತವಿದ್ದಂತೆ. ಆದ್ದರಿಂದ ಬಂಡೆಗಲ್ಲುಗಳು ಕತ್ತರಿಸಿ ಉರುಳುರುಳಿ ಬೀಳುತ್ತಿದ್ದವು.

ಆ ಹಡಗಗಳು ಪ್ರಜಾಪಕ್ಷದವಾದ್ದರಿಂದ ಈ ಹಡಗವನ್ನು ನುಂಗಿ ನೀರು ಕುಡಿಯಬೇಕೆಂದು ಮಾಡಿದ್ದರಲ್ಲಿ ಆಶ್ಚರ್ಯವೇನೂ ಇರಲಿಲ್ಲ. ಈ ಪ್ರಕಾರ ಈ ಹಡಗಕ್ಕೆ ಒಂದು ಸಂಕಟದಿಂದ ಪಾರಾಗುವಷ್ಟರಲ್ಲಿ ಇನ್ನೊಂದು ಸಂಕಟವು 'ಆ' ಎಂದು ಬಾಯ್ದೆರೆದಿದ್ದಿತು. ಇಷ್ಟರಲ್ಲಿ ಕಪ್ತಾನನು ಕೈಯಲ್ಲಿ ದುರ್ಬೀನನ್ನು ತೆಗೆದುಕೊಂಡು ಮುಖ್ಯ ನಾವಿಕನ ಕಡೆಗೆ

ಬಂದು, ಸುತ್ತುಮುತ್ತಲಿನ ಪರಿಸ್ಥಿತಿಯನ್ನವಲೋಕಿಸತೊಡಗಿದನು. ಅವನು ಮೊದಲು ಬಂಡೆಗಲ್ಲುಗಳ ಕಡೆಗೆ ತನ್ನ ದೃಷ್ಟಿಯನ್ನು ಬೀರಿ, ಆ ಮೇಲೆ ಹಡಗುಗಳ ಕಡೆಗೆ ಹೊರಳಿಸಿದನು. ಅವನು ನಾವಿಕನಿಗೆ "ನಿನಗೆ ಈ ಹಡಗಗಳ ಬಗ್ಗೆ ಏನಾದರೂ ಗೊತ್ತಿದೆಯೋ ?" ಎಂದು ಕೇಳಿದನು.

"ಅಹುದು, ಗೊತ್ತಿದೆ."

"ಇವು ಎಂಥ ಹಡಗುಗಳು ?"

"ವೆಂಡಿಯು ಯುದ್ಧದ ಹಡಗುಗಳು."

"ಯಾರವು ? ಫ್ರಾನ್ಸದವೆ ?"

"ಅಹುದು, ಅದೇ ಚಾಂಡಾಲರವು."

ಸ್ವಲ್ಪ ಹೊತ್ತು ನಿರೀಕ್ಷಿಸಿದ ನಂತರ ಕಪ್ತಾನನು ಪುನಃ "ಈ ಹಡಗಗಳೆಲ್ಲವೂ ವೆಂಡಿಯವರಿಗೇ ಸಂಬಂಧಪಟ್ಟುವೇ ?" ಎಂದು ವಿಚಾರಿಸಿದನು.

"ಅಹುದು. ಅದರಲ್ಲಿ ಸಂಶಯುವೇ ಇಲ್ಲ."

"ವೆಂಡಿಯ ಹಡಗುಗಳು ೧೬ ಎಂದು ಸುದ್ದಿಯಿದೆ. ಆದರೆ ಇವು ಎಂಟೇ ಇರುವವಲ್ಲ !"

"ಉಳಿದವುಗಳು ದಂಡೆಯನ್ನು ಹಿಡಿದು ನಿಂತಿರಬಹುದು."

ಕಪ್ತಾನನು ಮತ್ತೆ ದುರ್ಬಿಣವನ್ನು ಹಿಡಿದು ಸೂಕ್ಷ್ಮವಾಗಿ ಸುತ್ತಲೂ ನೋಡಿದನು. ಈ ಕಪ್ತಾನನು ಈ ಮೊದಲು ಫ್ರಾನ್ಸದ ಹಡಗದಲ್ಲಿ ಕೆಲಸ ಮಾಡುತ್ತಿದ್ದನು. ಅದರಿಂದ ಅವನಿಗೆ ಎಲ್ಲಿ ಏನಿದೆ ಎಂಬುದು ಪೂರ್ಣ ಗೊತ್ತಿತ್ತು. ಪ್ರತಿಯೊಂದು ಹಡಗವೂ ಅದರಲ್ಲಿ ಎಷ್ಟೆಷ್ಟು ತೋಫುಗಳಿವೆ ಎಂಬುದೂ ಅವನಿಗೆ ಗೊತ್ತಿದ್ದ ಸಂಗತಿಯಾಗಿತ್ತು. ದುರ್ಬಿಣಿಯನ್ನು ಹಿಡಿದುಕೊಂಡು ಪ್ರತಿಯೊಂದು ಹಡಗವನ್ನು ನೋಡಿ, ಎಷ್ಟೆಷ್ಟು, ಎಂಥೆಂಥ ತೋಫುಗಳಿವೆ ಎಂಬದನ್ನು ಬರೆದುಕೊಳ್ಳತೊಡಗಿದನು. ಎಲ್ಲವನ್ನು ಪರೀಕ್ಷಿಸಿದ ಮೇಲೆ ಎಲ್ಲ ಹಡಗಗಳಲ್ಲಿ ೩೮೦ ತೋಫುಗಳಿವೆ ಎಂದು ಲೆಕ್ಕಾಚಾರ ಮಾಡಿದನು. ಆ ಎಂಟೂ ಹಡಗುಗಳು ಮಂದಗತಿಯಿಂದ ಪ್ರಯಾಣ

ಬೆಳಿಸುತ್ತಿವೆ ಎಂಬದೂ ಅವನ ಲಕ್ಷ್ಯಕ್ಕೆ ಬಂದಿತು. ಇನ್ನುಮುಂದೆ ಮೀನಮೇಷ ಮಾಡುತ್ತ ವೇಳೆ ಕಳೆಯುವದು ಸರಿಯಲ್ಲವೆಂದು ನಿರ್ಧರಿಸಿ, ಒಮ್ಮೆಲೆ ಸಿದ್ಧತೆಯಾಗಲೆಂದು ಆಜ್ಞಾಪಿಸಿದನು. ಈ ಹಡಗದಲ್ಲಿದ್ದ ಒಂಬತ್ತೇ ತೋಫುಗಳಿಂದ ಆ ೩೦೦ತೋಫುಗಳೊಡನೆ ಯುದ್ಧ ಮಾಡ ಬೇಕಾಗಿತ್ತು. ಅಲ್ಲದೆ ಈ ತೋಫುಗಳು ಬಹಳ ದೂರದ ವರೆಗೆ ಹಾರಲು ಶಕ್ಯವಿಲ್ಲದ್ದರಿಂದ ತನ್ನ ಅಳತೆಯೊಳಗೆ ಬರುವ ವರೆಗೆ ತೋಫು ಹಾರಿಸುವಂತೆಯೂ ಇರಲಿಲ್ಲ.

ಹಡಗದ ಮೇಲೆ ಪೂರ್ಣ ಶಾಂತತೆ ನೆಲೆಸಿತ್ತು. ಎಲ್ಲ ಜನರೂ ಸಾವ ಕಾಶವಾಗಿ ಯುದ್ಧದ ಸಿದ್ಧತೆಯಲ್ಲಿಯೇ ತೊಡಗಿದ್ದರು. ತಮಗೆ ಬೇಕಾ ಗುವ ಎಲ್ಲ ಸಾಮಗ್ರಿಗಳನ್ನು ನೀಟಾಗಿಟ್ಟುಕೊಂಡರು. ಗಾಯಹೊಂದಿದವ ರಿಗಾಗಿ ಪ್ರತ್ಯೇಕ ಸ್ಥಳವನ್ನು ತೆರವು ಮಾಡಿಟ್ಟರು. ತೋಫುಗಳನ್ನು ಸುವ್ಯ ವಸ್ಥಿತವಾಗಿ ನಿಲ್ಲಿಸಿದರು. ಮದ್ದುಗುಂಡಿನ ಕೋಣೆಯ ಬಾಗಿಲನ್ನು ತೆರೆದಿ ಡಲಾಯಿತು. ಪ್ರತಿಯೊಬ್ಬರಿಗೂ ಕಾಡುತೂಸು, ಗುಂಡು, ಪಿಸ್ತೂಲು ಮೊದಲಾದವುಗಳನ್ನು ಪೂರೈಸಿದರು. ಎಲ್ಲರೂ ತಮತಮಗೆ ನಿಯಮಿಸಿದ ಸ್ಥಳಗಳಲ್ಲಿ ಹೋಗಿ ನಿಂತರು. ಇದೆಲ್ಲ ಸಿದ್ಧತೆಯು ಗಪ್ಪುಚಿಪ್ಪಾಗಿ, ಚಕಾರ ಶಬ್ದದ ಸುಳಿವಿಲ್ಲದೆ ಸಾಗಿತ್ತು. ಆ ಮೇಲೆ ಹಡಗದ ಮೇಲಿರುವ ಆರು ಲಂಗುರಗಳನ್ನು ಕೆಳಗೆ ಬಿಡಲಾಯಿತು. ಹಡಗದ ಮುಖವು ಶತ್ರುಗಳ ಕಡೆಗೆ ಹೊರಳಿತು.

ಶತ್ರುಗಳ ಹಡಗಗಳಲ್ಲಿಯೂ ಇದೇ ತರದ ಸಿದ್ಧತೆ ನಡೆದಿತ್ತು. ಅವರು ತಮ್ಮ ಹಡಗುಗಳನ್ನು ಅರ್ಧಚಂದ್ರಾಕೃತಿಯಲ್ಲಿ ನಿಲ್ಲಿಸಿದರು. ಉಭಯ ಪಕ್ಷದವರ ಯುದ್ಧದ ಸಿದ್ಧತೆಯು ಮುಗಿಯಿತು. ಮೊದಲಿಗೆ ಯಾರ ಗುಂಡು ಹಾರುವದೋ ಎಂಬದಷ್ಟೆ ಉಳಿದಿತ್ತು.

ಆ ವೃದ್ಧನು ಶಾಂತಮನಸ್ಕನಾಗಿ ಕುಳಿತಿದ್ದನು. ಇದೆಲ್ಲ ಸಿದ್ಧತೆ ಯನ್ನು ಗಂಭೀರತೆಯಿಂದ ಅವಲೋಕಿಸುತ್ತಿದ್ದನು. ಅಷ್ಟರಲ್ಲಿ ಕಪ್ತಾನನು ಅವನ ಬಳಿಗೆ ಹೋಗಿ “ ಸರದಾರ, ನಮ್ಮ ಸಿದ್ಧತೆ ಎಲ್ಲಾ ಆಗಿದೆ. ನಾವು ನಮ್ಮ ದೇಹಗಳನ್ನು ಮೃತ್ಯುವಿನ ದ್ವಾರದಲ್ಲಿ ಇಟ್ಟಿದ್ದೇವೆ. ಬೇಗನೆ

ಅಂತ್ಯವೂ ಆಗಬಹುದು. ಆದರೂ ನಮ್ಮ ಕೊನೆಯುಸಿರಿರುವವರೆಗೂ ನಾವು ನಮ್ಮ ಕರ್ತವ್ಯವನ್ನು ಪೂರೈಸುವೆವು. ಎರಡೂ ಕಡೆಯಿಂದಲೂ ಪ್ರಚಂಡ ತಾಂಡವ ನಡೆಯಲಿದೆ. ನಮಗೆ ಮರಣವೊಂದೇ ಹಾದಿಯೆಂದು ತೋರುತ್ತದೆ. ಈ ಬಂಡೆಗಲ್ಲುಗಳಿಗೆ ಅಪ್ಪಳಿಸಿ ಸಾಯುವದಕ್ಕಿಂತ ವೈರಿಗಳೊಡನೆ ಹೋರಾಡಿ ಸಾಯುವದೇ ಲೇಸು. ಮುಳುಗಿ ಸಾಯುವದಕ್ಕಿಂತ ಶತ್ರುವಿನ ಗುಂಡುಗಳಿಗೆ ಆಹುತಿಯಾಗುವದು ಎಷ್ಟೋ ಮೇಲು. ನಮ್ಮ ಉದ್ಯೋಗವೆಂದರೆ ಸಾಯುವದು; ಇಲ್ಲವೆ ಸಾಯಗೊಲ್ಲುವದು. ಆದರೆ ಇದು ತಮ್ಮಂಥವರಿಗೆ ಶೋಭಿಸದು. ನೀವು ಒಂದು ಮಹತ್ಕಾರ್ಯ ಸಾಧಿಸುವದಕ್ಕಾಗಿ ನಿಯಮಿಸಲ್ಪಟ್ಟಿದ್ದೀರಿ. ತಮ್ಮ ಮುಂದೆ ಉಚ್ಚತಮವಾದ ಧ್ಯೇಯವಿದೆ. ವೆಂಡಿಯ ಯುದ್ಧದ ಸೇನಾಪತಿಗಳಾಗಿರುತ್ತೀರಿ. ನೀವು ಒಂದು ವೇಳೆ ನಮ್ಮೊಂದಿಗೆ ಮರಣಕ್ಕೆ ಸಿದ್ಧರಾದಿರೆಂದರೆ ರಾಜಪಕ್ಷದ ಸತ್ಯಾನಾಶವಾದಂತಾಗುವದು. ನಾವು ನಮ್ಮ ಕರ್ತವ್ಯವನ್ನು ಮಾಡಲು ಟೊಂಕ ಕಟ್ಟಿದ್ದೇವೆ. ನೀವು ನಿಮ್ಮದನ್ನು ಮಾಡಬೇಕು. ಯುದ್ಧ ಮಾಡ ಮಾಡುತ್ತ ಸಾಯುವದೇ ನಮ್ಮ ಕರ್ತವ್ಯಕರ್ಮವಾಗಿದೆ. ತಾವು ಈ ವಿಪತ್ತಿನಿಂದ ಪಾರಾಗಿ ಹೋಗಿ, ಮುಂದಿನ ಯುದ್ಧದ ಸಿದ್ಧತೆಯನ್ನು ಮಾಡಿಕೊಳ್ಳುವದು ತಮ್ಮ ಕರ್ತವ್ಯವೆಂದು ನಾನು ತಿಳಿದಿದ್ದೇನೆ. ನಾನು ತಮಗೆ ಒಬ್ಬ ನಾವಿಕನನ್ನೂ, ಒಂದು ಹಡಗವನ್ನೂ ಕೊಡುತ್ತೇನೆ. ಅಡ್ಡತಿಡ್ಡ ಹೋಗಿಯಾದರೂ ದಂಡೆಗೆ ಹತ್ತುವದೇನು ಬಹಳ ಕಠಿಣವಿರುವದಿಲ್ಲ. ಇನ್ನೂ ನಿಚ್ಚಳ ಬೆಳಕು ಬಿದ್ದಿಲ್ಲ. ಸಮುದ್ರದಲ್ಲಿ ಕತ್ತಲು ಕಡಿಮೆಯಾಗಿಲ್ಲ. ಆದಕಾರಣ ತಾವು ಹೊರಡಬಹುದು" ಎಂದು ಕಳಕಳಿಯಿಂದ ಬಿನ್ನವಿಸಿಕೊಂಡನು.

ಸಾಧಕ ಬಾಧಕ ಉಪಾಯಗಳನ್ನು ತೂಗಿ ನೋಡಿ ಆ ಮುದುಕನು ಸಮ್ಮತಿ ದರ್ಶನಾರ್ಥವಾಗಿ ತನ್ನ ಗೋಣನ್ನು ಅಲ್ಲಾಡಿಸಿದನು. ಇದನ್ನು ಕಂಡು ಕಪ್ತಾನನು ಉಚ್ಚಸ್ವರದಿಂದ ನಾವಿಕರನ್ನೂ, ಸೈನಿಕರನ್ನೂ ಕೂಗಿದನು. ಎಲ್ಲರೂ ತಮ್ಮ ಕೆಲಸ ಬಿಟ್ಟು ಕಪ್ತಾನನ ಕಡೆಗೆ ಕಣ್ಣು ಹೊರಳಿಸಿದರು. ಕಪ್ತಾನನು ಅವರೆಲ್ಲರನ್ನುದ್ದೇಶಿಸಿ "ನಮ್ಮೊಂದಿಗಿರುವ ಈ ಸೇನಾಪತಿಯು ರಾಜನ ಪ್ರತಿನಿಧಿ, ಇವನ ರಕ್ಷಣೆ ಮಾಡುವದು ನಮ್ಮ ಮೈಮೇಲೆ

ಬಿದ್ದುದರಿಂದ ನಾವು ನಮ್ಮ ಕರ್ತವ್ಯವನ್ನು ಪಾಲಿಸಬೇಕು. ರಾಜ್ಯಸಿಂಹಾಸನವನ್ನು ರಕ್ಷಿಸುವದಕ್ಕಾಗಿ ಈ ಸೇನಾಪತಿಯು ಅವಶ್ಯವಾಗಿ ಬೇಕಾಗಿದ್ದಾನೆ. ವೆಂಡಿಯ ಸೈನ್ಯದ ಸೇನಾಧಿಪತಿತ್ವವು ಇವನಿಗಿದೆ. ನಮ್ಮೊಡನೆಯೂ ಇವನೂ ಫ್ರಾನ್ಸದ ದಂಡೆಯ ಮೇಲೆ ಇಳಿಯಬೇಕಾಗಿತ್ತು; ಆದರೆ ಆ ಯೋಗವು ಕೂಡಿಬರುವದು ಅಸಂಭವವಾದ್ದರಿಂದ ಅವನಿಗೊಬ್ಬನಿಗೇ ಹೋಗಬೇಕಾಗಿದೆ. ಇವನೊಬ್ಬನ ಪ್ರಾಣವುಳಿಯಿತೆಂದರೆ ಉಳಿದೆಲ್ಲವೂ ಬದುಕಿದಂತಾಗುತ್ತದೆ· ಅವನ ಮೇಲಾದರೂ ಅನೇಕ ಸಂಕಟಗಳು ಬಾರದೆ ಹೋಗಲಾರವು. ದಂಡೆಯನ್ನು ಮುಟ್ಟುವದೇನು ಸುಲಭ ಸಾಧ್ಯವಾದ ಕೆಲಸವಲ್ಲ. ಬಿರುಗಾಳಿಯೆದ್ದ ಸಮುದ್ರದಲ್ಲಿ ಹೋಗಬೇಕಾದರೆ ದೊಡ್ಡ ಹಡಗವೇ ಬೇಕು. ಆದರೆ ಶತ್ರುವಿನ ಕಣ್ಣು ತಪ್ಪಿಸಿ ಪಾರಾಗಬೇಕಾದ್ದರಿಂದ ಸಣ್ಣ ಹಡಗವೇ ಲೇಸು. ಆದ್ದರಿಂದ ಈ ದೋಣಿಯನ್ನು ನಡೆಯಿಸಿಕೊಂಡು ಹೋಗಲು ಎಲ್ಲ ವಿಧದಿಂದಲೂ ನುರಿತೊಬ್ಬ ನಾವಿಕನು ಬೇಕಾಗಿದ್ದಾನೆ. ಇನ್ನೂ ಬೆಳಕು ಹರಿದಿಲ್ಲ. ಅಲ್ಲದೆ ಶತ್ರುವಿನೊಡನೆ ಯುದ್ಧಪ್ರಾರಂಭವಾಯಿತೆಂದರೆ ಯಾರು ಹೋದರು ? ಎತ್ತ ಹೋದರು ಎಂಬ ಲಕ್ಷ್ಯವು ಉಳಿಯಲಾರದು. ಏನು ? ನಾನನ್ನುವದೆಲ್ಲವು ನಿಜವೋ, ಅಲ್ಲವೊ ? " ಎಂದು ಶಾಂತತೆಯಿಂದ ವಿಚಾರಿಸಿದನು.

" ನಿಜ, ನಿಜ. " ಎಂದು ಎಲ್ಲರೂ ಏಕಕಂಠದಿಂದ ಉಚ್ಚರಿಸಿದರು.

" ಅಂದಮೇಲೆ ನಿಮ್ಮೊಳಗೆ ಯಾರು ಹೋಗಲು ಸಿದ್ಧರಿರುವಿರಿ ? "

" ನಾನು " ಎಂದು ಒಬ್ಬ ನಾವಿಕನು ಮುಂದೆ ಬಂದನು.

ಅಲ್ಪಾವಕಾಶದಲ್ಲಿಯೇ ಒಂದು ಸಣ್ಣ ದೋಣಿಯನ್ನು ಕೆಳಗೆ ಬಿಡಲಾಯಿತು. ಇಬ್ಬರೆ ಹೊರಟರು. ಆ ನಾವಿಕನು ಬಂಡೆಗಲ್ಲುಗಳ ದಾರಿಯಿಂದಲೇ ದೋಣಿಯನ್ನು ಮುಂದೆ ಸಾಗಿಸಿದನು. ದೋಣಿಯಲ್ಲಿ ಒಂದು ಸ್ವಲ್ಪ ತಿಂಡಿಯನ್ನೂ ನೀರನ್ನೂ ಇರಿಸಲಾಗಿತ್ತು. ಚಿಕ್ಕ ದೋಣಿಯಾದ್ದರಿಂದ ಮೆಲ್ಲ ಮೆಲ್ಲನೆ ಸಾಗಿ, ಕಣ್ಣಿಗೆ ಕಾಣಿಸದಾಯಿತು. ಇತ್ತ ಕಪ್ತಾನನು ದೊಡ್ಡ ದನಿಯಿಂದ " ಹಡಗದ ಮೇಲೆ ರಾಜಚಿನ್ಹಾಂಕಿತವಾದ ಬಿಳಿಯ ಬಾವುಟವನ್ನೇರಿಸಿರಿ " ಎಂದು ಕೂಗಿಕೊಂಡನು. ಆ ರಾಜಧ್ವಜವು

ಹಾರಾಡುತ್ತ ಮೆರೆಯತೊಡಗಿತು. ಇದೇ ಹಡಗವೆ ಮೊದಲಿಗೇ ಗುಂಡು ಹೊಡೆದು ರಾಜನ ಜಯಜಯಕಾರವನ್ನು ಮಾಡಿತು. ಅತ್ತ ಶತ್ರುಗಳ ಕಡೆಯಲ್ಲಿಯೂ ಪ್ರಜಾಪಕ್ಷದ ಜಯಜಯಕಾರವೆದ್ದು, ಈ ಹಡಗದ ಮೇಲೂ ಗುಂಡಿನ ಮಳೆಯಾರಂಭವಾಯಿತು. ತೋಫುಗಳ ಗರ್ಜನೆಯೂ ದಿಗಂತವನ್ನು ವ್ಯಾಪಿಸಿತು. ಅಗ್ನಿವರ್ಷಾವವೇ ನಡೆಯಿತು.

ಆಯಿತು. ಯುದ್ಧವೇ ಆರಂಭವಾಯಿತು. ಸಮುದ್ರವು ಹೊಗೆಯಿಂದಲೂ, ಬೆಂಕಿಯಿಂದಲೂ ಮುಚ್ಚಿಬಿಟ್ಟಿತು. ತೋಫಿನ ಗುಂಡುಗಳು ನೀರಲ್ಲಿ ಬಿದ್ದರೆ, ಒಳಗಿನಿಂದ ಹೊಗೆಯು ಹೊರಡುತ್ತಿತ್ತು. ಸಮುದ್ರದಲ್ಲಿ ಬೀಳುವ ಅಗ್ನಿಸ್ಫುಲಿಂಗಗಳನ್ನು ನೋಡಿದರೆ ಒಂದು' ಜ್ವಾಲಾಮುಖಿ ಪರ್ವತವೆ ಅಲ್ಲಿ ಎದ್ದಂತೆ ಭಾಸವಾಗುತ್ತಿತ್ತು.

ಇತ್ತ ಮುದುಕ ಸೇನಾಪತಿಯೂ ನಾವಿಕರೂ ಬಹು ಪ್ರಯೊಸದಿಂದ ತಮ್ಮ ಮಾರ್ಗಕ್ರಮಣ ಸಾಗಿಸಿದ್ದರು. ಹಾದಿಯಲ್ಲಿ ಬಿಕ್ಕಟ್ಟಿನ ಸ್ಥಳಗಳೆಷ್ಟೋ ಇದ್ದವು. ಆದರೂ ನುರಿತ ನಾವಿಕನಿದ್ದುದರಿಂದ ಬಲು ಜಾಣತನದಿಂದಲೂ ಹಿಡಿತದಿಂದಲೂ ದೋಣಿಯು ಶಾಂತವಾಗಿ ಸಾಗಿತ್ತು. ಮೊದಮೊದಲಿಗೆ ಯುದ್ಧದ ಖಡಖಡಾಟ ಸಪ್ಪಳವು ಅವರಿಗೆ ಕೇಳಿಸುತ್ತಿತ್ತು. ಮುಂದೆ ಮುಂದೆ ಕೇಳಬರಲಿಲ್ಲ. ಎಲ್ಲ ಆಯಕಟ್ಟಿನ ಸ್ಥಳಗಳನ್ನು ಸುಸೂತ್ರವಾಗಿ ದಾಟಿ ದೋಣಿಯು ಒಮ್ಮೆ ಬಯಲು-ಕಡಲಿಗೆ ಬಂದಿತು. ಬೆಳಕೂ ಹೆಚ್ಚಾಗುತ್ತ ನಡೆದಿತ್ತು. ಯುದ್ಧದಿಂದಲೂ, ಬಂಡೆಗಲ್ಲುಗಳ ಸಂಕಟದ ಪ್ರದೇಶದಿಂದಲೂ ದೋಣಿಯು ಪಾರಾಗಿ ಅಪಾರವಾದ ಸಮುದ್ರಕ್ಕೆ ಬಂದುದು ನಿಜವಾಗಿದ್ದರೂ ಆ ವೃದ್ಧನ ಜೀವವು ಇನ್ನೂ ಪೂರ್ಣವಾಗಿ ಸುರಕ್ಷಿತವಾಗಿರಲಿಲ್ಲೆಂದು ಹೇಳಬಹುದಾಗಿತ್ತು. ಯಾಕೆಂದರೆ ಬಿರುಗಾಳಿಯೆದ್ದ ಅಲ್ಲೋಲಕಲ್ಲೋಲವಾಗಿರುವ ಸಮುದ್ರದೊಳಗಿಂದ ಇನ್ನೂ ದಾಟಿ ಭೂಮಿಗೆ ಹತ್ತಬೇಕಾಗಿತ್ತು. ಇಂಥ ವಿಸ್ತೃತ ಸಮುದ್ರದಲ್ಲಿ ಗಂಭೀರ ಶಾಂತತೆಯು ನೆಲೆಸಿರುವಾಗ ಆ ನಾವಿಕನು ತನ್ನ ಗೋಣನ್ನು ಮೇಲಕ್ಕೆತ್ತಿ "ನೀವು ಮರಣದಂಡನೆಯನ್ನು ವಿಧಿಸಿದಂಥ ನಾವಿಕನ ಬಂಧುವೇ ನಾನು" ಎಂದು ಆ ರಾಜಪ್ರತಿನಿಧಿಗೆ ನಿವೇದಿಸಿದನು.

---

## ೪.

ಮುದುಕನು ಮುಖವೆತ್ತಿ ನೋಡಿದನು. ಆ ನಾವಾಡಿಗನಿಗೆ ೩೦ ವರುಷ ಇರಬಹುದು. ಅವನ ಮುಖದಲ್ಲಿ ಕಳೆಯೇ ಇರಲಿಲ್ಲ. ಕಣ್ಣಲ್ಲಿ ಮಾತ್ರ ವಿಲಕ್ಷಣ ತೇಜ ಉಕ್ಕುತ್ತಿತ್ತು. ಅವನ ಸ್ವಭಾವವು ಸೌಮ್ಯವಿದ್ದು, ಬುದ್ಧಿವಂತನ ಲಕ್ಷಣವುಳ್ಳವನಾಗಿದ್ದನು. ಅವನ ಟೊಂಕದಲ್ಲಿ ಎರಡು ಪಿಸ್ತೂಲು, ಒಂದು ಕತ್ತಿಯು ಜೋತಾಡುತ್ತಿದ್ದವು.

" ನೀನು ಯಾರು ? " ಎಂದು ಮುದುಕನು ವಿಚಾರಿಸಿದನು.

" ನಾನು ಯಾರು ಎಂಬದನ್ನು ಆಗಲೆ ಹೇಳಿದೆನಲ್ಲ ! " ಎಂದು ದೋಣಿಯ ಹುಟ್ಟಿನ ಕೈಬಿಟ್ಟು, ಮುಷ್ಟಿಯನ್ನು ಮಾಡಿ " ನನಗೆ ನಿನ್ನ ಪ್ರಾಣವು ಬೇಕಾಗಿದೆ " ಎಂದು ಹೇಳಿದನು.

" ಒಳ್ಳೆಯದಾಯಿತು. "

" ಹಾಗಾದರೆ ಸಿದ್ಧನಾಗು. "

" ಯಾತಕ್ಕೆ ಸಿದ್ಧನಾಗಲಿ ? "

" ಸಾಯುವದಕ್ಕಾಗಿ. "

" ಏನೆಂದು ? ಯಾವ ಕಾರಣಕ್ಕಾಗಿ ? "

ತುಸು ಹೊತ್ತು ಸ್ತಬ್ಧತೆಯು ನೆಲೆಸಿತು. ಅವನ ಪ್ರಶ್ನೆಯಿಂದ ಆ ನಾವಾಡಿಗನು ಸ್ವಲ್ಪ ಗೊಂದಲಗೆಟ್ಟನು; ಆದರೂ ಅವನು ಒಮ್ಮಿಂದೊಮ್ಮೆಲೆ " ಆಗಲೆ ನಾನು ನಿನ್ನ ಪ್ರಾಣವನ್ನು ತೆಗೆದುಕೊಳ್ಳಬೇಕಾಗಿದೆಯೆಂದು ಹೇಳಲಿಲ್ಲವೆ " ಎಂದನು.

" ಆದ್ದರಿಂದಲೇ ಯಾಕೆ ನನ್ನ ಪ್ರಾಣವನ್ನು ತೆಗೆದುಕೊಳ್ಳಬೇಕೆನ್ನುತ್ತೀ ಎಂದು ನಾನು ವಿಚಾರಿಸಿದ್ದು " ಎಂದು ಮುದುಕನೆಂದನು. ಇದನ್ನು ಕೇಳಿ ನಾವಾಡಿಗನು ಕಣ್ಣು ಕೆಂಪು ಮಾಡಿ " ನೀನು ನನ್ನ ಬಂಧುವಿಗೆ ಮರಣಶಿಕ್ಷೆ ಕೊಟ್ಟದ್ದಕ್ಕಾಗಿ " ಎಂದು ಅವನಿಗೆ ಹೇಳಿದನು.

" ನಾನಂತೂ ಅವನ ಜೀವವನ್ನುಳಿಸಿದ್ದೆನು. " ಎಂದು ಗಂಭೀರವಾಗಿ ಮುದುಕನು ಉತ್ತರಿಸಿದನು.

" ಅಹುದು. ಮೊದಲು ಜೀವ ಉಳಿಸಿದಿ ಆಮೇಲೆ ಜೀವ ತೆಗೆದು ಕೊಂಡಿ. "

" ಛೀ, ನಾನು ಅವನಿಗೆ ಮರಣ ಶಿಕ್ಷೆ ವಿಧಿಸಲಿಲ್ಲ. "

" ಹಾಗಾದರೆ ವಿಧಿಸಿದವರು ಯಾರು ? "

" ಅವನ ದುರ್ಲಕ್ಷ್ಯತೆಯೇ ಅವನಿಗೆ ಮೃತ್ಯುವಾಯಿತು. "

ನಾವಿಕನು ಮುದಕನನ್ನು ಕಣ್ತೆರೆದು ನೋಡಿದನು. ಹುಬ್ಬುಗಂಟಿಕ್ಕಿದವು.

" ನಿನ್ನ ಹೆಸರೇನು ? " ಎಂದು ಮುದುಕನು ಅವನನ್ನು ವಿಚಾರಿಸಿದನು.

" ನನ್ನ ಹೆಸರು ಹಲವುಲೋ. ಯಾವನು ನಿನ್ನನ್ನು ಕೊಲ್ಲಬೇಕೆಂದಿರುವನೊ ಅವನ ಹೆಸರು ಕೇಳಿ ಮಾಡುವದೇನು ? "

ಇಷ್ಟು ಹೊತ್ತಿಗೆ ಸೂರ್ಯನು ಮೇಲೆ ಬಂದಿದ್ದನು. ನಾವಿಕನ ಮುಖದ ಮೇಲೆ ಸೂರ್ಯಕಿರಣಗಳು ಬಿದ್ದಿದ್ದವು. ಅವನ ಸಿಟ್ಟಿನ ಸ್ವಭಾವವು ಒಡೆದು ಕಾಣುತ್ತಿತ್ತು. ಮುದುಕನು ಅವನನ್ನು ಲಕ್ಷ್ಯಪೂರ್ವಕವಾಗಿ ನೋಡಿದನು. ನಾವಿಕನು ಟೊಂಕದಲ್ಲಿಯ ಪಿಸ್ತೂಲು ತೆಗೆದು ಬಲಗೈಯಲ್ಲಿ ಹಿಡಿದನು. ಎಡಗೈಯಲ್ಲಿ ಹುಟ್ಟು ಹಿಡಿದುಕೊಂಡಿದ್ದನು.

ಮುದುಕನು ಗಡಿಬಿಡಿಯಿಂದ ಎದ್ದುನಿಂತು " ನಿನಗೆ ದೇವರಲ್ಲಿ ವಿಶ್ವಾಸ ಇದೆಯೇ ? " ಎಂದು ವಿಚಾರಿಸಿದನು.

" ಇರುತ್ತದೆ. " ಎಂದು ಗದ್ಗದಿತ ಅಂತಃಕರಣದಿಂದ ಅವನು ಹೇಳಿದನು.

" ನಿನ್ನ ತಾಯಿ ಇರುತ್ತಾಳೋ ? "

" ಇರುತ್ತಾಳೆ. "

ಆ ನಾವಿಕನಿಗೆ ಸಿಟ್ಟು ಬಂದು " ನಿನ್ನ ಪ್ರಶ್ನೆಗಳಿಗೆ ಉತ್ತರ ಕೊಟ್ಟದ್ದೇ ತಪ್ಪಾಯಿತು. ಸರದಾರರೇ, ನಿಮಗೆ ಒಂದೇ ಕ್ಷಣದ ಅವಕಾಶವನ್ನು ಕೊಡುತ್ತೇನೆ. " ಎಂದಂದು ಪಿಸ್ತೂಲು ಹಿಡಿದುಕೊಂಡೇ ನಿಂತನು.

" ನೀನು ನನಗೆ ಸರದಾರನೆಂದೇಕೆ ಸಂಬೋಧಿಸಿದಿ ? "

" ನಿಮ್ಮ ಯೋಗ್ಯತೆ ಇದೆಯೆಂದು ಹಾಗೆಂದೆ. "

" ಇರಲಿ, ನಿನಗೆ ಒಡೆಯರಾರೂ ಇಲ್ಲವೆ ? "

" ಇದ್ದಾರೆ, ಅವರು ಬಹಳ ಪ್ರಭಾವಶಾಲಿಗಳಾಗಿದ್ದಾರೆ. "

" ಅವರೆಲ್ಲಿರುತ್ತಾರೆ ? "

" ನನಗೆ ಗೊತ್ತಿಲ್ಲ. ಅವರು ಈ ಮೊದಲೇ ನಮ್ಮ ಊರನ್ನು ಬಿಟ್ಟಿ ದ್ದುತ್ತಾರೆ. ಅವರ ಹೆಸರು ಲ್ಯಾಂಟ್‌ನೆಕ್ ಎಂದಿದೆ. ಅವರು ಬ್ರಿಟನ್ನಿನ ರಾಜಕುಮಾರರು. ನಾನು ಅವರನ್ನು ಎಂದೂ ನೋಡಿಯೇ ಇಲ್ಲವಾದರೂ ಅವರನ್ನು ಮನ್ನಿಸುವದಿಲ್ಲೆಂದಲ್ಲ. "

" ನೀನು ಅವರನ್ನು ನೋಡಿರುವಿ ಎಂದು ತಿಳಿದುಕೋ. ಅವರ ಆಜ್ಞೆಯನ್ನು ಪಾಲಿಸುವಿಯೋ ಇಲ್ಲವೋ ಹೇಳು. "

" ನಿಸ್ಸಂಶಯವಾಗಿ ಪಾಲಿಸುತ್ತೇನೆ. ನಾನು ಅವರ ಆಜ್ಞೆಯನ್ನು ಪಾಲಿಸದಿದ್ದರೆ ಅಪರಾಧಿಯಾದೇನು ! ಮೊದಲು ದೇವರ ಆಜ್ಞೆಯನ್ನು ಪಾಲಿಸುತ್ತೇನೆ. ಆಮೇಲೆ ರಾಜನದು. ಯಾಕೆಂದರೆ ಅವನು ದೇವರಂತಿರು ವನು. ಆನಂತರ ಒಡೆಯನ ಆಜ್ಞೆ ಪಾಲಿಸುತ್ತೇನೆ. ಅವನೂ ರಾಜನಂತಿರು ವನು. ಆದರೆ ಅವನು ಯಾವನೇ ಇರಲೊಲ್ಲನೇಕೆ ? ನೀವು ಮಾತ್ರ ನನ್ನ ಬಂಧುವನ್ನು ಕೊಂದು ಹಾಕಿರುವಿರಿ ಆದ್ದರಿಂದ ಈಗ ನಾನು ನಿಮ್ಮನ್ನು ಕೊಲ್ಲುತ್ತೇನೆ. "

" ನಾನು ನಿನ್ನ ಬಂಧುವನ್ನು ಸುಮ್ಮನೆ ಕೊಂದಿರುವದಿಲ್ಲ. "

" ಸಾಕು ಮಾಡಿರಿ ಈ ಬಡಬಡಿಕೆಯನ್ನು . "

" ಹಾಗಾದರೆ ಹೊಡೆ ನನ್ನನ್ನು. ನೋಡು ನಿನ್ನೆದುರಿಗೆ ನಿಂತಿದ್ದೇನೆ. ಆದರೆ ನಾನು ಸಾಯುವ ಮೊದಲೇ ನನಗೆ ಧರ್ಮೋಪದೇಶಕನನ್ನು ಗಂಟು ಹಾಕಿಕೊಡು. ಅಂದರೆ ನನ್ನ ಪುಣ್ಯಪಾಪದ ವರದಿಯನ್ನು ಅವನಿಗೆ ಒಪ್ಪಿಸುತ್ತೇನೆ. "

" ಧರ್ಮೋಪದೇಶಕನೆ ? ಇಲ್ಲೆಲ್ಲಿಯ ಧರ್ಮೋಪದೇಶಕನು ? "

" ನಾನು ನಿನ್ನ ಬಂಧುವಿಗೆ ಧರ್ಮೋಪದೇಶಕನನ್ನು ಒದಗಿಸಿಕೊ ಟ್ಟಿದ್ದೆ. ಅದರಂತೆ ಈಗ ನೀನು ನನಗೆ ಧರ್ಮೋಪದೇಶಕನನ್ನು ಒದಗಿಸಿ ಕೊಡಲೇ ಬೇಕು. "

" ನಾನು ಈ ಸಮುದ್ರದಲ್ಲಿ ಎಲ್ಲಿಂದ ತರಲಿ ? "

" ಅತ್ತ ಯುದ್ಧ ನಡೆದಿದೆಯಲ್ಲ-ಅಲ್ಲಿಯೂ ಕೂಡ ಧರ್ಮೋಪದೇಶಕ ನಿರುತ್ತಾನೆ. ನಾನು ನನ್ನ ಪಾಪದ ಕ್ಷಮೆಯನ್ನು ಬೇಡದೆ ಸತ್ತರೆ ನನ್ನ ಆತ್ಮಕ್ಕೆ ಅಧೋಗತಿಯಾಗುವದು. "

ಆ ನಾವಿಕನು ತಲೆ ಕೆಳಗೆ ಹಾಕಿ ವಿಚಾರ ಮಾಡತೊಡಗಿದನು. ಈ ಸಂಧಿಯನ್ನು ಸಾಧಿಸಿ ಆ ಮುದುಕನು ಮಾತು ಆರಂಭಿಸಿದನು.

" ನನ್ನ ಆತ್ಮದ ಹಾನಿಯಷ್ಟೇ ಅಲ್ಲದೆ ನಿನ್ನ ಆತ್ಮದ್ದೂ ಆಗುವದು. ನಿನ್ನ ಬಗ್ಗೆ ನನಗೆ ಕನಿಕರವುಂಟಾಗುತ್ತದೆ. ನಿನ್ನ ಮನಸಿಗೆ ಬಂದಂತೆ ಮಾಡು. ನಾನು ನಿನ್ನ ಬಂಧುವಿಗೆ ಪ್ರಾಣದಾನ ಮಾಡಿ, ಅವನಿಗೆ ಧರ್ಮೋಪದೇಶಕನನ್ನು ಒದಗಿಸಿ, ನಾನು ನನ್ನ ಕರ್ತವ್ಯ ಪಾಲಿಸಿದ್ದೇನೆ. ಈಗ ನಿನ್ನ ಆತ್ಮದ ರಕ್ಷಣೆ ಮಾಡಬೇಕೆನ್ನುತ್ತೇನೆ ಒಂದು ತುಸು ವಿಚಾರ ಮಾಡು. ಅವಿಚಾರಕ್ಕೊಳಗಾಗಬೇಡ. ಕೇಳು, ಕೇಳು ಆ ತೋಫುಗಳ ಗರ್ಜನೆಯನ್ನು ! ಅಲ್ಲಿ ಕೆಲವರು ಸಾಯುತ್ತಾರೆ, ಮೂರ್ಛೆ ಹೊಂದು ತ್ತಾರೆ, ಗಾಯಗೊಂಡು ಬಳಲುತ್ತಿದ್ದಾರೆ. ತಮ್ಮ ಹೆಂಡಂದಿರ ಮುಖವನ್ನು ಪುನಃ ನೋಡದ ಎಷ್ಟೋ ಅಭಾಗಿ ಪತಿಗಳು, ಮಕ್ಕಳ ಮುಖದರ್ಶನ ಪಡೆಯದ ತಂದೆಗಳೂ, ಅಣ್ಣತಮ್ಮಂದಿರಿಗೆ ಎರವಾಗುವ ನಿನ್ನಂಥ ಹಲ ವಾರು ದುರ್ದೈವೀ ಬಂಧುಗಳೂ ಮೊದಲಾದವರು ಎಷ್ಟು ಮಂದಿ ಇರು ತ್ತಾರೋ ಏನೋ !. ಇದೆಲ್ಲ ಅನರ್ಥಕ್ಕೆ ಕಾರಣರಾರು ? ನಿನ್ನ ಸ್ವಂತ ಬಂಧುವಲ್ಲವೇ ಅವನು ? ನಿನ್ನದು ದೇವರಲ್ಲಿ ವಿಶ್ವಾಸವಿಲ್ಲವೇ ? ಅದೇ ದೇವನು, ಅವನ ಪ್ರೀತಿಯ ಮಗನು—ಫ್ರಾನ್ಸದ ರಾಜನು ತುರಂಗದಲ್ಲಿ ರುವನಾದ್ದರಿಂದ ಅವನ ಕಷ್ಟಗಳಿಗೆ ಮಿತಿಯಿದೆಯೆ ? ದೇವಸ್ಥಾನ, ಮತ್ತು ಸಾಧುಸಂತರಿಗಾಗುತ್ತಿರುವ ಪೀಡೆಯನ್ನು ಕಂಡು ದೇವರಿಗೆ ದುಃಖವಾಗು ತ್ತಿದೆ. ನಿನ್ನ ಬಂಧುವು ದೇವಭಕ್ತನಾಗಿದ್ದರೆ ಅವನು ದುರ್ಲಕ್ಷ್ಯ ಮಾಡು ತ್ತಿದ್ದಿಲ್ಲ. ತೋಫು ಗೊಂದಲ ಹಾಕುತ್ತಿದ್ದಿಲ್ಲ. ಹಡಗ ಹಾಳಾಗುತ್ತಿದ್ದಿಲ್ಲ. ಅವರೆಲ್ಲರನ್ನು ತೋಫಿನ ಬಾಯಿಗೆ ಕೊಟ್ಟು ನಾವಿಬ್ಬರೆ ಪಾರಾಗಿ ಬರದೆ ಎಲ್ಲರೂ ದಂಡೆಯನ್ನು ಸೇರುತ್ತಿದ್ದೆವು. ನಾವು ಕತ್ತಿಯನ್ನು ಕೈಲಿ ಹಿಡಿದು,

ರಾಜನ ಶುಭ್ರ ಧ್ವಜವನ್ನು ಹಾರಿಸುತ್ತ, ಆನಂದದಿಂದ ವೆಂಡಿಯ ಒಕ್ಕಲಿಗರನ್ನು, ಫ್ರಾನ್ಸವನ್ನು, ಫ್ರಾನ್ಸದ ರಾಜನನ್ನು ಸಂಕಟದಿಂದ ಬಂಧಮುಕ್ತ ಮಾಡುತ್ತಿದ್ದೆವು.!

"ನಾವು ಈ ಕೆಲಸ ಮಾಡುತ್ತಿದ್ದೆವು. ಆದರೆ ನಿನ್ನ ಬಂಧುವು ಅಡ್ಡ ಬಂದನು. ಈಗ ನಾನೊಬ್ಬನೇ ಆ ಕೆಲಸವನ್ನು ಮಾಡಹೊರಟಿರುವೆ. ನೀನು ನಡುವೆ ಬಂದಿ. ನೀನು ಎಂಥ ಅಘೋರ ಪಾಪವನ್ನು ಮಾಡಬೇಕೆನ್ನುತ್ತೀ. ನಿನ್ನ ಕೈಯಿಂದ ಸತ್ಕೃತ್ಯ ಮಾಡುವದಾಗದಿದ್ದರೆ ಕನಿಷ್ಠ ಪಕ್ಷಕ್ಕೆ ದುಷ್ಕೃತ್ಯವನ್ನಾದರೂ ಮಾಡಬೇಡ. ವೆಂಡಿಯ ಯುದ್ಧವೆಂದರೆ ಧಾರ್ಮಿಕರು ಧರ್ಮಲಂಡರೊಡನೆ ಹೊರಾಡುವ ಯುದ್ಧವು. ಸೈತಾನನು ಈಶ್ವರನನ್ನು ಕಾಲಲ್ಲಿ ಮೆಟ್ಟಿದ್ದರಿಂದ ಅವರ ಪಾರುಪತ್ಯಕ್ಕಾಗಿ ನನ್ನಂಥ ನಮ್ರಸೇವಕನು ತನ್ನ ಪ್ರಾಣಾರ್ಪಣ ಮಾಡಬೇಕೆನ್ನುತ್ತಾನೆ. ನಿನ್ನಬಂಧುವು ರಾಕ್ಷಸರಿಗೆ ನೆರವಾದನು. ನೀನೂ ಅವನನ್ನು ಅನುಕರಿಸಬೇಡ. ಹುಂ, ತೆಗೆದುಕೋ ನನ್ನ ಪ್ರಾಣವನ್ನು. ನನ್ನ ಪ್ರಾಣವನ್ನು ತೆಗೆದುಕೊಂಡಿಯೆಂದರೆ ನಿನ್ನ ಕೆಲಸವಾಯಿತು. ನಿನ್ನ ಬಗ್ಗೆ ನನ್ನ ಅಭಿಪ್ರಾಯ ಬೇರೆಯೇ ಆಗಿತ್ತು. ನಾನು ಮೋಸಹೋದೆನು. ನಿನ್ನ ಮಾತೇ ಸರಿಯಾದುದು. ನಾನು ನಿನ್ನ ಬಂಧುವಿನ ಪ್ರಾಣವನ್ನು ತೆಗೆದುಕೊಂಡಿದ್ದೇನೆ. ನಿನ್ನ ಬಂಧುವು ಸಾಹಸಿಯೆಂದು ನಾನು ಅವನಿಗೆ ಬಹುಮಾನ ಕೊಟ್ಟೆನು. ಅವನು ಅಷ್ಟೇ ದುರ್ಲಕ್ಷ್ಯ ಮಾಡಿದ್ದರಿಂದ ಅವನನ್ನು ಶಿಕ್ಷಿಸಿದೆನು. ಅವನು ತನ್ನ ಕರ್ತವ್ಯ ಮರೆತರೂ ನಾನು ಮರೆಯಲಿಲ್ಲ. ದೇವರ ಸಾಕ್ಷಿಯಾಗಿ ನಾನು ನಿನಗೆ ಹೇಳುತ್ತೇನೆ ಕೇಳು. ನಿನ್ನ ಬಂಧುವಿನ ಸ್ಥಳದಲ್ಲಿ ನನ್ನ ಬಂಧುವಾಗಲಿ, ಮಗನೇ ಆಗಲಿ ಇದ್ದರೆ ಅವರಿಗೂ ಇದೇ ಶಿಕ್ಷೆಯನ್ನು ಕೊಡುತ್ತಿದ್ದೆನು. ಆದರೆ ಈಗ ಮಾತ್ರ ನಾನು ನಿನ್ನ ಕೈಯಲ್ಲಿ ಸಿಕ್ಕಿರುವೆನು. ನೀನು ನಿನ್ನ ಕಪ್ತಾನನ್ನೇ ಮೋಸಗೊಳಿಸಿ ನಿನ್ನ ಹೆಸರಿಗೆ ಕಲಂಕವನ್ನು ಹಚ್ಚಿಕೊಂಡೆ. ನಿನ್ನ ಮೇಲೆ ವಿಶ್ವಾಸವಿಟ್ಟು ನನ್ನನ್ನು ನಿನ್ನ ಸ್ವಾಧೀನ ಪಡಿಸಲಾಯಿತು; ಆದರೆ ನೀನು ವಿಶ್ವಾಸಘಾತ ಮಾಡಬಯಸುತ್ತೀ. ನಿನಗೆ ನನ್ನ ಪ್ರಾಣವನ್ನುಳಿಸಲು ಹೇಳಿದರೆ ನೀನು ನನ್ನ ಪ್ರಾಣವನ್ನೇ ತೆಗೆದುಕೊಳ್ಳ

ಬೇಕೆನ್ನುತ್ತೀ. ಇದರಿಂದ ಯಾರಿಗೆ ಹಾನಿಯಾಗುವದೆಂಬದು ನಿನಗೆ ಗೊತ್ತಿದೆಯೋ ? ನಿನ್ನದೆಲ್ಲವೂ ಹಾಳಾಗುತ್ತದೆ. ದೇವರಿಂದ ನಿಯಮಿಸಲ್ಪಟ್ಟ ಕಾರ್ಯಕ್ಕೆ ವಿಘ್ನವಾಗಿ ಬಂದು ನೀನೆಂಥ ರೌರವ ನರಕದ ದಾರಿಯನ್ನು ಹಿಡಿದಿರುವೆ ಎಂಬ ಕಲ್ಪನೆಯಾದರೂ ನಿನಗಿದೆಯೆ ? ನಿನ್ನ ಪಾಪದ ಕೊಡವನ್ನು ತುಂಬಿಕೋ. ನಿನ್ನ ಕರಾಳ ಕೃತ್ಯದಿಂದ ಅಸತ್ಯದ ಜಯವಾಗಲಿ! ಪವಿತ್ರ ಧರ್ಮಸ್ಥಳಗಳು ಭ್ರಷ್ಟವಾಗಲಿ! ಸಾಧುಸಂತರಿಗೆ ಪೀಡೆಯುಂಟಾಗಲಿ! ಧರ್ಮಕ್ಕಾಗಿ ತಳಮಳಿಸುವಂತಹ ನನ್ನಂಥವರ ಹೇಳಹೆಸರಿಲ್ಲದೆ ಹೋಗಲಿ! ಯಾವ ದೇವಸ್ಥಾನದ ಪವಿತ್ರ ಗಂಟೆಯ ನಿನಾದದಿಂದ ಭಕ್ತರು ಪರಮೇಶ್ವರನ ಜಯಜಯಕಾರ ಮಾಡುತ್ತಾರೋ ಅಂಥಗಂಟೆಗಳನ್ನು ಕರಗಿಸಿ ತೋಫಿನ ಗುಂಡುಗಳನ್ನು ಮಾಡಿ ನಿನ್ನ ತಾಯಿ—ಬಂಧುಭಗಿನಿಯರ ಎದೆಯಲ್ಲಿ ಇರಿಯುವಂತಾಗಲಿ! ನಾನು ನಿನ್ನ ಬಂಧುವಿನ ಜೀವ ತೆಗೆದುಕೊಂಡಿದ್ದರೂ ದೇವನ ಆಜ್ಞೆಯಿಂದೇ ನಾನು ಮಾಡಿದ್ದೇನೆ. ನೀನು ದೇವರಿಗೆ ದೇವನಾಗಬೇಕೆನ್ನುತ್ತೀ. ನೀನು ಮಾಡಬೇಕೆಂಬದನ್ನು ಪೂರ್ಣ ವಿಚಾರ ಮಾಡು. ದೇವರೆದುರಿಗೆ ನೀನು ವರದಿ ಒಪ್ಪಿಸಬೇಕಾಗುವದೆಂಬದನ್ನು ಮರೆಯಬೇಡ. ದೈವಗೇಡಿಯೇ, ದೇವರ ರಾಜ್ಯದಲ್ಲಿ ನಿನಗೆ ನರಕದ ಶಿಕ್ಷೆಯಲ್ಲದೆ ಬೇರಾವ ಶಿಕ್ಷೆಯಾಗುವದಿಲ್ಲ ಆದರೆ ನಿನ್ನಂತೆ ನನ್ನನ್ನು ನರಕಕ್ಕೇಕೆ ಎಳೆಯುವಿ? ನಾನು ನರಕವಾಸ ಭೋಗಿಸುವದಾದರೆ ನಿನ್ನ ಪಾಪದಿಂದಲ್ಲದೆ ಮತ್ತಾವುದರಿಂದಲೂ ಅಲ್ಲ. ನಮ್ಮಿಬ್ಬರ ದುರ್ಗತಿಯು ನಿನ್ನ ಕೈಯಲ್ಲಿದೆ. ಇದಕ್ಕೆಲ್ಲಕ್ಕೂ ನೀನೊಬ್ಬನೆ ಹೊಣೆಗಾರನೆಂಬದನ್ನು ಮರೆಯಬೇಡ. ನಡೆ. ನಿನ್ನ ಪಿಸ್ತೂಲು ಎತ್ತು. ನೋಡು ನನ್ನ ಎದೆಯನ್ನು ತೆರೆದು ನಿಂತಿದ್ದೇನೆ. ಹಾರಿಸು ಗುಂಡು. ನನ್ನ ಪ್ರಾಣವನ್ನು ತೆಗೆದುಕೋ."

**ಮುದುಕನು ಒಳ್ಳೆ ಆವೇಶದಿಂದ ಈ ಮಾತುಗಳನ್ನಾಡುತ್ತಿದ್ದನು. ಅವನ ಪ್ರತಿಯೊಂದು ಮಾತುಗಳು ಆ ನಾವಿಕನ ಎದೆಯಲ್ಲಿ ನಟ್ಟು ಬೆನ್ನಲ್ಲಿ ಪಾರಾಗುತ್ತಿದ್ದವು. ಅವನ ಮುಖವು ಬಿಳುಪೇರತೊಡಗಿತ್ತು. ಅವನ ಮುಖ**

ದಲ್ಲಿ ಬೆವರು ಸುರಿಯಹತ್ತಿತ್ತು. ಅವನು ಒಂದೇ ಸವನೆ ನಡುಗಹತ್ತಿದನು. ಮುದುಕನ ಉದ್ಗಾರಗಳು ನಿಂತಮೇಲೆ ಆ ನಾವಿಕನು ಪಿಸ್ತೂಲನ್ನು ಬೀಸಾಡಿ "ಮಹಾರಾಜರೇ, ಕ್ಷಮಿಸಬೇಕು. ನಿಮ್ಮ ಭಾಷಣವು ಪ್ರತ್ಯಕ್ಷ ಪರಮೇಶ್ವರನು ಮಾಡಿದಂತಿದೆ. ನಾನು ಪಾಪಿಯಿದ್ದೇನೆ. ನನ್ನ ಬಂಧುವೂ ಪಾಪಿಯೇ ಇದ್ದನು. ಅವನ ಪಾಪಕ್ಷಾಲನಾರ್ಥವಾಗಿ ನಾನೇನು ಮಾಡಬೇಕೆಂಬದನ್ನು ಹೇಳಿದರೆ ಹಾಗೆ ಮಾಡುತ್ತೇನೆ. ನಾನು ನಿಮ್ಮ ಪಾದ ಸೇವಕನಾಗಿದ್ದೇನೆ. ಮಹಾರಾಜರೇ, ಆಜ್ಞೆ ವಿಧಿಸಿರಿ. ನಾನು ಶಿರಸಾವಂದ್ಯನಾಗಿ ನಡೆಯುತ್ತೇನೆ." ಎಂದು ಹೇಳಿದನು.

"ನಾನು ನಿನ್ನನ್ನು ಕ್ಷಮಿಸಿದ್ದೇನೆ." ಎಂದು ಮುದುಕನಂದು ಅವನನ್ನು ಪ್ರೇಮಾದರಗಳಿಂದ ಮಾತಾಡಿಸಿ ಬೆನ್ನು ಚಪ್ಪರಿಸಿದನು.

ಸಮುದ್ರ ದಂಡೆಗೆ ಹತ್ತಬೇಕಾದರೆ ಅವರಿಗೆ ೩೬ ತಾಸು ಹಿಡಿದವು. ಅಂದಿನ ರಾತ್ರಿಯನ್ನು ಅವರು ಸಮುದ್ರದಲ್ಲಿಯೇ ಕಳೆದರು. ಹಲಮಲೋನು ಒಳ್ಳೇ ನಿಷ್ಣಾತ ನಾವಿಕನಾಗಿದ್ದನು. ಒಳ್ಳೇ ಹಂಚಿಕೆಯಿಂದ ತೆರೆಗಳಿಗೆ ಸಿಗದೆ, ಶತ್ರುಗಳ ಕಣ್ಣಿಗೆ ಬೀಳದೆ ಸಮುದ್ರದಲ್ಲಿ ಮಾರ್ಗಮಾಡಿಕೊಳ್ಳುತ್ತಾ ಸಾಗುತ್ತಿದ್ದನು. ಹೀಗೆ ಯುಕ್ತಿ ಪ್ರಯುಕ್ತಿಗಳಿಂದ ಮಾರ್ಗ ಕ್ರಮಿಸುತ್ತ ಅವರು ಎರಡನೆಯ ದಿನ ಸಂಜೆಗೆ ದಂಡೆಗೆ ತಲುಪಿದರು. ಇದ್ದಷ್ಟು ತಿಂಡಿಯಲ್ಲಿ ತಾನಿಷ್ಟು ತೆಗೆದುಕೊಂಡು ಮುದುಕನು ನಾವಿಕನಿಗಿಷ್ಟು ಕೊಟ್ಟನು. ಹಲಮಲೋನು ಸಾಮಾನುಗಳನ್ನು ತಲೆಯ ಮೇಲೆ ಹೊತ್ತುಕೊಂಡು ಡೋಣಿಯನ್ನು ಸಮುದ್ರದಲ್ಲಿಯೇ ಬಿಟ್ಟು "ಮಹಾರಾಜರೇ, ನೀವು ನನ್ನ ಬೆನ್ನಹಿಂದಿನಿಂದ ಬರುವಿರೋ ಅಥವಾ ನನ್ನ ಮುಂದೆ ಬರುವಿರೋ" ಎಂದು ಕೇಳಿದನು.

"ಎರಡೂ ಬೇಡ. ನಾವಿಬ್ಬರೂ ಬೇರೆ ಬೇರೆಯಾಗೋಣ. ಇಬ್ಬರೂ ಒಂದೇ ಕಡೆಗಿರುವದೆಂದರೆ ತೊಂದರೆದಾಯಕವಿದೆ. ಸಾವಿರಾರು ಜನರು ಒಂದೆಡೆಗೆ ಇರಬಹುದು ಇಬ್ಬರೇ ಒಂದು ಕಡೆಗೆ ಬೇಡ. ಒಬ್ಬೊಬ್ಬರೇ ಇರುವದು ಒಳ್ಳೆಯದು" ಎಂದು ಮುದುಕನು ಹೇಳಿದನು. ಆಮೇಲೆ

ಮುದುಕನು ಜೇಬಿನೊಳಗಿನಿಂದ ಮಧ್ಯಭಾಗದಲ್ಲಿ ರಾಜಚಿನ್ಹವಿರುವ ಕೈವಸ್ತ್ರವನ್ನು ತೆಗೆದು, ನಿನಗೆ ಓದಲು ಬರುತ್ತದೆಯೋ ? " ಎಂದು ಕೇಳಿದನು.

" ಇಲ್ಲ. ಓದುಬರೆಯಲು ಕಲಿಯಲಿಲ್ಲ. "

" ಅದೇ ಒಳ್ಳೆಯದು. ಓದು ಬರೆಯ ಬಲ್ಲವರು ಇಲ್ಲದ ರಗಳೆ ಎಬ್ಬಿಸುತ್ತಾರೆ. ಹಾಗಾದರೆ ನೆನಪಿನ ಶಕ್ತಿಯಿಂದಲೇ ಸಾಗಿಸುತ್ತಿಯಾ? "

" ಅಹುದು. "

" ಹಾಗಾದರೆ ಕೇಳು. ನೀನು ಬಲಬದಿಯ ದಾರಿ ಹಿಡಿ. ನಾನು ಎಡಬದಿಯ ದಾರಿ ಹಿಡಿಯುತ್ತೇನೆ. ನಿನ್ನಗೂಡ ಆ ಚೀಲವಿರಲಿ. ಅದರಿಂದ ನೀನು ಒಕ್ಕಲಿಗನಂತೆ ಕಾಣಿಸುತ್ತೀ. ನಿನ್ನ ಪಿಸ್ತೂಲು, ಕತ್ತಿಯನ್ನು ಬಚ್ಚಿಟ್ಟುಕೋ. ಗಿಡದ ಒಂದು ಟೊಂಗೆಯನ್ನು ಕಡಿದು ಕೈಯಲ್ಲಿ ಹಿಡಿದುಕೊಂಡು ಹೊಲಗಳೊಳಗಿಂದ ಅಡಗಿಕೊಳ್ಳುತ್ತ ಹೋಗು. ಮಾರ್ಗಕ್ರಮಿಸುವಾಗ ಜನರಿಂದ ದೂರ ಇರು. ಆದಷ್ಟು ಮಟ್ಟಿಗೆ ಮುಖ್ಯಮಾರ್ಗಗಳಿಂದ ಹೋಗಬೇಡ. ಪೂಲು ಹತ್ತಿ ಹೋಗಬೇಡ. ನದಿಗಳನ್ನು ಈಸಿಯೇ ಪಾರಾಗು. "

" ಹಾಗೆಯೇ ಮಾಡುವೆನು. ಈಗಂತೂ ರಾತ್ರಿಯಾಯಿತು. ನೀವು ಎಲ್ಲಿ ಮಲಗಿಕೊಳ್ಳುವಿರಿ? "

" ನೀನು ನನ್ನ ಬಗ್ಗೆ ಎಳ್ಳಷ್ಟು ಚಿಂತೆ ಮಾಡದಿರು. ನೀನೇನು ಮಾಡುವಿ ಹೇಳು? "

" ನಾನೊ ಎಲ್ಲಾದರೂ ಗಿಡದ ಹೊದರಿನಲ್ಲಿ ಬಿದ್ದುಕೊಳ್ಳುವೆನು. ನಾವಿಕನ ಉದ್ಯೋಗ ಕೈಕೊಳ್ಳದ ಮೊದಲು ನಾನು ಒಕ್ಕಲತನವನ್ನೇ ಮಾಡುತ್ತಿದ್ದೆ. "

" ಅಂದಮೇಲೆ ಕೇಳುವದೇನು, ಬಹಳೇ ಒಳಿತೇ ಆಯಿತು. ಆ ಟೊಪ್ಪಿಗೆಯನ್ನು ತೆಗೆದೊಗೆ. ಅದರಿಂದ ನೀನು ನಾವಿಕನೆಂದು ತಿಳಿದು ಬರುತ್ತಿದೆ. ತಲೆಯ ಮೇಲೆ ಮತ್ತೇನನ್ನಾದರೂ ಹಾಕಿಕೊಳ್ಳು. "

" ಒಕ್ಕಲಿಗರ ಟೊಪ್ಪಿಗೆಯು ನನಗೆ ಸಹಜವಾಗಿ ಸಿಗಬಲ್ಲದು. ನಾನು ಒಂದನ್ನು ಒಕ್ಕಲಿಗರ ಕಡೆಯಿಂದ ಕೊಂಡುಕೊಳ್ಳುತ್ತೇನೆ. "

" ಇನ್ನು ಈ ಅರಣ್ಯದ ಬಗ್ಗೆ ನಿನಗೆ ಗೊತ್ತಿದೆಯೇ? "

" ಸಂಪೂರ್ಣವಾಗಿ ಗೊತ್ತಿದೆ. "

" ಹೆಸರುಗಿಸರು ಎಲ್ಲವೂ ಗೊತ್ತಿದೆಯೇ? "

" ಅಹುದು, ಹೆಸರೂ ನೆನಪಿವೆ. "

" ನಾನು ಹೇಳಿದ್ದೆಲ್ಲನ್ನೂ ಲಕ್ಷ್ಯದಲ್ಲಿಟ್ಟುಕೋ. ಯಾವುದೂ ಮರೆಯದಿರು. "

" ಇಲ್ಲ. "

" ನೀನು ದಿನಕ್ಕೆ ಎಷ್ಟು ನಡೆಯಬಲ್ಲೆ? "

" ನಾನು ೨೦-೩೦ ಮೈಲು ನಡೆಯಬಹುದು. "

" ನಿನಗೆ ಅಷ್ಟು ನಡೆಯಲೇ ಬೇಕಾಗುವದು. ಈಗ ಹೇಳುವ ಮಾತುಗಳಲ್ಲಿ ಯಾವುದೂ ಮರೆಯಬಾರದು, ತಿಳಿಯಿತೇ? "

" ನಿನಗೆ ಈ ಗುಡ್ಡದಾಚೆಗಿರುವ ಅರಣ್ಯ ಗೊತ್ತಿದೆಯೇ? ಅಲ್ಲಿಗೆ ಮೊದಲು ಹೋಗು. ಈ ಅರಣ್ಯದ ತೀರ ಕೊನೆಗೆ ಹೋದಿಯೆಂದರೆ ಅಲ್ಲೊಂದು ದೊಡ್ಡ ಗಿಡವು ಹತ್ತುತ್ತದೆ. ಅಲ್ಲಿ ನಿಲ್ಲು. ಅಲ್ಲಿ ನೀನಾರ ದೃಷ್ಟಿಗೂ ಬೀಳಲಾರಿ. ನೀನು ಸನ್ನೆ ಮಾಡಬೇಕು. ಸನ್ನೆ ಹೇಗೆ ಮಾಡಬೇಕೆಂಬದು ಗೊತ್ತಿದೆಯೇ ? ಗಲ್ಲವನ್ನು ಉಬ್ಬಿಸಿ ಗೂಗೆಯ ಹಾಗೆ ಕೂಗಬೇಕು. " ಎಂದೊಡನೆ ಹಲಮೋಲನು ಆ ಪ್ರಕಾರ ಮಾಡಿಯೇ ತೋರಿಸಿದನು. ಅದನ್ನು ಕೇಳಿ ಆ ಮುದುಕನು ' ಅಹುದು ಸರಿಯಾಗಿ ಮಾಡಬಲ್ಲೆ ' ಎಂದು ಹೇಳಿದನು.

ತುಸು ವೇಳೆಯನಂತರ ಮುದುಕನು ಆ ಹಸಿರು ವಸ್ತ್ರಕ್ಕೆ ವಿಶಿಷ್ಟತರವಾದೊಂದು ಗಂಟನ್ನು ಹಾಕಿ " ಇದು ನನ್ನ ಅಧಿಕಾರದ್ಯೋತಕವಾಗಿದೆ. ನನ್ನ ಹೆಸರು ಹೇಳುವ ಅವಶ್ಯಕತೆಯಿಲ್ಲ. ಈ ಗಂಟೇ ಸಾಕು. ಇದನ್ನು ತೆಗೆದುಕೋ " ಎನ್ನಲಾಗಿ ಹಲಮೋಲನು ಕೆಳಗೆ ಬಗ್ಗಿ ಅದನ್ನು ತೆಗೆದುಕೊಂಡು ಜತನದಿಂದಿರಿಸಿಕೊಂಡನು. ಆಮೇಲೆ ಆ ಮುದುಕನು " ಬಂಡುಮಾಡಿರಿ. ಯಾರಿಗೂ ದಯಾಮಾಯಾ ತೋರಿಸಬೇಡಿರಿ. " ಎಂದು ತನ್ನ ಸಂದೇಶವನ್ನಿತ್ತನು.

"ಈ ಅರಣ್ಯದ ಕಡೆಗೆ ಹೋದಾಗ ಹಿಂದೆ ಹೇಳಿದಂತೆ ಮೂರು ಸಲ ಕೂಗು ಮತ್ತು ನನ್ನ ಸಂದೇಶವನ್ನು ಹೇಳು. ಅಂದರೆ ಒಬ್ಬ ಮನುಷ್ಯನು ಮೇಲೆ ಬರುವನು."

"ಆ ಗಿಡದ ಬುಡದಲ್ಲಿರುವ ಗುಪ್ತಗವಿಯೊಳಗಿಂದ ಬರುವನೇ?"

"ಅಹುದು, ಈ ಗಂಟನ್ನು ಅವನಿಗೆ ತೋರಿಸು. ಅಂದರೆ ನೀನಾರೆಂಬದು ಅವನಿಗೆ ಹೊಳೆಯುವದು. ಮುಂದೆ ಅವನು ತೋರಿಸಿದ ಮಾರ್ಗ ಹಿಡಿದು ಹೋಗು. ಬಹುದೂರ ಹೋದ ಮೇಲೆ ಮತ್ತೊಂದು ಅರಣ್ಯ ಬರುತ್ತದೆ. ಅಲ್ಲೊಬ್ಬ ಕುಂಟ ಮನುಷ್ಯನಿರುತ್ತಾನೆ. ಸಂಕೇತಕೂಗು ಕೂಗಿದೆಯೆಂದರೆ ಮೇಲೆಬಂದು ನಿನ್ನನ್ನು ಗುರುತಿಸುವನು. ಅವನು ಈ ವರೆಗೆ ಯಾರನ್ನೂ ಕ್ಷಮಿಸಿಯೇ ಇಲ್ಲ. ಅವನೊಡನೆ ಎಚ್ಚರದಿಂದ ನಡೆದುಕೊಳ್ಳು. ಸುತ್ತು ಮುತ್ತಲಿನ ಅರಣ್ಯದಲ್ಲಿರುವ ಜನರು ಬಂಡೇಳುವ ಸಿದ್ಧತೆಯಲ್ಲಿರಬೇಕೆಂಬ ನನ್ನ ಸಂದೇಶವನ್ನು ಅವನಿಗೆ ಹೇಳು. ಅಲ್ಲಿಂದ ಮುಂದೆ ೧–೨ ಮೈಲು ಹೋದಮೇಲೆ ಮತ್ತೊಂದು ಅರಣ್ಯ ಬರುತ್ತದೆ. ನಿನ್ನ ಕೂಗಿಗೆ ಒಳಗಿನಿಂದೊಬ್ಬನು ಹೊರಬರುವನು. ನೀನು ಅವನಿಗೆ ನನ್ನ ಸಂದೇಶ ಹೇಳಿ, ಕಿಲ್ಲೆಯ ವ್ಯವಸ್ಥೆಯನ್ನು ನೀಟಾಗಿರಿಸಬೇಕೆಂದು ತಿಳಿಸು. ಮುಂದೆ ಹೋದಿಯೆಂದರೆ ಮತ್ತೆ ಇಂಥ ಅರಣ್ಯಗಳೇ ಹತ್ತುತ್ತವೆ. ಅಲ್ಲಿದ್ದವರೆಲ್ಲರಿಗೂ ಅದೇ ಆಜ್ಞೆಯನ್ನು ಕೊಡುತ್ತ ನಡೆ. ನಾನೇನೂ ಬರೆದುಕೊಡುವದಿಲ್ಲ. ಯಾಕೆಂದರೆ ಬಂಡುಗಾರರು ಲೇಖನದಲ್ಲಿ ಸಿಕ್ಕಬಾರದು. ಅಲ್ಲೊಬ್ಬ ಮನುಷ್ಯನಿರುತ್ತಾನೆ. ಅವನಿಗೆ ಕಟ್ಟಿಗೆಯನ್ನು ಹಿಡಿದುಕೊಂಡು ಹಳ್ಳದಾಚೆಗೆ ಹಾರಲು ಬರುತ್ತದೆ."

"ಅದೇನು ದೊಡ್ಡ ಕೆಲಸ! ನಾನೂ ಹಾರಬಲ್ಲೆ."

"ಇರಲಿ. ಹೀಗೆ ನೀನು ಅರಣ್ಯದ ಮೇಲೆ ಅರಣ್ಯಗಳನ್ನು ದಾಟಿ ಹೋದಿಯೆಂದರೆ ನಿನಗೆ ಲಾಟೋರ ಕಿಲ್ಲೆಯು ಸಿಗುತ್ತದೆ. ಅದನ್ನು ನೀನು ಬಲ್ಲೆಯಾ?"

"ಅದನ್ನೇನು ಕೇಳುವಿರಿ? ನಾನು ಅಲ್ಲಿಯವನೇ."

" ಅಹುದೋ. ಬಹು ಒಳ್ಳೇಯದಾಯಿತು. "

" ಆ ಹಳೆಯ ಬುರುಜು. ಅದಂತೂ ನಮ್ಮೊಡೆಯರು ಪೀಡ್ಯಾನು ಪೀಡಿಯಿಂದ ನೆಲಸಿದ ಮನೆ ! ಅದರ ಕಬ್ಬಿಣದ ಬಾಗಿಲವೆಂಥದು ! ಎಷ್ಟು ತೋಫು ಬಡಿದರೂ ಒಡೆಯದಂಥದು ! ಹಳೆಯ ಮತ್ತು ಹೊಸ ಕಟ್ಟಡದ ನಡುವೆ ಇದೆ. ಹೊಸ ಕಟ್ಟಡದಲ್ಲಿ ದೊಡ್ಡದೊಂದು ಧಾರ್ಮಿಕ ಗ್ರಂಥಾಲಯವಿದೆ. ಅದನ್ನು ನೋಡಲು ಜನರು ದೂರ ದೂರ ದೇಶದಿಂದ ಬರುತ್ತಾರೆ. ಕಿಲ್ಲೆಯ ಹತ್ತಿರದ ಹೊಂಡದಲ್ಲಿ ಎಷ್ಟೊಂದು ಕಪ್ಪೆಗಳಿವೆ ! ನಾನು ಚಿಕ್ಕವನಿದ್ದಾಗ ಅವುಗಳೊಡನೆ ಆಡುತ್ತಿದ್ದೆನು. ಈ ಕಿಲ್ಲೆಯ ತಳದಲ್ಲಿ ಒಂದು ಗವಿಯಿದೆ. ಅದರ ಗುಟ್ಟು ನನ್ನೊಬ್ಬನನ್ನು ಬಿಟ್ಟು ಇನ್ನಾರಿಗೂ ಗೊತ್ತಿಲ್ಲ. "

" ಏನು ಗವಿಯಿನೆಯೋ ? ನನಗಂತೂ ಗೊತ್ತಿರುವದಿಲ್ಲ. "

" ಹಿಂದಕ್ಕೊಮ್ಮೆ ಈ ಕಿಲ್ಲೆಗೆ ಮುತ್ತಿಗೆ ಬಿದ್ದಿತ್ತು. ಆಗ ಈ ಗವಿಯೊಳಗಿಂದ ಎಲ್ಲ ಜನರೂ ಪಾರಾಗಿ ಹೋಗಿ ಅಡವಿಯಲ್ಲಿ ಹೊಕ್ಕರು. ನಿಮಗೆ ಗೊತ್ತಿರದಿದ್ದರೂ ನನಗೆ ಇದೆ. ಬೇರೆ ಯಾರಿಗೂ ಇದರ ಸುಳುವು ಹತ್ತಿಲ್ಲ. ನನ್ನ ತಂದೆಯು ನನಗದನ್ನು ತೋರಿಸಿದ್ದನು. ನಾನು ಅಡವಿಯೊಳಗಿಂದ ಸಹಜವಾಗಿ ಆ ಗವಿಯನ್ನು ಪ್ರವೇಶಿಸಬಲ್ಲೆ. ಗವಿಯಿಂದ ಹೊರಬಿದ್ದು ಅರಣ್ಯವನ್ನು ಸೇರಬಲ್ಲೆ. "

" ನಿನ್ನ ತಿಳಿವಳಿಕೆ ತಪ್ಪಿರಬೇಕು ಅಲ್ಲಿ ಗವಿಯಿದ್ದರೆ ನನಗೆ ತಿಳಿಯದೆ ಇರುತ್ತದೆಯೋ ಎಂದಿಗಾದರೂ ? "

" ಮಹಾರಾಜ, ನನಗೆ ಪೂರ್ಣ ಗೊತ್ತಿದೆ. ಅಲ್ಲೊಂದು ಬಂಡೆಗಲ್ಲಿದೆ. ಅದು ತಿರುಗುತ್ತದೆ. "

" ಏನು ಕಲ್ಲು ತಿರುಗುತ್ತದೆಯೋ ! ನೀನು ಹುಂಬನಂತೆ ಏನಾದರೂ ಮಾತಾಡುತ್ತೀ. ನಿಮ್ಮ ಕಲ್ಲು ತಿರುಗುತ್ತದೆ, ಹಾಡುತ್ತದೆ, ಉಣ್ಣುತ್ತದೆಯಲ್ಲವೇ ? "

'ಮಹಾರಾಜ,ನಾನೇ ನನ್ನ ಕೈಯಿಂದ ತಿರುಗಿಸಿದ್ದೇನೆ. ಮುಂದೇನು?'

ತನ್ನ ಜೇಬಿನಲ್ಲಿ ಕೈಹಾಕಿ ಮುದುಕನು " ಓಹೋ, ಹಣದ ವಿಷಯವನ್ನು ತೀರ ಮರೆತೇ ಬಿಟ್ಟಿರುವೆ. ಈ ಚೀಲ ಮತ್ತು ಪುಸ್ತಕ ತೆಗೆದುಕೋ, ಈ ಪುಸ್ತಕದಲ್ಲಿ ಮೂವತ್ತುಸಾವಿರ ನೋಟುಗಳಿವೆ. ಆದರೆ ಎಲ್ಲವೂ ಖೊಟ್ಟಿ ಇವೆ. ಈ ಚೀಲದಲ್ಲಿ ಮೋಹರುಗಳಿವೆ. ಅವು ಮಾತ್ರ ನಿಜವಿವೆ. ನನ್ನ ಹತ್ತಿರವಿರುವಷ್ಟನ್ನೂ ಕೊಟ್ಟಿರುತ್ತೇನೆ. ನನಗೇನು ಹಣದ ಅವಶ್ಯಕತೆ ಬೀಳುವದಿಲ್ಲ " ಎಂದು ಅವನಿಗೆ ಹೇಳಿದನು.

ಆ ನಂತರ ಮುದುಕನು ಹಲಮಲೋನಿಗೆ ಎಲ್ಲ ಅಡವಿಗಳ, ಕಿಲ್ಲೆಗಳ, ಮನುಷ್ಯರ ಬಗ್ಗೆ ಎಲ್ಲ ಸಂಗತಿಯನ್ನು ತಿಳುಹಿಸಿ ಕೊನೆಗೆ " ನಾನಿವೆಲ್ಲವನ್ನೂ ಹೇಳಿದ್ದೇನೆ. ನಿನಗೆ ಗೊತ್ತಿರದಿದ್ದರೂ ಎಲ್ಲವನ್ನೂ ನೆನಪಿನಲ್ಲಿಟ್ಟುಕೋ. ನಿನ್ನಲ್ಲಿ ನನ್ನ ಪೂರ್ಣ ನಂಬಿಗೆ ಇದೆ. ನೀನು ದೋಣಿಯನ್ನು ಎಷ್ಟು ಜಾಣತನದಿಂದಲೂ ಎಚ್ಚರದಿಂದಲೂ ನಡೆಸಿದುದನ್ನು ಕಣ್ಣಾರೆ ನೋಡಿದ್ದೇನೆ. ಸಮುದ್ರದೊಡನೆ ಹೋರಾಡಿದವನಿಗೆ ಬಂಡುಗಾರರಿಗೆ ಎದುರಾಗಲು ಶಕ್ಯವಾಗಲಾರದೇ ? ಎಲ್ಲರಿಗೂ ನನ್ನ ಸಂದೇಶವನ್ನು ಹೇಳುವಿಯೆಂದು ನಂಬಿದ್ದೇನೆ ಬಯಲು ಪ್ರದೇಶದಲ್ಲಿ ಯುದ್ಧ ಮಾಡುವದಕ್ಕಿಂತ ದಟ್ಟಡವಿ, ಗುಡ್ಡ, ಕಣಿವಿಗಳಲ್ಲಿ ಯುದ್ಧ ಮಾಡುವದು ಲೇಸೆಂದು ಹೇಳು. ಶಸ್ತ್ರಾಸ್ತ್ರಗಳು ಕಡಮೆ ಇದ್ದವರು ಇಂಥ ಸ್ಥಳಗಳಲ್ಲಿಯೇ ಶತ್ರುಗಳೊಡನೆ ಹೋರಾಡುವದು ವಿಹಿತವಾದ ಮಾರ್ಗವು. ಶತ್ರುಗಳ ಗುಂಡುಗಳಿಗೆ ನನ್ನ ಒಂದು ಲಕ್ಷ ಒಕ್ಕಲಿಗರನ್ನೂ ಆಹುತಿ ಕೊಡುವ ಇಚ್ಛೆ ನನಗಿಲ್ಲ. ಒಂದೇ ತಿಂಗಳದೊಳಗೆ ನನ್ನ ೫ ಲಕ್ಷ ಸೈನ್ಯವನ್ನು ಈ ಅರಣ್ಯದಲ್ಲಿ ಆಯಕಟ್ಟಿನ ಸ್ಥಳಗಳಲ್ಲಿ ನಿಲ್ಲಿಸಬೇಕೆನ್ನುತ್ತೇನೆ. ನಾನು ಈ ಪ್ರಜಾಪಕ್ಷದ ಸೈನ್ಯವನ್ನು ಚೂರು ಚೂರು ಮಾಡಬೇಕೆಂದಿದ್ದೇನೆ. ನನಗೂ ಈ ಅರಣ್ಯದ ಎಲ್ಲ ಭಾಗವೂ ಗೊತ್ತಿದೆ. ನಾನು ನಿನಗೆ ಇಷ್ಟೊಂದು ಮಾತು ಹೇಳಲು ಮರೆತಿದ್ದೇನೆ, ಕೇಳು. ದಯವನ್ನು ತೋರಿಸಬಾರದು; ಮತ್ತು ಪ್ರತಿಯೊಂದು ಸಪ್ಪಳವನ್ನು ಗಟ್ಟಿಯಾಗಿ ಹಿಡಿದುಕೊಂಡು ಕೂಡ್ರಬೇಕು. ನನ್ನ ಯುದ್ಧದ ನೀತಿಯು ಯುಕ್ತಿಪ್ರಯುಕ್ತಿಗಳಿಂದ ನಡೆಯಬೇಕಾಗಿದೆ. ಅಲ್ಲದೆ ಇಂಗ್ಲಿಷರ ಸೈನ್ಯವೂ ನಮಗೆ ನೆರವಾ

ಗಲು ಬರುವ ಆಶೆ ಇವೆ. ಆಗ ನಮ್ಮ ಈ ಎರಡೂ ಸೈನ್ಯಗಳ ಹೊಡೆತಕ್ಕೆ ಪ್ರಜಾಪಕ್ಷವು ಹೇಳಹೆಸರಿಲ್ಲದಂತಾಗಿ, ಪುನಃ ರಾಜಸತ್ತೆಯು ಪ್ರಸ್ಥಾಪಿತವಾಗೇ ತೀರುವದು. "

" ಏನೆಂದಿರಿ ? ಯಾರ ಮೇಲೆಯೂ ದಯ ತೋರಿಸಬಾರದೇ ? "

" ಅಹುದು, ದಯಾ-ಮಾಯೆಗಳ ಮಾತೇ ಇಲ್ಲ. "

" ಒಳ್ಳೇದು. ಹಾಗಾದರೆ ನೀವು ಹೇಳಿದಂತೆ ಮರೆಯದೆ ಮಾಡುತ್ತೇನೆ. "

" ನಿನ್ನ ಜೀವವನ್ನು ಜತನದಿಂದ ಕಾಯ್ದುಕೋ. ಯಾರು ಯಾವಾಗ ಎಂಥ ಮೋಸ ಮಾಡಿಯಾರೆಂಬ ನೆಚ್ಚಿಗೆಯಿಲ್ಲ.

" ನನಗೆ ಸಾವಿನ ಹೆದರಿಕೆಯೇ ಇಲ್ಲ. ಒಂದುವೇಳೆ ಯಾರಾದರೂ ನನಗೆ ಅಡ್ಡಬಂದರೆ ಅವರ ಆಯುಷ್ಯದ ಇತಿಶ್ರೀಯನ್ನೇ ಮಾಡಿಬಿಡುತ್ತೇನೆ."

" ನೀನಂದಂತೆ ನಿಜವಾಗಿಯೂ ನೀನು ಶೂರನೇ ಇರುವಿ. "

" ಯಾರಾದರೂ ಮಹಾರಾಜರ ಹೆಸರನ್ನು ಕೇಳಿದರೆ ಏನು ಹೇಳಲಿ."

" ಹಾಗೆ ಹೇಳುವ ಹೊತ್ತು ಇನ್ನೂ ಅಂತೂ ಬಂದಿರುವದಿಲ್ಲ. ಗೊತ್ತಿಲ್ಲೆಂದು ನಿಜವನ್ನೇ ಹೇಳು. "

" ಮತ್ತೆ ತಮ್ಮ ದರ್ಶನಲಾಭ ಯಾವಾಗ ? ಎಲ್ಲಿ ? "

" ನಾನಿದ್ದಲ್ಲಿಯೇ ಆಗಬೇಕು. "

" ನನಗದು ಹೇಗೆ ತಿಳಿಯಬೇಕು ? "

" ನನ್ನ ಚಟುವಟಿಕೆಯು ಸಾರ್ವತ್ರಿಕವಾಗಿ ಗೊತ್ತಾಗುವದು. ಇನ್ನೆಂಟೇ ದಿನಗಳಲ್ಲಿ ನನ್ನ ಹೆಸರು ಎಲ್ಲರ ಬಾಯಿಯಲ್ಲಿಯೂ ಬರುತ್ತದೆ. ನಾನೇನು ಮಾಡುತ್ತೇನೆಂಬದನ್ನು ನೋಡುವಿಯಂತೆ. ರಾಜ್ಯದ, ಧರ್ಮದ ಸೇಡನ್ನು ನಾನು ಹೇಗೆ ತೆಗೆದುಕೊಳ್ಳುತ್ತೇನೆಂಬದನ್ನು ಕಂಡುಕೊಂಡು ಎಲ್ಲರೂ ನನ್ನ ಹೆಸರನ್ನು ತೆಗೆದುಕೊಳ್ಳುವರು. "

" ಒಳ್ಳೇದು. ಹಾಗೇ ಆಗಲಿ. "

" ಒಂದು ಮಾತನ್ನೂ ಮರೆಯಬೇಡ, ತಿಳಿಯಿತೇ ? "

" ತಾವು ನಿಶ್ಚಿಂತರಾಗಿರಬೇಕು. "

" ಹಾಗಾದರೆ ಹೋಗಿ ಬಾ. ದೇವರು ನಿನ್ನನ್ನು ರಕ್ಷಿಸಲಿ. "

" ನಾನೆಲ್ಲವನ್ನೂ ಮಾಡುತ್ತೇನೆ. ಯಶವು ಬಂದುದಾದರೆ-? "

" ನಿನ್ನನ್ನು ಸರದಾರನನ್ನಾಗಿ ಮಾಡುವೆನು. "

" ನನ್ನ ಬಂಧುವಿನಂತೆಯೇ? ನಾನು ಮೋಸ ಹೋಗಲಿಕ್ಕಿಲ್ಲ ವಷ್ಟೇ? "

" ಇನ್ನು ಬರುತ್ತೇನೆ. "

ಆ ಮುದುಕನು ತನ್ನ ತಲೆಯಲ್ಲಾಡಿಸಿ, ವಿಚಾರಪರವಶನಾದನು. ಸ್ವಲ್ಪ ಹೊತ್ತಾದನಂತರ ಕಣ್ಣುಬಿಟ್ಟು ನೋಡಿದಾಗ ಹಲಮುಲೋನು ಕಾಣದಾಗಿದ್ದನು.

ಸೂರ್ಯನು ಅಸ್ತಾಚಲದ ಹಾದಿ ಹಿಡಿದಿದ್ದಾನೆ. ಪಕ್ಷಿಗಳು ತಮ್ಮ ಗೂಡುಗಳ ಕಡೆಗೆ ಹೊರಟಿವೆ. ವಾತಾವರಣವೆಲ್ಲವೂ ಪ್ರಶಾಂತವಾಗಿತ್ತು.

ಮುದುಕನೂ ಇತ್ತ ತನ್ನ ಹಾದಿಯನ್ನು ಹುಡುಕುತ್ತ ಹೊರಟೇ ಬಿಟ್ಟನು.

---

೫.

ಹಲಮುಲೋ ಕಣ್ಮರೆಯಾದಮೇಲೆ ಆ ಮುದುಕನು ಶಾಲನ್ನು ಮೈಗೆ ಸುತ್ತಿಕೊಂಡು ಹಲಮುಲೋನ ವಿರುದ್ಧ ದಿಕ್ಕಿನಿಂದ ನಡೆಯತೊಡಗಿದನು. ಸ್ವಲ್ಪ ದೂರ ಹೋದಮೇಲೆ ಅವನಿಗೆ ದಿನ್ನೆಯೊಂದು ಹತ್ತಿತು ಆ ದಿನ್ನೆಯ ತುದಿಯ ಮೇಲೆ ನಿಂತರೆ ಸುತ್ತುಮುತ್ತಲಿನ ದೂರಿನ ಪ್ರದೇಶವು ಕಾಣಬರುತ್ತಿತ್ತು. ಅವನು ದಿನ್ನೆಯನ್ನೇರಿ ಒಂದು ಕಲ್ಲಿಗೆ ಆತುಕೊಂಡು ಕುಳಿತು ಸುತ್ತಮುತ್ತಲಿನ ಎಲ್ಲ ಪ್ರದೇಶವನ್ನು ಭೌಗೋಲಿಕ ದೃಷ್ಟಿಯಿಂದ ನಿರೀಕ್ಷಿಸಹತ್ತಿದನು. ಅವನಿಗೆ ಪಟ್ಟಣಕ್ಕೆ ಹೋಗುವ ದಾರಿಯನ್ನು ಹುಡುಕಿ

ತೆಗೆಯಬೇಕಾಗಿತ್ತು. ಸಾಯಂಕಾಲವಾಗಿದ್ದರಿಂದ ಕತ್ತಲೆಯು ಹೆಚ್ಚಾಗುತ್ತಲೆ ಇತ್ತು. ಆದ್ದರಿಂದ ಯಾವುದೂ ನಿಚ್ಚಳವಾಗಿ ಕಾಣುವಂತಿರಲಿಲ್ಲ; ಆದರೂ ಈ ದಿನ್ನಿಯು ಬಹು ಎತ್ತರವಾದುದರಿಂದ ಅವನಿಗೆ ದೂರದಲ್ಲಿ ಹನ್ನೊಂದು ಊರುಗಳ ಚಪ್ಪರಗಳೂ, ದೇವಾಲಯಗಳೂ ಕಾಣಬಂದವು. ಸ್ವಲ್ಪ ಹೊತ್ತು ಅತ್ತಿತ್ತ ದೃಷ್ಟಿಯನ್ನು ಬೀರಿದಮೇಲೆ ಅವನಿಗೆ ಬೇಕಾದ ಪಟ್ಟಣದ ದಾರಿಯ ಸುಳಿವು ಹತ್ತಿದ್ದರಿಂದ ಅವನ ಮುಖದಲ್ಲಿ ನಗೆಯ ಕಳೆಯು ಮಿಂಚಿತು. ಗಿಡಗಂಟಿಗಳೊಳಗಿಂದ ಹೋಗುವ ಮಾರ್ಗವನ್ನು ಲಕ್ಷದಲ್ಲಿಟ್ಟುಕೊಂಡನು. ದೂರದಲ್ಲಿ ಕಾಣುವ ಮನೆಯೊಂದರಮೇಲೆ ಏನೋ ಒಂದು ಚಮತ್ಕಾರಿಕವಾದ ಆಕೃತಿ ಕಂಡುಬಂದಿತು. ಅವನು ಅವೇನಿರಬಹುದೆಂಬ ವಿಚಾರಕ್ಕೊಳಗಾದನು. ಸಂಧಿಪ್ರಕಾಶವಿದ್ದುದರಿಂದ ಅದರ ಬಣ್ಣವಾಗಲಿ, ಆಕಾರವಾಗಲಿ ಸ್ಪಷ್ಟವಾಗಿ ತೋರುವಂತಿರಲಿಲ್ಲ. ಅದು ಅಲೆದಾಡುತ್ತಿದ್ದುದರಿಂದ ಬಾವುಟವಿರಲಾರದೆಂಬ ಮನವರಿಕೆ ಮಾಡಿಕೊಂಡನು. ಮುದುಕನು ದಣಿದಿದ್ದನು. ಆದಕಾರಣ ತಲೆಯಲ್ಲಿಯ ವಿಚಾರಗಳನ್ನೆಲ್ಲ ದೂರೀಕರಿಸಿ ಒಂದಿಷ್ಟು ವಿಶ್ರಾಂತಿಯನ್ನು ಪಡೆಯುವದಕ್ಕಾಗಿ ಅಡ್ಡಾದನು.

ಅವನು ಸಂಧ್ಯಾಕಾಲದ ಪ್ರಶಾಂತ ಶಾಂತತೆಯ ಸುಖವನ್ನು ಭೋಗಿಸುತ್ತ ಕಡೆಗೆ ಏನು ನಡೆದಿದೆಯೆಂಬುದರ ವಿಚಾರದ ಸುಳಿಯಲ್ಲಿ ಸಿಕ್ಕುಬಿದ್ದನು. ಸುತ್ತಲೂ ಇರುವದಾದರೂ ಏನು? ಶಾಂತತೆ, ಸ್ತಬ್ಧತೆ! ಅತ್ಯಂತ ಕ್ರೂರ ಸ್ವಭಾವಿಗಳೇ ಒಮ್ಮೊಮ್ಮೆ ದಯಾವಂತರಾಗುತ್ತಾರೆ. ಇಂಥ ಶಾಂತತೆಯಲ್ಲಿ ಅವನ ಮನಸು ಮಗ್ನವಾದಾಗ ಅವನಿಗೆ ಮಾನವಪ್ರಾಣಿಯ ಸ್ವರವು ಕೇಳಬಂದಿತು. ಹೆಂಗಸರ, ಹುಡುಗರ ಧ್ವನಿಯಾಗಿತ್ತು. ಸ್ವರವು ಕೇಳಬರುತ್ತಿದ್ದ ಸ್ಥಳವು ಗಿಡಗಂಟಿಗಳಮೂಲಕ ಕಾಣುತ್ತಿರಲಿಲ್ಲಾದ್ದರಿಂದ ಆ ವ್ಯಕ್ತಿಗಳೂ ಅದೃಶ್ಯವಾಗಿದ್ದರು. ಆದರೂ ಆ ವ್ಯಕ್ತಿಗಳು ಆ ದಿನ್ನೆಯ ವಾರಿಯ ದಾರಿಯಿಂದ ನಡೆದಿದ್ದರೆನ್ನುವಂತೆ ತೋರುತ್ತಿತ್ತು. ಅವರ ಸಂಭಾಷಣವು ಜೋರಾಗಿ ನಡೆದುದರಿಂದ ಅವರ ಪ್ರತಿಯೊಂದು ಅಕ್ಷರವೂ ಚೆನ್ನಾಗಿ ಕೇಳಿಸುತ್ತಿತ್ತು.

“ ಬೇಗ ಬೇಗ ನಡೆ ಇದೇ ಹಾದಿಯೇ? ” ಎಂದೊಬ್ಬ ಹೆಂಗಸೆಂದಳು.

“ ಅಲ್ಲ, ನೀನು ತಪ್ಪುದಾರಿ ಹಿಡಿದಿರುವಿ ” ಎಂದು ಇನ್ನೊಬ್ಬ ಳೆಂದಳು ಇವರ ಈ ಮಾತುಗಳಿಂದ ಒಬ್ಬಳು ಧಿಟ್ಟೆಯೂ, ಇನ್ನೊಬ್ಬಳು ಅಂಜುಬುರುಕಿಯೂ ಆಗಿದ್ದಳೆಂದು ಹೇಳಬಹುದು.

“ ನಾವಿರುವ ಹೊಲದಿಂದ ಈಗ ಎಷ್ಟು ದೂರ ಇರುತ್ತೇವೆ ? ”

“ ಒಂದು ವ್ಯೆಲಿನ ಅಂತರದಲ್ಲಿದ್ದೇವೆ. ”

“ ನಡೆ, ಬೇಗ ಕಾಲು ಹಾಕು. ಬಹಳ ಹೊತ್ತಾಯಿತು. ”

“ ನಾವು ನಡೆಯುಬಹುದು. ಈ ನಿನ್ನ ಮಕ್ಕಳು ಹೇಗೆ ನಡೆಯ ಬಲ್ಲವು ? ನಾವಿಬ್ಬರೆ ಈ ಮೂರೂ ಮಗುಗಳನ್ನು ಹೊತ್ತುಕೊಂಡು ಹೋಗುವದು ಹೇಗೆ ? ನಿನ್ನ ಬಗಲಲ್ಲಿ ಒಂದಿದೆ. ಹೊಟ್ಟೆಗೆ ತಿನ್ನುವದನ್ನು ಬಿಟ್ಟಿದೆಯಲ್ಲವೆ ? ಆದರೂ ಕೈಯೊಳಗಿಂದ ಬಿಡುವದೇ ಇಲ್ಲ. ಒಂದಿಷ್ಟು ನಡೆಯಲಿ, ಕೆಳಗಿಳಿಸು. ಬೇಡ ಬೇಡ ನಮಗೇ ತಡವಾಗುವದು. ”

“ ನೀನು ಕೊಟ್ಟ ಚಪ್ಪಲಿಗಳು ನನ್ನ ಕಾಲಿಗೆ ಬಹಳೇ ಹಾಳತ ವಾಗುವವು. ಹೇಳಿ ಮಾಡಿಸಿದಂತಾಗಿವೆ. ”

“ ಬರಿಗಾಲಿಲೆ ನಡೆಯುವದಕ್ಕಿಂತ ನೆಟ್ಟಗೇ ಆದಂತಾಯಿತಲ್ಲವೇ! ”

“ ಹುಡುಗರೇ ನಡೆಯಿರಿ. ಹೀಗೆ ತೂಕಡಿಸಬಾರದು. ”

“ ಅವೇನು ನಡೆಯುತ್ತವೆ ಮಣ್ಣು ! ಆಟಾ ಆಡುತ್ತ ನಡೆಯು ವಂಥವು. ಹುಡುಗಿಯರಾರಾದರೂ ಭೆಟ್ಟಿಯಾದರೆ ಸಾಕು, ಈ ಹುಡುಗ ಮಾತಿಗೆ ನಿಲ್ಲದೇ ಬಿಡುವದೇ ಇಲ್ಲ. ಇವನು ದೊಡ್ಡವನಾಗುತ್ತ ನಡೆದಿದ್ದಾನೆ. ”

“ ಅವನೆಲ್ಲಿ ದೊಡ್ಡವನೆ ನಮ್ಮವ್ವಾ ! ಈಗ ಅವನಿಗೆ ನಾಲ್ಕು ತುಂಬಿದವು. ”

“ ಯಾಕೋ, ನೀನು ಆ ಹಳ್ಳಿಯ ಹುಡುಗಿಯ ಕೂಡ ಯಾಕೆ ಮಾತಾಡುತ್ತ ನಿಂತೆ? ”

“ ಆಕೆದು ನನಗೆ ಗುರುತದ ” ಎಂದು ಹುಡುಗನು ಉತ್ತರಿಸಿದನು.

"ಎಲ್ಲೀದೋ ಗುರುತ?"

"ಇಂದು ಮುಂಜಾನೆ ನಾವಿಬ್ಬರೂ ಕೂಡಿ ಅಡ್ಡಾಡಲಿಕ್ಕೆ ಹೋಗಿದ್ವಿ."

"ನೋಡಿದೆಯಾ ಎಷ್ಟು ರಸಿಕನಿರುವನು! ಅಡ್ಡಾಡಲಿಕ್ಕೆ ಹೋಗಿದ್ನಂತೆ! ಅದೂ ಒಬ್ಬ ಹುಡುಗಿಯ ಕೂಡಂತ! ಮೂರೇ ದಿನಗಳಲ್ಲಿ ಒಳ್ಳೇ ಹುಡುಗಿಯನ್ನು ಪಡೆದಿ ಬಿಡು"

ಮೆಲ್ಲಮೆಲ್ಲನೆ ಈ ಸ್ವರವು ಕಡಮೆಯಾಯಿತು. ಮತ್ತೆ ನೀರವ ನಿಶ್ಶಬ್ದತೆ ಪಸರಿಸಿತು. ಮುದುಕನು ಗಪ್ಪಚಿಪ್ಪಾಗಿ ಕುಳಿತಿದ್ದನು. ಅವನ ವಿಚಾರಗಳು ನಿಂತುಬಿಟ್ಟಿದ್ದವು ದಿನ್ನೆಯ ಮೇಲೆ ಮಂದ ಪ್ರಕಾಶವು ಸ್ವಲ್ಪಸ್ವಲ್ಪಿತ್ತು. ಪೂರ್ವ ದಿಕ್ಕಿನಲ್ಲಿ ಚಂದ್ರೋದಯವಾಗುವುದರಲ್ಲಿತ್ತು. ಕೆಲಕೆಲವು ನಕ್ಷತ್ರಗಳು ನೀಲಾಂಬರದಲ್ಲಿ ಮಿನಗುತ್ತಿದ್ದವು. ಮುದುಕನ ಅಂತಃಕರಣದಲ್ಲಿ ಆಶಾರೂಪೀ ಚಂದ್ರನೂ ಉದಯವಾಗುತ್ತಿದ್ದನು. ಆದರೆ ಯುದ್ಧಮಾಡುವ ಪ್ರವೃತ್ತಿಗೆ ಆಶೆಯೆಂದು ಕರೆಯಬೇಕೇ ಎಂಬದು ಯಾರಿಗೆ ಗೊತ್ತು! ಒಂದು ಕ್ಷಣ ಹೊತ್ತು ಬಿರುಗಾಳಿಯ, ಸಮುದ್ರ ಪ್ರವಾಸದ ಸಂಕಟಗಳಿಂದ ಪಾರಾಗಿ ಬಂದೆನೆಂಬ ವಿಚಾರವೂ ಅವನಿಗೆ ಎಷ್ಟೋ ಮನಸ್ಸಿಗೆ ಸಮಾಧಾನವನ್ನು ಕೊಟ್ಟಿತ್ತು. ಇನ್ನುಮೇಲೆ ಎಲ್ಲ ಸಂಕಟಗಳು ತೀರಿದವೆಂದು ಅವನು ಭಾವಿಸಿದನು ತನ್ನ ಹೆಸರು ಯಾರಿಗೂ ಗೊತ್ತಿಲ್ಲವೆಂದೂ, ವೈರಿಗಳ ಕಣ್ಣಿಗೆ ಬೀಳುವ ಸಂಭವವಿಲ್ಲೆಂದೂ ಅವನು ತಿಳಿದುಕೊಂಡಿದ್ದನು. ಇಂಥ ಸಮಾಧಾನದಲ್ಲಿ ಅವನಿಗೆ ನಿದ್ರೆ ಬರಬಹುದಾಗಿತ್ತು. ಆದರೆ ಅಷ್ಟರಲ್ಲಿ ಎಲ್ಲಿಂದಲೋ ಏನೋ ಶಬ್ದವು ಕೇಳಬಂದಂತೆ ಅವನಿಗೆ ಭಾಸವಾಯಿತು. ಚಟಕ್ಕನೆದ್ದು ಸುತ್ತುಕಡೆ ಕಿವಿಗೊಟ್ಟು ಕೇಳುತ್ತನಿಂತನು. ಯಾವ ಸುಳಿವೂ ಹತ್ತಲಿಲ್ಲ.

ಯಾರಾದರೂ ತನ್ನ ಬೆನ್ನುಹತ್ತಿ ಬಂದಿರಬಹುದೇ? ಯಾರಿರಬಹುದೆಂಬ ವಿಚಾರಬಂದಾಗ ಅವನು ರೋಮಾಂಚಿತನಾದನು. ತನ್ನ ಶೋಧವು ಯಾರಿಗೂ ಹತ್ತಿರಲಾರದು. ತಾನು ಸಮುದ್ರದ ದಂಡೆಯ ಮೇಲೆ ಇಳಿದಿರುವ ಸುದ್ದಿಯು ಯಾರಿಗೂ ಹತ್ತಿರಲಾರದೆಂದೂ ಭಾವಿಸಿ

ಕೊಂಡನು. ನಮ್ಮ ಪಡಗದಲ್ಲಿಯುವರೆಲ್ಲರೂ ಸತ್ತಿರಲು ಸಾಕು. ಇಬ್ಬರನ್ನು ಬಿಟ್ಟು ಮತ್ತೊಬ್ಬರಾರಿಗೂ ಈ ಗುಟ್ಟು ಗೊತ್ತಿರುವದೇ ಇಲ್ಲಾದ್ದರಿಂದ ಹೆದರುವ ಕಾರಣವಿರಲಿಲ್ಲ. ಆದರೂ ಅವನು ಭಾವಿಸಿದಷ್ಟು ತನ್ನ ಸುರಕ್ಷಿತತೆಯು ಇಲ್ಲೆಂದು ಕಲ್ಪಿಸಿಕೊಂಡನು. ಈ ಮೊದಲು ಕೇಳಬಂದ ಸಪ್ಪಳದ ಕಡೆಗೆ ಅವನು ಅಷ್ಟೊಂದು ಲಕ್ಷ್ಯವನ್ನೇ ಕೊಟ್ಟಿರಲಿಲ್ಲ ಆ ಸಪ್ಪಳವು ಹೆಚ್ಚುಹೆಚ್ಚಾಗಿ ಕೇಳಬಂದಂತೆ ಕಿವಿಗೊಟ್ಟು ಎಲ್ಲಿಂದ ಬರುತ್ತಿರಬಹುದೆಂಬದನ್ನು ನಿರ್ಧರಿಸತೊಡಗಿದನು. ಎಲೆಗಳ ಸರಿದಾಟದಂತೆ ಆ ಸಪ್ಪಳವಿತ್ತು. ಅಲ್ಲಿಯೇ ಸಮೀಪದಲ್ಲಿರುವ ಕಂಬಕ್ಕೆ ಅಂಟಿನಿಂದ ಕಾಗದವೊಂದು ಹಚ್ಚಲ್ಪಟ್ಟಿತ್ತು. ಅಂಟು ಇನ್ನೂ ಆರಿರಲಿಲ್ಲ. ಗಾಳಿಯ ಜೋರಿಗೆ ಅದರದೊಂದು ತುದಿಯು ಕಿತ್ತಲ್ಪಟ್ಟು ಹಾರಾಡುವ ಸಪ್ಪಳವಾಗುತ್ತಿತ್ತು. ಮುದುಕನಿಗೆ ಇವರ ಕಲ್ಪನೆ ಒಮ್ಮೆಲೆ ಬರಲೇ ಇಲ್ಲ ಮುದುಕನು ಕಲ್ಲೊಂದರ ಮೇಲೆ ನಿಂತು ಆ ಕಾಗದದ ಮೇಲೆ ಕೈಯಿಟ್ಟು ಓದಲು ಯತ್ನಿಸಿದನು. ಆ ಹಸ್ತಪತ್ರಿಕೆಯ ಮೇಲ್ಭಾಗದ ಅಕ್ಷರಗಳು ದೊಡ್ಡದಿದ್ದವು; ಕೆಳಗಿನವು ಸಣ್ಣಾಗಿದ್ದವು. ಚಂದ್ರನ ಕಿಂಚಿತ್ ಪ್ರಕಾಶವೂ ತಾರೆಗಳ ಹೊಳಪೂ ಇದ್ದುದರಿಂದ ಅದನ್ನೋದಲು ಹವಣಿಸಿದನು.

## ಜಾಹೀರನಾಮೆ

"ಫ್ರಾನ್ಸದ ಪ್ರಜಾಪಕ್ಷವು ಆಜ್ಞೆಮಾಡಿದ್ದರಿಂದ ನಾನು ಅದರ **ಅಧ್ಯಕ್ಷ**ನೆಂದು ಜಾಹೀರಪಡಿಸುವದೇನಂದರೆ—ಬ್ರಿಟನ್ನದಲ್ಲಿಯ ಲಾಂಟ್‌ನೆಕ್ ಎಂಬ ರಾಜಪುತ್ರನು ಗುಪ್ತರೀತಿಯಿಂದ ಇಲ್ಲಿಯ ದಂಡೆಯ ಮೇಲೆ ಇಳಿದಿದ್ದಾನೆ. ಅವನು ನಮ್ಮ ಶತ್ರುಗಳ ಕಡೆಯವನಾದ್ದರಿಂದ ಅವನನ್ನು ಸಜೀವವಾಗಿ ಬಂಧಿಸಿ ತಂದವರಿಗೆ ೬೦ ಸಾವಿರ ಹಣವು ಬಹುಮಾನವೆಂದು ಕೊಡಲಾಗುವದು. ಅವನನ್ನು ಹಿಡಿಯಲು ಬೇಗನೆ ಸೈನ್ಯದ ತಂಡವೊಂದು ರವಾನಿಸಲ್ಪಡುವದು. ಆದಕಾರಣ ಎಲ್ಲ ಜನರು ಈ ಕೆಲಸಕ್ಕೆ ನೆರವಾಗಬೇಕೆಂದು ಆಜ್ಞೆ ವಿಧಿಸಲಾಗಿದೆ"

**—ಅಧ್ಯಕ್ಷ.**

ಈ ಬರಹದ ಬುಡದಲ್ಲಿ ಸಣ್ಣಾಕ್ಕರಗಳಲ್ಲಿ ಇನ್ನೂ ಏನೇನೋ ಇತ್ತು. ಆದರೆ ಕತ್ತಲೆಯ ಬೆಳಕಿನಲ್ಲಿ ಆ ಮುದುಕನಿಗೆ ಓದಲಾಗಲಿಲ್ಲ. ಮುದುಕನು

ಬಾಯ್ಮೇಲೆ ಕೈಯಿಟ್ಟುಕೊಂಡು ಕೂಡಲೆ ದಿನ್ನೆಯನ್ನೇರಿದನು. ದಿನ್ನೆಯು ಬಹು ಎತ್ತರವಿದ್ದುದರಿಂದ ಕೆಲಭಾಗಕ್ಕಿಂತಲೂ ಹೆಚ್ಚಾಗಿ ಬೆಳಕು ಬಿದ್ದಿತ್ತು. ಮೇಲೆಯೆ ಹೀಗೆಯೇ ನಿಂತರೆ ಯಾರಿಗಾದರೂ ತಾನು ಕಾಣಬಹುದೆಂದು ಬಗೆದು ಕೆಳಗಿಳಿದು ಅವನು ದಟ್ಟಾದ ಗಿಡಗಳ ಗುಂಪಿನೊಳಗೆ ಹೊಕ್ಕು ಕಾಣದಾದನು.

ಮುದುಕನು ಪೂರ್ಣ ವಿಚಾರ ಮಾಡಿ ಯಾವ ಮಾರ್ಗದಿಂದ ಹೋದರೆ ಒಳ್ಳೆಯದೆಂಬುದನ್ನು ನಿರ್ಧರಿಸಿಯೇ ಹೊರಟಿದ್ದನು. ಆ ಪ್ರದೇಶ ವೆಲ್ಲವೂ ನಿರ್ಜನವಾಗಿದ್ದು ಹಾಳುಹಾಳು ಸುರಿಯುತ್ತಲಿತ್ತು. ಮುದುಕನು ದಾರಿ ನಡೆಯುತ್ತ ಒಂದು ಗಿಡದ ಹತ್ತಿರ ನಿಂತು ಹರಕಾದ ನಿಲವಂಗಿ ಯನ್ನು ಹೊದ್ದುಕೊಂಡು ಬಿರಬಿರನೆ ಕಾಲುಬಿಟ್ಟನು. ಚಂದ್ರನ ಬೆಳಕು ಚನ್ನಾಗಿ ಬಿದ್ದಿತ್ತು. ಕೆಲಹೊತ್ತು ನಡೆದು ಬಂದ ಮೇಲೆ ಎರಡು ದಾರಿಗಳು ಒಡೆಯುವ ಸ್ಥಳವೊಂದು ಹತ್ತಿತು. ಅದರ ಬದಿಯಲ್ಲಿರುವ ಒಂದು ಕಂಬಕ್ಕೆ ಈ ಮೊದಲು ನೋಡಿದ ಜಾಹೀರಾತಿನಂತಿರುವ ಕಾಗದವೊಂದನ್ನು ಅಂಟಿಸ ಲಾಗಿತ್ತು. ಅದನ್ನು ನೋಡಬೇಕೆಂದು ಮುಂದೆ ಬರವಷ್ಟರಲ್ಲಿ “ ಹೋಗು ವವರು ಯಾರು? ” ಎಂಬ ಧ್ವನಿಯು ಕೇಳಬಂದಿತು.

ಮುದುಕನು ಚಟಕ್ಕನೆ ಹೊರಳಿದನು ಆ ದಾರಿಯ ಪಕ್ಕದಲ್ಲಿರುವ ಕಂಟಿಯೊಳಗೆ ಮನುಷ್ಯನೊಬ್ಬನು ನಿಂತಿದ್ದನು. ಅವನು ಇವನಷ್ಟೇ ಎತ್ತರ ವಾಗಿದ್ದನು. ಅವನ ತಲೆಗೂದಲೂ ಬೆಳ್ಳಗಾಗಿದ್ದವು. ಅವನ ಮೈಮೇಲಿನ ಬಟ್ಟೆಗಳೆಲ್ಲವೂ ಈ ಮುದುಕನ ಬಟ್ಟೆಗಳಿಗಿಂತಲೂ ಹರಿದಿದ್ದವು. ಆ ಇಬ್ಬರಲ್ಲಿಯೂ ವಿಲಕ್ಷಣವಾದ ಸಾಮ್ಯವು ಕಂಡುಬರುತ್ತಿತ್ತು. ಆ ಮನು ಷ್ಯನು ತನ್ನ ಬಡಿಗೆಯನ್ನು ಊರಿಕೊಂಡು ನಿಂತು, ಇವನನ್ನು ಎಲ್ಲಿಗೆ ಹೊರಟಿರುವೆಯೆಂದು ಕೇಳಿದನು.

“ ಈಗ ನಾನೆಲ್ಲಿರುವೆನೆಂಬದನ್ನು ಮೊದಲು ಹೇಳು”—ಎಂದು ಗಂಭೀರತೆಯಿಂದಲೂ ಅಧಿಕಾರಯುತ ವಾಣಿಯಿಂದಲೂ ಮುದುಕನು ಆ ಮನುಷ್ಯನನ್ನು ಕೇಳಿದನು.

" ತಾವು ಟಾನೀಸ ಹಳ್ಳಿಯ ಹತ್ತಿರ ಇರುವಿರಿ. ನಾನು ಅಲ್ಲಿಯ ಬಿಕ್ಕೆ ಬೇಡುವವನು; ತಾವು ಅದರ ಅಧಿಪತಿಗಳಾಗಿದ್ದೀರಿ. "

" ನಾನು ಅದರ ಅಧಿಪತಿಯೆ! "

" ಅಹುದು. ತಾವೇ ಲಾಂಟ್‌ನೆಕ್ ಮಹಾರಾಜ. "

ಲಾಂಟ್‌ನೆಕ್‌ನು ಗಂಭೀರವಾಣಿಯಿಂದ " ಅಹುದು, ಅವನೇ ನಾನು. ನನ್ನನ್ನು ವೈರಿಗಳಿಗೊಪ್ಪಿಸಿ, ನೀನು ನಿನ್ನ ಬಹುಮಾನವನ್ನು ಪಡೆದುಕೊ. "

" ನಾವಿಬ್ಬರೂ ನಮ್ಮ ನಮ್ಮ ಮನೆಯಲ್ಲಿಯೇ ಇದ್ದೇವೆ. ನೀವು ಕಿಲ್ಲೆಯ ಹತ್ತಿರ; ನಾನು ನನ್ನ ಗುಡಿಸಲಿನ ಹತ್ತಿರ. "

" ನಿನ್ನ ಪುರಾಣ ಬೇಡ. ನನ್ನನ್ನು ಬಂಧಿಸು ಎಂದೆನಲ್ಲವೇ? "

" ತಾವು ಹರ್ಬೆನದ ಹೊಲದ ಕಡೆಗೆ ಹೋಗುವವರಿದ್ದಿಲ್ಲವೇ? "

" ಅಹುದು. "

" ಆದರೆ ಅತ್ತ ಕಡೆಗೆ ಹೋಗಕೂಡದು. ಅಲ್ಲಿ ಪ್ರಜಾಪಕ್ಷದ ಸೈನ್ಯವು ಈ ಮೂರು ದಿನಗಳಿಂದ ತಳವೂರಿದೆ. "

" ಹೀಗೋ-ಅಲ್ಲಿಯ ಜನರು ಪ್ರತಿಕಾರ ಮಾಡಿದರೋ ಇಲ್ಲವೋ? "

" ಎಲ್ಲಿಯ ಪ್ರತಿಕಾರ! ಆಗತ—ಸ್ವಾಗತ ಮಾಡಿದರು. "

" ಏನು ಹೀಗೆ ಹೇಳಿದರೆ? "

" ನಿಜವಾದುದನ್ನೇ ಹೇಳಿದ್ದೇನೆ. ತಮಗೆ ಈ ಗಿಡಗಳೊಳಗಿಂದ ಆಚೆಯ ಬದಿಗೆ ಏನಾದರೂ ಕಾಣಬರುತ್ತಿದೆಯೇ? "

" ಅಹುದು, ಏನೋ ಹಾರಾಡುತ್ತಿರುತ್ತದೆ. ಅದೇನು? "

" ಅದು ಮೂರು ಬಣ್ಣದ ಬಾವುಟವು. "

ದಿನ್ನೆಯ ಮೇಲಿಂದ ಕಾಣುತ್ತಿದ್ದದು ಇದೇ ಬಾವುಟವಿರಬೇಕೆಂದು ಈಗ ಅವನ ಲಕ್ಷದಲ್ಲಿ ಬಂದಿತು.

" ದೇವಾಲಯದಲ್ಲಿಯ ಗಂಟೆಗಳು ಬಾರಿಸುತ್ತಲಿವೆಯೋ ಹೇಗೆ? "

" ಅಹುದು. ತಮ್ಮ ಆಗಮನವಾಯಿತೆಂದು ಬಾರಿಸಹತ್ತಿವೆ "

" ಆದರೆ ಘಂಟಾನಾದವು ಕೇಳಬರುವದಿಲ್ಲವಲ್ಲ! "

" ಗಾಳಿಯು ಪ್ರತಿಕೂಲವಾಗಿರುವದರಿಂದ ಕೇಳಬಾರದಾಗಿದೆ ? "

" ತಮ್ಮ ಬಗ್ಗೆ ಪ್ರಕಟಿಸಿದ ಜಾಹೀರಾತನ್ನು ತಾವು ನೋಡಿದಿರಾ? "

" ಅಹುದು. ಕಣ್ಣಿಗೆ ಬಿದ್ದಿದೆ. "

" ಅವರು ನಿಮ್ಮ ಬೆನ್ನು ಹತ್ತಿದ್ದಾರೆ. " ಎಂದೆಂದು ಆ ಭಿಕ್ಷುಕನು ಅವರ ಅರ್ಧ ಸೈನ್ಯವು ಬೀಡುಬಿಟ್ಟ ಹೊಲದ ಕಡೆಗೆ ದೃಷ್ಟಿಯನ್ನು ಒೀರಿದನು. "

" ಹಾಗಾದರೆ ನಾನೆಲ್ಲಿಗೆ ಹೋಗಲಿ ? "

" ನನ್ನೊಡನೆ ನಡೆಯಿರಿ. " ಎಂದು ಆ ಬಿಕ್ಷುಕನು ಮುದುಕನನ್ನು ತೀಕ್ಷ್ಣದೃಷ್ಟಿಯಿಂದ ನೋಡಿ " ಮಹಾರಾಜರೆ, ಕೇಳಿರಿ. ನನ್ನ ಸ್ಥಳವು ನಿಮ್ಮಂಥವರಿಗೆ ಒಳಿತಾಗಿರುವದಿಲ್ಲ. ಆದರೂ ಸುರಕ್ಷಿತವಾಗಿದೆ. ಗುಡಿಸಲಿನ ಚಪ್ಪರವು ಕಡಕೊಂಡು ಬೀಳುವಂತಿದೆ; ನೆಲವು ತಗ್ಗು-ದಿನ್ನೆಯದಿದೆ. ನೀವು ಆ ಹೊಲದ ಕಡೆಗೆ ಹೋದರೆ ಖಂಡಿತವಾಗಿ ಸಾಯುವಿರಿ. ನನ್ನೊಂದಿಗೆ ಬಂದರೆ ಇಡಿ ರಾತ್ರಿಯೆಲ್ಲ ವಿಶ್ರಾಂತಿಪಡೆಯಬಹುದು. ನೀವು ಬಹಳ ದಣಿದಿರುವಿರಿ. ನಾಳೆ ಈ ಸೈನ್ಯವು ಇಲ್ಲಿಂದ ತಳ ಕಿತ್ತಬಹುದು. ಅಂದಮೇಲೆ ನಾಳೆ ನಿಮಗೆ ನಿಮ್ಮ ದಾರಿ ಸರಲವಾಗುವದು. " ಎಂದು ಹೇಳಿದನು.

ಮುದುಕನು ಭಿಕ್ಷುಕನನ್ನು ಲಕ್ಷ್ಯಪೂರ್ವಕವಾಗಿ ನೋಡಿ " ನೀನು ಯಾವ ಪಕ್ಷದವನು ? ರಾಜಪಕ್ಷವೊ ಪ್ರಜಾಪಕ್ಷವೊ " ಎಂದು ಕೇಳಿದನು.

" ಮಹಾರಾಜರೇ, ನನಗೆ ಯಾವ ಪಕ್ಷವೇನು ? ಯಾವ ಪಕ್ಷವೂ ಇಲ್ಲ. "

" ಈಗೆದ್ದಿರುವ ಗೊಂದಲದ ಬಗ್ಗೆ ನಿನಗೇನಾದರೂ ಗೊತ್ತಿದೆಯೇ? "

" ಸದ್ಯಕ್ಕೆ ನನ್ನ ಹೊಟ್ಟೆಗೆ ಸಾಲುವಷ್ಟು ಸಿಗಲಾರದಾಗಿದೆಂಬುದಷ್ಟೇ, ನನಗೆ ಗೊತ್ತು. "

" ಆದರೂ ನನ್ನ ನೆರವಿಗಾಗಿ ಒಳ್ಳೇ ವೇಳೆಗೆ ಬಂದೆಯಲ್ಲ ! "

" ನಿಮ್ಮ ಬಗ್ಗೆ ಎಲ್ಲ ಕಡೆಯಲ್ಲಿಯೂ ಜಾಹೀರಾತ ಹಚ್ಚಲಾಗಿದೆ. ಆದರೆ ಕಾಯದೆ ಬಿಟ್ಟು ನಡೆಯುವ ಧೈರ್ಯ ಯಾರಿಗಿದೆ? ನಿಜವಾಗಿ ನೋಡಿದರೆ ಕಾಯದೆಗಳು ಯಾರನ್ನು ನುಂಗುವವೋ ಹೇಳಬರದು. ನಾನು ಹಸಿವೆಯಿಂದ ಸಾಯುವಂತಾದರೆ ಕಾಯದೆ ಮುರಿದಂತಾಗುವದೇ ? "

" ನೀನು ಎಷ್ಟು ದಿನಗಳಿಂದ ಹಸಿವೆಯಿಂದ ಬಳಲುತ್ತಿರುವಿ ? "

" ಹುಟ್ಟಾ ಹಸಿವೆಯು ಸಾವು ನನ್ನ ಬೆನ್ನುಹತ್ತಿಯೇ ಇದೆ. "

" ಆದರೂ ನನಗೆ ನೆರವಾಗಲು ಬಂದೆಯಲ್ಲ! "

" ಅಹದು. ಏನೋ ಬಂದೆ. "

" ಯಾಕೆ ನೆರವಾದಿ ? "

" ಯಾಕೆಂದರೆ-ನನಗಿಂತಲೂ ಹತಭಾಗಿಯಾದವನೊಬ್ಬನು ಇಲ್ಲಿಗೆ ಬಂದಿದ್ದಾನೆ. ನನಗೆ ಜೀವಂತವಿರಲು ಹಕ್ಕು ಇದೆ; ಆದರೆ ಪಾಪ! ಅವನಿಗದೂ ಇಲ್ಲ."

" ಅಹುದು. ಸರಿಯಾಗಿ ಹೇಳಿದೆ. ನನಗೆ ನೆರವಾಗುವಿಯಾ ? "

" ಖಂಡಿತವಾಗಿ-ನಾವಿಬ್ಬರೂ ಅಣ್ಣ-ತಮ್ಮಂದಿರಿದ್ದಂತೆ. ನಾನು ತುಣುಕು ರೊಟ್ಟಿಯ ಸಲುವಾಗಿ ಭಿಕ್ಷುಕನಾಗಿದ್ದೇನೆ. ಆದರೆ ನೀವು ಪ್ರಾಣದ ಸಲುವಾಗಿ ಭಿಕ್ಷುಕರಾಗಿದ್ದೀರಿ. ಆದ್ದರಿಂದ ಇಬ್ಬರೂ ಭಿಕ್ಷುಕರೇ. "

" ಆದರೆ ನನ್ನನ್ನು ಹಿಡಿದುಕೊಟ್ಟವರಿಗೆ ಬಹುಮಾನ ಸಿಗುತ್ತದೆಂಬದು ನಿನಗೆ ಗೊತ್ತಿದೆಯೋ ಇಲ್ಲವೊ ? "

" ಅಹುದು, ಇದೆ. ನಾನು ಜಾಹೀರಾತು ಓದಿದ್ದೇನೆ. "

" ಹಾಗಾದರೆ ನಿನಗೆ ಓದಲು ಬರುತ್ತದೆಯಲ್ಲವೇ ? "

" ಬರವೆಯೇನು ? ಬರೆಯಲಿಕ್ಕೂ ಬರುತ್ತದೆ. ಬಾರದಿರಲಿಕ್ಕೇನು ನಾನು ಪಶುವೇ ? "

" ಅಂದಮೇಲೆ ನನ್ನನ್ನು ಹಿಡಿದುಕೊಟ್ಟವರಿಗೆ ೬೦ ಸಾವಿರ ಬಹುಮಾನ ದೊರೆಯುತ್ತದೆಂಬದು ನಿನಗೆ ಗೊತ್ತಿದ್ದಂತಾಯಿತಲ್ಲವೇ? ಬಹುಮಾನವು ಬಹು ದೊಡ್ಡದು. ಅದು ಸಿಕ್ಕರೆ ಜನ್ಮದ ಸಾರ್ಥಕವಾಗುವದು.

" ಅಹುದು, ಮುಂದೇನು ? "

“ ನಿನ್ನ ಭವಿಷ್ಯಕಾಲದ ಜೀವನದ ಬಗ್ಗೆ ನಾನು ವಿಚಾರ ಮಾಡುತ್ತಿದ್ದೇನೆ. ”

“ ನಾನೂ ಅದನ್ನೇ ವಿಚಾರ ಮಾಡುತ್ತಿದ್ದೇನೆ. ನಾನು ಯಾವಾಗ ನಿಮ್ಮನ್ನು ನೋಡಿದೆನೋ ಆಗ ನನ್ನಷ್ಟಕ್ಕೆ ನಾನೆಂದುಕೊಂಡೆ—ಇವನನ್ನು ಹಿಡಿದುಕೊಟ್ಟು ಅಷ್ಟು ಸಂಪತ್ತಿಯು ದೊರಕಿದರೆ—. ಇರಲಿ, ನಡೆಯಿರಿ ಹೋಗೋಣ, ಬೇಗ. ಮೊದಲು ಅಡಗಿಕೊಂಡು ಕೂಡ್ರೋಣ. ಆಮೇಲೆ ಎಲ್ಲದನ್ನೂ ಮಾತಾಡೋಣ ” ಎಂದು ಭಿಕ್ಷುಕನು ಹೊರಟನು. ಅವನ ಬೆನ್ನುಹತ್ತಿ ರಾಜಪುತ್ರನೂ ಹೊರಟನು.

ಅವರು ನಿಬಿಡವಾದ ಅರಣ್ಯದಲ್ಲಿ ಹೊಕ್ಕರು. ಅಲ್ಲಿಯೇ ಅವನ ಗುಡಿಸಿಲವಿತ್ತು. ಒಂದು ಹಳೆಯ ಗಿಡದ ಬೊಡ್ಡೆಯಲ್ಲಿ ಒಂದು ಹೊದರು ಕೆದರಿ ಅದರ ಮೇಲೂ ಮುಂದೂ ಅಂಥಿಂಥ ಕಟ್ಟಿಗೆಗಳನ್ನು ಹಾಕಿ ಎಲೆಗಳಿಂದ ಮುಚ್ಚಿದ್ದನು. ಆ ಹೊದರು ಕತ್ತಲೆಯ ಗವಿಯಾಗಿತ್ತು. ಸಹಜವಾಗಿ ಯಾರಿಗೂ ಅದರ ಸುಳಿವು ಹತ್ತುವಂತಿರಲಿಲ್ಲ. ಅಂಥದರಲ್ಲಿಯೇ ಇಬ್ಬರೂ ಒಳಹೊಕ್ಕರು. ಅವನ ಹತ್ತಿರ ಕೆಲವು ಗಡಿಗೆ-ಮಡಿಕೆಗಳಿದ್ದವು. ಹಳೆಯ ಹರಕಾದ ಜಮುಖಾನೆಯೊಂದಿತ್ತು. ಕೆಲವು ಮೇಣಬತ್ತಿಗಳು. ಉರವಲ ಕಟ್ಟಿಗೆಗಳು. ಒಂದು ಚಕಮುಕಿ ಕಲ್ಲು. ಅವರು ತಲೆಯನ್ನು ಬಗ್ಗಿಸಿ ಹೊಳಹೊಕ್ಕು ಹುಲ್ಲಿನ ಪೆಂಡೆಯ ಮೇಲೆ ಕುಳಿತರು. ಆ ಗಿಡದ ಟಿಸಿಲಾದ ಎರಡು ಬೊಡ್ಡೆಗಳ ನಡುವಿನ ಸ್ಥಳವೇ ಅದರ ಬಾಗಿಲವಾಗಿತ್ತು. ಅಲ್ಲಿಂದಲೇ ತುಸು ಬೆಳಕು ಬರುತ್ತಿತ್ತು. ಒಂದು ಮೂಲೆಯಲ್ಲಿ ನೀರು ತುಂಬಿದ ಮಣ್ಣಿನ ಕೊಡ, ಕೆಲವೊಂದು ರೊಟ್ಟಿಯ ತುಣುಕುಗಳೂ ಕೆಲವು ಬಾರೀಹಣ್ಣುಗಳೂ ಅಲ್ಲಿಯೇ ಬಿದ್ದಿದ್ದವು.

“ ಇನ್ನು ಊಟ ಮಾಡೋಣ, ನಡೆಯಿರಿ. ” ಎಂದು ಭಿಕ್ಷುಕನೆನ್ನಲಾಗಿ ಇಬ್ಬರೂ ಕೂಡಿ ಅಲ್ಲಿ ಇದ್ದುಬಿದ್ದುದನ್ನೆಲ್ಲ ತಿಂದುಬಿಟ್ಟರು; ಒಂದೇ ಮಡಿಕೆಯೊಳಗಿಂದಲೇ ನೀರು ಕುಡಿದು ಮಾತಾಡತೊಡಗಿದರು.

“ ಅಂದರೆ ನಿನಗೆ ಏನಾಗುವದೆಂಬುದರ ಪರಿವೆಯಿಲ್ಲ; ಯಾವುದಾದರೂ ಅಷ್ಟೇ ಅಲ್ಲವೆ ? ”

" ಹಾಗೆಂದರೇನೂ ಅಡ್ಡೀ ಇಲ್ಲ. ನೀವು ದೊಡ್ಡವರು. ನಮ್ಮಂಥವರಿಗೇನು ಮಾಡುವದಿದೆ ಅದನ್ನು ತೆಗೆದುಕೊಂಡು ? "

" ಆದರೂ ಏನೇ ಆದರೂ-ಸದ್ಯದ ಪರಿಸ್ಥಿತಿಯು—"

" ಅದನ್ನೇನು ತಗೊಂಡು ಮಾಡಲಿ ? ಇದರಂಥ ಅನೇಕ ಸಂಗತಿಗಳು ನನ್ನ ಅಳತೆಯಲ್ಲಿಲ್ಲದವಿರುತ್ತವೆ. ಪ್ರತಿನಿತ್ಯ ಉದಯಿಸುವವನು ಸೂರ್ಯ, ಹೆಚ್ಚು-ಕಡಮೆಯಾಗುವವನು ಚಂದ್ರ. ನಾನು ಇಂಥ ನೈಸರ್ಗಿಕ ನೋಟಗಳನ್ನು ಕಂಡು ಮಗ್ನನಾಗುತ್ತೇನೆ. " ಎಂದಂದು ಒಂದಿಷ್ಟು ನೀರು ಸೆಡ್ಡಿ "ಎಷ್ಟು ತಣ್ಣಗಿವೆ ಈ ನೀರು ! ನಿಮಗೆ ಹೇಗೆ ಹತ್ತಿದವೋ ಏನೊ !"

" ಇರಲಿ ಬಿಡು. ನಿನ್ನ ಹೆಸರೇನು ? "

" ನನ್ನ ಹೆಸರು ಟೇಲ್‌ಮಾರ್ಚ. ನನಗೆ ಕೈಮಾಂಡ ಎಂದೂ ಅನ್ನುತ್ತಾರೆ. ಕೈಮಾಂಡ ಎಂದರೆ ಭಿಕ್ಷುಕ. ಈಗ ನಾಲ್ವತ್ತು ವರುಷಗಳಿಂದ ನನಗೆ " ಮುದುಕ ಎಂದೂ ಕರೆಯಲಾಗುತ್ತದೆ. "

" ಏನು ನಾಲ್ವತ್ತು ವರುಷಗಳಿಂದ ! ಆದರೆ ನೀನಿನ್ನೂ ತರುಣನಾಗಿರುವೆಯಲ್ಲ. "

" ನಾನೆಂದೂ ತರುಣನಾಗಿರಲಿಲ್ಲ; ಆದರೆ ನಿಮ್ಮಂಥ ಶ್ರೀಮಂತರು ಎಂದೂ ಮುದುಕರಾಗುವದಿಲ್ಲ. ನಿಮ್ಮ ನಡಿಗೆಯನ್ನು ನೋಡಿ ಯಾರೂ ನಿಮಗೆ ೨೦ ವರುಷಗಳಿಗಿಂತ ಹೆಚ್ಚು ವಯಸ್ಸಾಗಿಲ್ಲೆನ್ನಬಹುದು. ಅದೇ ನನ್ನನ್ನು ನೋಡಿರಿ. ಒಂದೆರಡು ಮೈಲು ನಡೆದರೆ ಮೈಯೆಲ್ಲಾ ಬೆವರಿನಿಂದ ತೊಯ್ದು ಹೋಗುವದು. ಆದರೂ ನಾವಿಬ್ಬರೂ ಅಷ್ಟೇ ಮುದುಕರಾಗಿದ್ದೇವೆ. ಶ್ರೀಮಂತರ ಮಾತೇಕೆ ? ಅವರಿಗೆ ದಿನಾಲು ತಿನ್ನಲು ಒಳ್ಳೆ ಆಹಾರ ಸಿಗುತ್ತದೆ. ತಿನ್ನುವದೆಂದರೆ ಸಶಕ್ತರಿದ್ದಂತಯೇ. ಸಿರಿತನ-ಬಡತನಗಳು ಒಂದಕ್ಕೊಂದು ವಿರುದ್ಧವಾದವುಗಳು. ಇವುಗಳ ಪರಿಣಾಮವೂ ಭಯಂಕರವಾಗಿದೆ. ಬಡವರ ಇಚ್ಛೆ ಸಿರಿವಂತರಾಗಬೇಕೆನ್ನುತ್ತದೆ. ಸಿರಿವಂತರ ಇಚ್ಛೆ ಬಡವರಾಗಬೇಕೆಂದಿರುವದಿಲ್ಲ. ನಾನೆಂದೂ ಈ ಗೊಂದಲದಲ್ಲಿ ಬೀಳುವದೇ ಇಲ್ಲ. ನನ್ನ ಜನ್ಮವು ಶ್ರೀಮಂತನಾಗಲಿ, ಬಡವನಾಗಲಿ ಎಂಬುದಕ್ಕೆ ಬಂದುದಲ್ಲ. ಋಣಿಯಾಗಿರುವದೆಂಬ ಮಾತೊಂದು ಮಾತು ಜಗತ್ತಿ

ನಲ್ಲಿದೆ ಎಂಬದನ್ನಷ್ಟೇ ನಾನು ಬಲ್ಲೆ. ರಾಜನನ್ನು ಸಾಯಹೊಡೆಯಬಾರ ದೆಂಬ ಮಾತು ನನಗೆ ಮಾನ್ಯವಿದೆ. ಆದರೆ ಅವರೇಕೆ ಹೊಡೆಯಬಾರದೋ ನನಗೆ ಹೊಳೆಯದ ಮಾತಾಗಿದೆ. ನಾನು ಹೀಗೆಂದರೆ ಒಬ್ಬ ಮನುಷ್ಯ ನೆನ್ನಬಹುದು 'ಅವನೇಕೆ ಜನರನ್ನು ಗಿಡಕ್ಕೆ ಕಟ್ಟಿಹಾಕಿ ಕೊಲ್ಲಬೇಕು ಎಂದು.' ಒಮ್ಮೆ ಒಬ್ಬ ಮನುಷ್ಯನು ರಾಜನ ಚಿಗರೆಯೆಂದು ತಿಳಿಯದೆ ಬೇಟೆಯಾಡಿದನು. ಅವನಿಗೆ ರಾಜನು ಗಲ್ಲಿನ ಶಿಕ್ಷೆ ಕೊಟ್ಟದ್ದನ್ನು ನಾನೇ ಸ್ವತಃ ನೋಡಿದ್ದೇನೆ. ಪಾಪ ! ಅವನಿಗೆ ಹೆಂಡತಿಯೂ, ಏಳು ಮಕ್ಕಳಿದ್ದರು. ಒಟ್ಟನಲ್ಲಿ ಎರಡೂ ಕಡೆಗೆ ಒಂದೇಪ್ರಕಾರವಿದೆ. ಯಾರಿಗೂ ವಂದಿಸುವ ಹಾಗಿಲ್ಲ. ಯಾರನ್ನೂ ನಿಂದಿಸುವಂತಿಲ್ಲ. ನಾನು ಯಾವ ಪಕ್ಷಕ್ಕೂ ಸೇರಿ ಲ್ಲೆಂಬ ಮಾತು ತಮಗೆ ತಿಳಿದಿರಲು ಸಾಕು. ಸಂಕಟಗಳು ಬರುತ್ತವೆ; ಹೋಗುತ್ತವೆ. ನಾನು ಇದ್ದಲ್ಲಿಯೇ ಇದ್ದಂತೆಯೇ ಇದ್ದೇನೆ. "

ಸ್ವಲ್ಪಹೊತ್ತು ಸುಮ್ಮನಿದ್ದು ಭಿಕ್ಷುಕನು ಇನ್ನೂ ಮಾತು ಮುಂದು ವರಿಸಿದನು.

" ನನಗೆ ವೈದ್ಯಕಿಯು ಬರುತ್ತದೆ. ಎಲುಬು ಮುರಿದಿದ್ದರೆ ನಾನು ಕೂಡಿಸುತ್ತೇನೆ. ನನಗೆ ವನಸ್ಪತಿಗಳ ಜ್ಞಾನವಿದೆ. ನಾನು ರೋಗಗಳನ್ನು ಹೇಗೆ ನಿವಾರಿಸುತ್ತೇನೆಂಬುದರ ಅರಿವಿಲ್ಲದೆ ಸುತ್ತುಮುತ್ತಲಿನ ಜನರು ನನಗೆ ಜಾದೂಗಾರ ಎಂದೆನ್ನುತ್ತಾರೆ. "

" ನೀನು ಈ ಭಾಗದಲ್ಲಿಯೇ ಇರುವವನೋ ? "

" ನನ್ನ ಜನ್ಮದಲ್ಲಿ ನಾನಿಲ್ಲಿಂದ ಎಲ್ಲಿಯೂ ಹೋಗಿಲ್ಲ. "

" ನನ್ನ ಪರಿಚಯವಿದೆಯೇ ನಿನಗೆ ? "

" ಇದೆ. ಇಂದಿಗೆರಡು ವರುಷಗಳ ಹಿಂದೆ ನೀವು ಈ ದಾರಿಯಿಂದ ಎಲ್ಲಿಗೋ ಹೋಗಿದ್ದಿರಿ. ಆಗ ನಿಮ್ಮನ್ನು ನಾನು ನೋಡಿದ್ದೆ. ಈಗ ಆ ದಿನ್ನೆಯ ಮೇಲೆ ಎತ್ತರ ಮನುಷ್ಯನೊಬ್ಬನನ್ನು ನೋಡಿದೆ. ಇತ್ತಕಡೆಯ ಜನರೆಲ್ಲರೂ ಕುಳ್ಳರು. ಆ ಜಾಹೀರುನಾಮೆ ಲಕ್ಷಕ್ಕೆ ಬಂದುದರಿಂದ ನೀವೇ ಎಂದು ಒಮ್ಮೆಲೆ ಗುರುತಿಸಿದೆ. "

" ನಾನೇಕೆ ನಿನ್ನ ಗುರುತು ಹಿಡಿಯಲಿಲ್ಲ ? "

" ನೀವು ನನ್ನನ್ನು ನೋಡಿರುವಿರಿ. ಆದರೆ ನನ್ನ ಕಡೆಗೆ ಲಕ್ಷಗೊಡಲಿಲ್ಲ. ನಾನು ನಿಮ್ಮನ್ನು ನೋಡಿದೆ. ಆದರೆ ದಾನ ಮಾಡುವವನ ಹಾಗೂ ಭಿಕ್ಷುಕನ ದೃಷ್ಟಿ ಒಂದೇ ಇರದೆ ಭಿನ್ನವಾಗಿರುವದು "

" ನನ್ನ ನಿನ್ನ ಪರಿಚಯವು ಈ ಮೊದಲೇ ಆಗಿತ್ತನ್ನು ! "

" ಓಹೋ, ಎಷ್ಟೋಸಲ. ಯಾಕೆಂದರೆ ನನ್ನ ಉದ್ಯೋಗವೆಂದರೆ ಬಿಕ್ಕೆ ಬೇಡುವದು. ನಾನು ನಿಮ್ಮ ಬಂಗಲೆಗೆ ಹೊರಳುವ ಹಾದಿಯ ಮೂಲೆಯಲ್ಲಿ ನಿಲ್ಲುತ್ತಿದ್ದೆ. ನೀವು ನನಗೆ ನಡುನಡುವೆ ಭಿಕ್ಷೆಯನ್ನು ಹಾಕುತ್ತಿದ್ದಿರಿ. ಭಿಕ್ಷೆ ಹಾಕುವವನು ಭಿಕ್ಷುಕನನ್ನು ಎಂದೂ ನೋಡುವದೇ ಇಲ್ಲ. ಆದರೆ ಅದೇ ಭಿಕ್ಷುಕನು ದಾನ ಮಾಡುವವನನ್ನು ತೆರೆದ ಕಣ್ಣುಗಳಿಂದ ನೋಡುತ್ತಿರುತ್ತಾನೆ. ಭಿಕ್ಷುಕನೂ ಒಬ್ಬ ಗುಪ್ತಚಾರನಂತೆಯೇ ಇರುತ್ತಾನೆ. ನಾನು ಎಷ್ಟೇ ಸಂಕಟದಲ್ಲಿದ್ದರೂ ಅಂಥ ಕೆಲಸವನ್ನು ಎಂದೂ ಮಾಡಿಲ್ಲ; ಮಾಡುವದಿಲ್ಲ. ನಾನು ನನ್ನ ಕೈಗಳನ್ನು ಎತ್ತಿ ನಿಲ್ಲುತ್ತಿದ್ದೆನು. ನೀವು ಏನೋ ಚೆಲ್ಲುತ್ತಿದ್ದಿರಿ. ಆದರಿಂದ ನನಗೆ ಉಪವಾಸ ಬೀಳಬೇಕಾಗುತ್ತಿದ್ದಿಲ್ಲ. ರಾತ್ರಿಯಂತೂ ಹೊಟ್ಟೆಯನ್ನು ನೆಲಕ್ಕೆ ಹಚ್ಚಿಕೊಂಡು ಮಲಗುವ ರೂಢಿಯೇ ನನಗಾಗಿ ಬಿಟ್ಟದೆ. ಆದರೆ ಎಷ್ಟೋವೇಳೆ ಹಗಲೂ ಇರುಳೂ ಉಪವಾಸ ಬೀಳುವ ಪ್ರಸಂಗಗಳು ಬಂದಿವೆ. ಒಂದು ದವಃಡಿಯೂ ನನಗೆ ಜೀವಕ್ಕಿಂತ ಹೆಚ್ಚು ಪ್ರೀತಿಯದೆನಿಸುತ್ತದೆ. ನೀವು ನನ್ನ ಪ್ರಾಣವನ್ನು ಅದೆಷ್ಟೋಸಲ ಬದುಕಿಸಿದ್ದೀರಿ. ಇಂದು ಮಾತ್ರ ನಾನು ನಿಮ್ಮ ಪ್ರಾಣವನ್ನುಳಿಸಿದ್ದೇನೆ. "

" ಅಂದರೆ ನನ್ನನ್ನು ಶತ್ರುಗಳ ವಶ ಮಾಡುವದಿಲ್ಲನ್ನು. "

" ಇಲ್ಲ. ಆದರೆ ಒಂದೇ ಕರಾರಿನಮೇಲೆ. "

" ಆ ಕರಾರು ಯಾವುದು ? "

" ನೀವು ಇಲ್ಲಿ ಯಾರಿಗೂ ತೊಂದರೆ ಕೊಡಬಾರದು. "

" ನಾನಂತೂ ಒಳ್ಳೆಯದನ್ನೇ ಮಾಡಲು ಇಲ್ಲಿಗೆ ಬಂದಿದ್ದೇನೆ. "

" ಹಾಗಾದರೆ ನಾವಿನ್ನು ಮಲಗಿಕೊಳ್ಳುವಾ. "

ಹೀಗೆಂದು ಇಬ್ಬರೂ ಹತ್ತಿರ ಹತ್ತಿರದಲ್ಲಿಯೇ ಮಲಗಿಕೊಂಡರು. ಭಿಕ್ಷುಕನಿಗೆ ಕೂಡಲೇ ನಿದ್ದೆ ಹತ್ತಿತು. ಆದರೆ ರಾಜಪುತ್ರನಿಗೆ ದಣಿವಾಗಿದ್ದರೂ ಬೇಗನೆ ನಿದ್ದೆ ಬರಲಿಲ್ಲ. ರಾತ್ರಿಯ ಪ್ರಶಾಂತ ಸಮಯದಲ್ಲಿ ಅವನಿಗೆ ಗಂಟೆ ಬಾರಿಸಿದ ಸಪ್ಪಳವು ಸ್ಪಷ್ಟವಾಗಿ ಕೇಳಬಂದಿತು. ಮುಂದೆ ತುಸು ಹೊತ್ತಿನಲ್ಲಿ ಅವನಿಗೂ ನಿದ್ದೆ ಹತ್ತಿಬಿಟ್ಟಿತು.

ಮುಂಜಾನೆ ಏಳುವದರೊಳಗಾಗಿಯೇ ಸೂರ್ಯನು ಮೇಲೆ ಬಂದಿದ್ದನು. ಆ ಭಿಕ್ಷುಕನು ಒಳಗಿನ ಸ್ಥಳವು ಸಂಕುಚಿತವಾಗುವದೆಂದು ಹೊರಗೆ ಪೊಳ್ಳಿದ್ದ ಸ್ಥಳದಲ್ಲಿ ಬಂದು ನಿಂತಿದ್ದನು.

" ಮಹಾರಾಜ, ಈಗ ಗಡಿಯಾಳ ಬಾರಿಸಿದ ಸದ್ದು ಕೇಳಿಸಿತು. ಅದನ್ನು ಬಿಟ್ಟು ಯಾವ ಸದ್ದೂ ಕೇಳಬರುವದಿಲ್ಲ. ನಿನ್ನೆ ಬಾರಿಸುತ್ತಿದ್ದ ಸಪ್ಪಳವೂ ಈಗಿರುವದಿಲ್ಲ. ಈಗ ಸುತ್ತೂ ಕಡೆಗೆ ಶಾಂತತೆ ನೆಲೆಸಿದೆ. ಪ್ರಜಾಪಕ್ಷದ ಸೈನ್ಯವು ಇನ್ನೂ ಮಲಗಿರಬೇಕು; ಇಲ್ಲವೆ ತಳಕಿತ್ತಿರಬೇಕು. ದುರ್ಘಟ ಪ್ರಸಂಗ ಬಂದಿತ್ತು. ಅದೀಗ ದೂರಾಯ್ತು. ನೀವೀಗ ಬೇರೆ ಕಡೆಗೆ ಹೋಗಬೇಕು. ಈಗ ನನ್ನ ಭಿಕ್ಷೆಗಾಗಿ ಹೊರಡುವ ಹೊತ್ತೂ ಆಗಿದೆ. ನಾನು ಇತ್ತ ಕಡೆಗೆ ಹೋಗುತ್ತೇನೆ. ನೀವು ಅತ್ತ ಕಡೆಗೆ ಹೊರಡಿರಿ " ಎಂದೆಂದು ಬಗ್ಗಿ ಮುಜುರೆ ಮಾಡಿ " ನಿಮಗೆ ಹಸಿವೆಯಾಗಿದ್ದರೆ ಇದ್ದಷ್ಟರಲ್ಲಿ ಒಂದಿಷ್ಟು ಬೇಕಾದರೆ ತೆಗೆದುಕೊಳ್ಳಿರಿ " ಎಂದು ಹೇಳಿದನು.

ಇಷ್ಟು ಮಾತಾಡಿದವನೆ ಆ ಭಿಕ್ಷುಕನು ಗಿಡಗಳ ಗುಂಪಿನೊಳಗೆ ನುಗ್ಗಿದನು. ಸ್ವಲ್ಪ ಹೊತ್ತಿನಮೇಲೆ " ಲ್ಯಾಂಟ್‌ನೆಕ್ "ನೂ ಎದ್ದು ತನ್ನ ಮಾರ್ಗ ಕ್ರಮಣವನ್ನು ಕೈಕೊಂಡನು.

———

## ೬.

ಆಲ್ಹಾದಕರವಾದ ಮುಂಜಾವು. ಹಕ್ಕಿಪಕ್ಕಿಗಳು ಅತ್ತಿತ್ತ ಹಾರಾಡುತ್ತ ಹಾಡುತ್ತಲಿವೆ. ಸರದಾರನಾದ ಆ ಮುದುಕನು ನಿನ್ನೆ ಬಂದ ದಾರಿಯಿಂದ ಸಾಗಿದನು. ಸ್ವಲ್ಪ ದಾರಿ ನಡೆದ ಮೇಲೆ ಆ ಭಿಕ್ಷುಕನು ಬೆಟ್ಟವಿಯಾದ ಸ್ಥಳಕ್ಕೆ ಬಂದನು. ಅಲ್ಲಿನ್ನೂ ಆ ಜಾಹೀರನಾಮೆಯು ಇತ್ತು. ನಿನ್ನೆ ಅವನಿಗೆ ಓದಲಿಕ್ಕಾಗದ ಬುಡದಲ್ಲಿಯ ಬರವಣಿಗೆಯನ್ನು ಓದಬೇಕೆಂದು ಕಂಬದ ಹತ್ತಿರ ಹೋದನು.

ಆ ಬರಹವು ಈ ರೀತಿಯಾಗಿತ್ತು.

“ ಮಾರ್ಕ್ವಿಸ್ ಲ್ಯಾಂಟ್‌ನೆಕ್‌ನನ್ನು ಬಂಧಿಸಿದನಂತರ ಅವನೇ ಎಂದು ಖಂಡಿತವಾಗಿ ಗೊತ್ತಾದ ಕೂಡಲೆ ಅವನಿಗೆ ಗುಂಡು ಹೊಡೆಯ ಲಾಗುವದು ”

—ಗಾವೆನ್, ಸೇನಾಧ್ಯಕ್ಷ.

“ ಗಾವೆನ್ ” ಎಂದು ಆ ರಾಜಪುತ್ರನು ಬಾಯಲ್ಲಿಯೇ ವಟಗುಟ್ಟಿ ಮತ್ತೆ ಆ ಜಾಹೀರುನಾಮೆಯನ್ನು ನೋಡುತ್ತ ಚಣಹೊತ್ತು ಶೂನ್ಯಚಿತ್ತ ನಾಗಿ ನಿಂತನು. ‘ ಗಾವೆನ್ ಯಾರು ?’ ಎಂದು ಉದ್ಗಾರ ತೆಗೆಯುತ್ತ ಅವನು ಮುಂದೆ ಮುಂದೆ ಹೆಜ್ಜೆ ಹಾಕಹತ್ತಿದನು. ಸ್ವಲ್ಪುಮುಂದೆ ಹೋದವನೆ ಕಂಬದ ಕಡೆಗೆ ತನ್ನ ಮುಖವನ್ನು ಹೊರಳಿಸಿ, ಏನೋ ಸಂಶಯ ಬಂದುದರಿಂದ ಕಂಬದ ಕಡೆಗೆ ಪುನಃಬಂದು ಇಡೀ ಜಾಹೀರನಾಮೆಯನ್ನು ಮತ್ತೊಮ್ಮೆ ಓದಿಕೊಂಡನು. ಭಾರವಾದ ಹೆಜ್ಜೆಗಳನ್ನಿಡುತ್ತ ಮತ್ತೆ ದಾರಿಯನ್ನು ಹಿಡಿದು ‘ ಗಾವೆನ್ ’ ಶಬ್ದವನ್ನುಚ್ಚರಿಸುತ್ತ ಮುಂದೆ ಸಾಗಿದನು. ಅಲ್ಲೊಂದು ಕಾಲುದಾರಿ ಒಡೆದಿತ್ತು. ಅವನ್ನೇ ಹಿಡಿದು ಸಾಗಿದನು. ಈ ಕಾಲುದಾರಿಯು ಒಂದು ಮರಡಿಯ ವಾರಿಯಲ್ಲಿತ್ತು. ಸೂರ್ಯನ ಪ್ರಕಾಶಬಿದ್ದು ಗಿಡಗಂಟಿ ಗಳ ಎಲೆಗಳು ಮಿನುಗುತ್ತಿದ್ದವು. ಸೃಷ್ಟಿಯು ಮುಂಜಾವಿನ ಆನಂದ ಸಾಗರದಲ್ಲಿ ಲೋಲಾಡುವಂತೆ ಭಾಸವಾಗುತ್ತಿತ್ತು. ಈ ಪ್ರಕಾರವಾಗಿ ಎಲ್ಲ ಕಡೆಗೂ ಶಾಂತತೆಯು ಪಸರಿಸಿರುವಾಗಿ ಒಮ್ಮಿಂದೊಮ್ಮೆಲೆ ಇಡೀ ವಾತಾ

ವರಣವೇ ಬದಲಾಯಿತು. ತೋಫುಗಳ ಗರ್ಜನೆಯ ಆರ್ಭಟೆಯು ದಶದಿಕ್ಕುಗಳನ್ನು ವ್ಯಾಪಿಸಿತು. ಜನರ ಚೀತ್ಕಾರಧ್ವನಿಯು ಕರ್ಣ ಕರ್ಕಶ ವಾಗಿ ಕೇಳಹತ್ತಿತು. ದಿಗಂತವೆಲ್ಲ ಹೊಗೆಯಿಂದ ಮುಚ್ಚಿಹೋಯಿತು. ಅಗ್ನಿಜ್ವಾಲೆಗಳ ಮಳೆಯೇ ಆರಂಭವಾಯಿತು. ಸುತ್ತಮುತ್ತಲಿನ ಊರಿಗೆ ಊರೇ ಹುಲ್ಲಿನಂತೆ ಸುಟ್ಟು ಭಸ್ಮವಾಗುತ್ತಿದ್ದವೆಂದು ಕಂಡುಬಂದಿತು.

ಈ ವಿಪತ್ತಿನ ಕಲ್ಪನೆಯೇ ಯಾರಿಗೂ ಇರಲಿಲ್ಲ. ಹರ್ಬೆಲಪೇಲ್‌ದಲ್ಲಿ ಯುದ್ಧವಾರಂಭವಾಗಿರಬೇಕೆಂದು ಹೇಳಬಹುದಾಗಿತ್ತು. ಇದೆಲ್ಲ ಭೀಕರ ಸ್ಥಿತಿಯನ್ನವಲೋಕಿಸಿ ರಾಜಪುತ್ರನು ಧಿಗ್ಗನೆ ನಿಂತುಬಿಟ್ಟನು. ಇಂಥ ವೇಳೆಯಲ್ಲಿ ತನ್ನ ಜೀವದ ಪರಿವೆಯ ವಿಚಾರವಿಲ್ಲದೆ ಮನುಷ್ಯನು ಕುತೂಹಲಿ ಯಾಗಿ ಜಿಜ್ಞಾಸೆಯ ಸುಳಿಗೆ ಬೀಳುತ್ತಾನೆ. ತನ್ನ ಜೀವವು ಆಪತ್ತಿಗೀಡಾದರೂ ಚಿಂತೆಯಿಲ್ಲದೆ ಅಲ್ಲೇನು ನಡೆದಿದೆಯೆಂಬದನ್ನು ನೋಡುವಂಥ ಪ್ರವೃತ್ತಿ ಯುಂಟಾಗುತ್ತದೆ. ಆ ರಾಜಪುತ್ರನು ಹಿಂದು ಮುಂದಿನ ವಿಚಾರದ ಪರಿವೆಯಿಲ್ಲದೆ ಶ್ರಮಬಟ್ಟು ಆ ದಿನ್ನೆಯನ್ನೇರಿದನು. ದಿನ್ನೆಯ ಮೇಲಿರುವದ ರಿಂದ ಅವನು ಕಾಣಬಹುದಾಗಿತ್ತಾದರೂ ಅಲ್ಲಿ ನಡೆವಿರುವ ಭೀಷಣ ದೃಶ್ಯವು ಅವನಿಗೆ ಕಾಣಿಸುತ್ತಿತ್ತು.

ಬಂದೂಕುಗಳು ಎಡೆಬಿಡದೆ ಗುಂಡುಗಳನ್ನುಗುಳುತ್ತಿದ್ದವು. ಬೆಂಕಿ ಹತ್ತುತ್ತಿತ್ತು. ಜನರು ಚೀರಿಕೊಳ್ಳುತ್ತಿದ್ದರು. ಇಂಥದೆಲ್ಲವೂ ಅವನ ದೃಷ್ಟಿಗೆ ಬಿದ್ದಿತು. ಆದರೆ ಹೀಗೇಕಾಯಿತೆಂಬುವದೆ ಅವನಿಗೆ ಹೊಳೆಯಲಿಲ್ಲ. ಈ ಮನೆಗಳನ್ನು ಮುತ್ತಿದ್ದೇಕೆ ? ಯಾತಕ್ಕಾಗಿ ಈ ಗೊಂದಲವು ? ಯಾರು ಮಾಡಿದವರು ಎಂಬದಕ್ಕೆ ಅವನಿಗೆ ಉತ್ತರವೇ ದೊರಕುವಂತಿರಲಿಲ್ಲ.

ಪ್ರಜಾಪಕ್ಷದ ಕಾಯದೆಗಳಲ್ಲೊಂದು ಕಾಯದೆ ಇದೆ. ಏನೆಂದರೆ ಪ್ರಜಾಪಕ್ಷದ ಸೈನ್ಯವು ಹೋಗಲು ಹತ್ತಿರವಿರುವ ಹಳ್ಳಿಯವರು ಅರಣ್ಯದಲ್ಲಿ ದಾರಿಯನ್ನು ಮಾಡಿಕೊಡದಿದ್ದರೆ ಅವರನ್ನು ಶಿಕ್ಷಿಸಬೇಕೆಂಬ ಕಾಯದೆ ಯೊಂದನ್ನು ಪ್ರಜಾಪಕ್ಷದವರು ಮಾಡಿದ್ದರು. ಈ ಕಾಯದೆಯಂತೆ ಆಹಳ್ಳಿಗಳನ್ನು ಸುಟ್ಟುಹಾಕಿ ಹಾಳುಗೆಡವಿರಬಹುದು. ಇಂಥ ಅಪರಾಧ

ವನ್ನು ಈ ಹಳ್ಳಿಯವರು ಮಾಡಿರಬಹುದು ಎಂದು ಅವನು ತರ್ಕಿಸಿದನು. ಇದ್ದರೂ ಇರಬಹುದೆಂದು ಸ್ತಬ್ಧನಾಗಿ ಸುತ್ತೂ ಕಡೆಗೆ ನೋಡುತ್ತ ನಿಂತೇ ಬಿಟ್ಟನು.

ಎಲ್ಲ ಪಾಶವೀಕೃತ್ಯಗಳಂತೆ ಆ ಗೊಂದಲವೆಲ್ಲವು ಬೇಗನೆ ಮುಗಿದು ಬಿಟ್ಟಿತು. ಅದನ್ನು ಮುಗಿಸಿಕೊಂಡು ಕೆಲವು ಜನರು ಮೆಲ್ಲಮೆಲ್ಲನೆ ವಾರಿಯಲ್ಲಿ ದಾರಿಯನ್ನು ಮಾಡಿಕೊಳ್ಳುತ್ತ ದಿನ್ನೆಯೇರತೊಡಗಿದರು. ತೋಫುಗಳ ಗರ್ಜನೆ ನಿಂತಿತು. ಲಷ್ಕರೀ ವಾದ್ಯಗಳೂ ನಿಂತವು. ಆದರೂ ಆ ಜನರು ಯಾರನ್ನೋ ಹುಡುಕುತ್ತ ಹೊರಟಿರಬೇಕೆಂದು ಅವರ ಬರುವಿಕೆಯ ಮೇಲಿಂದ ಕಲ್ಪಿಸಬಹುದಾಗಿತ್ತು. ವಿಜಯೋನ್ಮತ್ತತೆಯಿಂದ ಜಯಜಯಕಾರವನ್ನು ಮಾಡುತ್ತ, ಅಲ್ಲಲ್ಲಿ ಏನನ್ನೋ ಹುಡುಕುತ್ತ ಆ ಜನರು ದಿನ್ನೆಯನ್ನು ಹತ್ತುತ್ತಿದ್ದರು. ಮೊದಮೊದಲು ಅವರು ಏನೆನ್ನು ತ್ತಿದ್ದರೋ ಅದು ಸ್ಪಷ್ಟವಾಗಿ ಕೇಳಬರುತ್ತಿದ್ದಿಲ್ಲ. ಬರಬರುತ್ತ ಅವರ ಆ ಧ್ವನಿಯು ಸ್ಪಷ್ಟವಾಗಿ ಕೇಳತೊಡಗಿತು. ಅವರು 'ಲ್ಯಾಂಟ್‌ನೆಕ್, ಮಾರ್ಕ್ವಿಸ್ ಲ್ಯಾಂಟ್‌ನೆಕ್' ಎಂದು ಚೀರುತ್ತ, ಅವನನ್ನೇ ಶೋಧಿಸ ತೊಡಗಿದ್ದರೆಂಬದು ಅವರ ಕೂಗಾಟದಿಂದ ತಿಳಿದುಬಂದಿತು.

ಒಮ್ಮಿಂದೊಮ್ಮಿಲೆ ಬಂದೂಕು, ಬರ್ಚಿ, ಕತ್ತಿಗಳನ್ನು ಧರಿಸಿದವರು ಅವನ ಸುತ್ತಲೂ ಮುತ್ತಿದರು. ಸೈನಿಕರ ಕೈಯಲ್ಲಿ ಮೂರು ಬಣ್ಣದ ಬಾವು ಟವಿತ್ತು. ಅವರು ಬಾಯಿಂದ 'ಲ್ಯಾಂಟನೆಕ್' ಎಂಬ ಹೆಸರನ್ನು ಉಚ್ಚರಿಸು ತ್ತಿದ್ದರು. ಈ ದೃಶ್ಯವನ್ನು ಕಂಡು ಅವನೇನೂ ಹೆದರದೆ, ಹರಕು ಚಿಂದಿಯಾದ ಉಡುಪನ್ನು ಹರಿದೊಗೆದು ತನ್ನ ಮೊದಲಿನ ಉಡುಪನ್ನು ತೊಟ್ಟುಕೊಂಡು "ನಾನೇ ನಿಮಗೆ ಬೇಕಾದವನು. ನಿಮಗೆ ಏನು ಮಾಡುವದಿದೆಯೋ ಅದನ್ನುಮಾಡಿರಿ. ಬಂದೂಕು ಹಾರಿಸಿರಿ" ಎಂದು ಗಟ್ಟಿಯಾಗಿ ಕೂಗಿ ಅಂಗಿಯನ್ನು ಹರಿದೊಗೆದು ತನ್ನ ಎದೆಯನ್ನು ಮುಂದೆ ಚಾಚಿ ನಿಂತನು. ಬಂದೂಕಿನ ಕುದುರೆಗಳು ಹಾರುವ ಬದಲು ಆ ಜನರೆಲ್ಲರೂ ಮೊಳಕಾಲೂರಿ ನಮಸ್ಕರಿಸುತ್ತ "ಲ್ಯಾಂಟ್‌ನೆಕ್‌ರಿಗೆ ಜಯವಾಗಲಿ. ಮಹಾರಾಜರು

ಚಿರಾಯುವಾಗಲಿ ! ” ಎಂದು ಅವರು ಏಕ ಕಂಠದಿಂದ ಜಯಘೋಷ ಮಾಡಿದರು. ತಮಗೆ ಬೇಕಾದ ಮನುಷ್ಯನು ದೊರೆತ ಬಗ್ಗೆ ಆನಂದವಾಗಿ ತಮ್ಮ ಟೊಪ್ಪಿಗೆಗಳನ್ನು ಆಕಾಶದಲ್ಲಿ ತೂರಾಡಹತ್ತಿದರು. ಒರಿಯಿಂದ ಕತ್ತಿಗಳನ್ನು ಹಿರಿದು ತಮ್ಮ ಹರುಷವನ್ನು ವ್ಯಕ್ತಪಡಿಸಿದರು. ಕೈಗೆಸಿಕ್ಕ ಆಯುಧಗಳನ್ನು ಹಿಡಿದುಕೊಂಡ ಸಾವಿರಾರು ಜನರು ಅರಣ್ಯದೊಳಗಿಂದ ಓಡುತ್ತ ಬಂದು ಇವರಲ್ಲಿ ಸೇರಿಕೊಂಡರು.

ಇವರು ವೆಂಡಿಯ ಜನರು. ಅವರು ಲ್ಯಾಂಟ್‌ನೆಕ್‌ನು ದೃಷ್ಟಿಗೆ ಬಿದ್ದೊಡನೆಯೆ ಮೊಳಕಾಲೂರಿ ಅವನಿಗೆ ನಮಸ್ಕಾರ ಮಾಡಿದರು. ಒಂದೇಕ್ಷಣ ಕಳೆಯಿತು. ಅಷ್ಟರಲ್ಲಿ ಎಂಥ ಬದಲಾವಣೆ ! ಯಾವ ಜನರು ತನ್ನನ್ನು ಕೊಲ್ಲಬಹುದೆಂದು ಅವನು ಭಾವಿಸಿದ್ದನೋ ಅಂಥವರೇ ಈಗ ದಾಸಾನುದಾಸರಾಗಿ ಕೈಕಟ್ಟಿಕೊಂಡು ಆಜ್ಞಾಧಾರಕರಾಗಿ ನಿಂತಿದ್ದನ್ನು ನೋಡಿದರೆ ಈಶ್ವರೀ ಸಂಕೇತವು ಎಂಥ ಅಗಾಧವಿದೆ ಎಂದು ಬೊಟ್ಟು ಕಚ್ಚ ಬೇಕಾಗುತ್ತದೆ.

ಈ ಹಳ್ಳಿಯ ಜನರ ಕೈಯಲ್ಲಿ ಬಂದೂಕು, ಬರ್ಚಿ, ಕತ್ತಿ, ಬಡಿಗೆ ಮೊದಲಾದ ಆಯುಧಗಳಿದ್ದವು. ಅವರಲ್ಲಿಯ ಹಲವರ ಮುಖಚರ್ಯೆಗಳು ಉಗ್ರವೂ, ಕ್ರೂರವೂ ಆಗಿದ್ದವು. ಆದರೂ ಅವರ ಮುಖದ ಮೇಲೆ ಪ್ರಾಮಾಣಿಕತೆಯೂ, ಸತ್ಯತೆಯೂ ಒಡೆದು ಕಾಣುತ್ತಿದ್ದವು.

ಈ ಜನಜಂಗುಳಿಯಿಂದ ತರುಣನೊಬ್ಬನು ನುಗ್ಗಿಕೊಂಡು ಬಂದು ಲ್ಯಾಂಟ್‌ನೆಕ್‌ನಿಗೆ ನಮಸ್ಕರಿಸಿ “ ಮಹಾರಾಜ, ನಾವು ನಿಮ್ಮ ಶೋಧದಲ್ಲಿಯೇ ಇದ್ದೆವು. ನೀವು ಕೊನೆಗೊಮ್ಮೆ ನಮಗೆ ದೊರಕಿದಿರಿ. ನಾವೆಲ್ಲರೂ ತಮ್ಮ ಪಾದಸೇವಕರಿದ್ದೇವೆ ನಾನಿಲ್ಲಿಯ ವರೆಗೆ ಈ ಜನರ ಮುಂದಾಳುವಾಗಿದ್ದೆನು. ಆದರೆ ಈಗ ನೀವು ನಮ್ಮ ಮುಂದಾಳಾಗಿ ನಮಗೆ ಅಪ್ಪಣೆಯನ್ನೀಯಬೇಕು ” ಎಂದು ಬಿನ್ನವಿಸಿಕೊಂಡು ಅವನೊಂದು ಸಂಕೇತ ಮಾಡಿದನು. ಅದನ್ನು ಕಂಡು ಸೈನಿಕನೊಬ್ಬನು ಆ ತಿರಂಗಿ ಬಾವುಟವನ್ನು ತಂದು ಲ್ಯಾಂಟ್‌ನೆಕ್‌ನ ಪಾದಗಳ ಮೇಲಿಟ್ಟನು. ನಂತರ ಆ ತರುಣನು “ ಸರಕಾರ, ಈ ಬಾವುಟವನ್ನು ನಾವು

ಯುದ್ಧ ಮಾಡಿ ಗೆದ್ದು ಬಂದಿದ್ದೇವೆ. ಮಹಾರಾಜ, ನನ್ನ ಹೆಸರು ಗಾವಾರ್ಡ" ಎಂದು ಹೇಳಿದನು.

"ಭಪ್ಪರೆ, ಒಳ್ಳೆಯದಾಯಿತು." ಎಂದೆನ್ನುತ್ತ ಸರದಾರನು ತನ್ನ ಕತ್ತಿಯನ್ನು ಹಿರಿದು, ಎತ್ತಿ ಹಿಡಿದು 'ರಾಜನಿಗೆ ಜಯವಾಗಲಿ!' ಎಂದು ಘೋಷಿಸಿದನು. ಆ ಎಲ್ಲ ಜನರೂ ಜಯಜಯಕಾರವನ್ನು ಮಾಡಿದರು. ಸರದಾರನು ಆ ಗಾವಾರ್ಡನ ಕಡೆಗೆ ಹೊರಳಿ "ನಿನ್ನ ಹತ್ತಿರ ಸೈನ್ಯ ವೆಷ್ಟಿದೆ" ಎಂದು ವಿಚಾರಿಸಿದನು.

"ಏಳು ಸಾವಿರ." ಎಂಬ ತರುಣನ ಉತ್ತರವನ್ನು ಕೇಳಿಕೊಂಡು ದಿನ್ನೆಯನ್ನಿಳಿಯ ತೊಡಗಿದಾಗ "ಎಲ್ಲವೂ ಸಿದ್ಧವಾಗಿಯೇ ಇತ್ತು. ಬೆಂಕಿ ಕೊಡುವ ಕಿಡಿಯೊಂದೇ ಬೇಕಾಗಿತ್ತು. ತಾವಿತ್ತ ಬಂದಿರುವಿರೆಂಬದು ಪ್ರಜಾಪಕ್ಷದ ಜಾಹೀರನಾಮೆಯಿಂದ ನಮಗೆ ಗೊತ್ತಾಗಿತ್ತು. ನಿನ್ನೆ ರಾತ್ರಿ ಅವರು ಗಂಟೆಯನ್ನು ಬಾರಿಸಿದರು" ಎಂದುಸಿರಿದನು.

"ಯಾರ ಸಲುವಾಗಿ ಬಾರಿಸಿದರು?"

"ನಿಮ್ಮ ಸಲುವಾಗಿ."

"ಏನು–ನಿನ್ನ ಕೈಕೆಳಗೆ ಏಳುಸಾವಿರ ಸೈನ್ಯವಿರುವದೇ?"

"ಇಂದಿಗೆ ಅಷ್ಟಿದೆ. ನಾಳೆಗೆ ೧೫ ಸಾವಿರವಾಗಬಹುದು. ದೇಶದೊಳಗಿನ ಜನರೆಲ್ಲರೂ ಎದ್ದಿದ್ದಾರೆ. ನಮ್ಮ ಹತ್ತಿರ ಬಂದೂಕಗಳಿರಲಿಲ್ಲ, ಮದ್ದು-ಗುಂಡುಗಳಿರಲಿಲ್ಲ ಎಂದು ಒಬ್ಬರ ಮನೆಯನ್ನು ಲೂಟಿ ಮಾಡಿದೆವು ಕೆಲವೊಂದು ಸಾಮುಗ್ರಿ ಕೈಗೆ ಸಿಕ್ಕಿತು. ತಾವು ಈ ಅರಣ್ಯದಲ್ಲಿರುವಿರೆಂದು ನಮಗೆ ಸುದ್ದಿಬಂದಿತಾದ್ದರಿಂದ ನಿಮ್ಮ ಶೋಧನೆಯಲ್ಲಿದ್ದೆವು."

"ನೀವು ಅವರ ಸೈನ್ಯದ ಮೇಲೆ ಹಲ್ಲೆಯನ್ನು ಮಾಡಿದಿರಾ?"

"ಅಹುದು. ಈ ಹಳ್ಳಿಯ ಜನರು ಹೇಡಿಗಳಾದ್ದರಿಂದ ಅವರನ್ನು ಸ್ವಾಗತಿಸಿದರು. ಇಂದು ಮುಂಜಾನೆ ಅವರಿನ್ನೂ ಮಲಗಿಕೊಂಡಿರುವಾಗಲೆ ಅವರ ಮನೆಗಳಿಗೆ ಮುತ್ತಿಗೆ ಹಾಕಿ, ಹಾಹಾ ಎನ್ನುವದರಲ್ಲಿ ಹಾಳು ಮಾಡಿಯೇ ಬಿಟ್ಟೆವು. ನೋಡಿರಿ, ಇದು ನನ್ನ ಬಿಳಿಗುದುರೆ. ಇದನ್ನು ತಾವು ಹತ್ತಬೇಕು."

ಸೇನಾಪತಿಯು ಕುದುರೆಯನ್ನೇರಿದನು. ಗಾವಾರ್ಡನು ಅವನಿಗೆ ನಮಸ್ಕರಿಸಿ "ಈಗ ನಮ್ಮ ಸೈನ್ಯದ ಬೀಡನ್ನು ಎಲ್ಲಿ ಬಿಡೋಣ?" ಎಂದು ಕೇಳಲಾಗಿ "ಸಮೀಪದಲ್ಲಿಯೇ ಬಿಡೋಣ ನಮ್ಮೊಂದಿಗೆ ಧರ್ಮಗುರುವೊಬ್ಬನು ಅವಶ್ಯವಾಗಿ ಬೇಕು. ಯಾರಾದರೂ ದೊರೆಯಬಹುದೇ?" ಎಂದು ಸೇನಾಪತಿಯು ವಿಚಾರಿಸಿದನು. "ಓಹೋ ನೋಡಿರಿ-ನಾನಿದ್ದೇನೆ" ಎಂದೊಬ್ಬನು ಮುಂದುವರಿದು ಸೇನಾಪತಿಯ ಎದುರಿಗೆ ನಿಲ್ಲಲಾಗಿ "ನೀವು ನಮ್ಮೊಡನೆ ನಡೆಯಬೇಕು" ಎಂದು ಹೇಳಿದನು. ನಂತರ ಗಾವಾರ್ಡನು ಇನ್ನು ಮುಂದೆ ಏನೇನು ಮಾಡಬೇಕೆಂಬ ಬಗ್ಗೆ ಸೇನಾಪತಿಯೊಡನೆ ವಿಚಾರವಿನಿಮಯ ನಡೆಸಿದನು.

"ಈ ಎಲ್ಲ ಸೈನ್ಯವು ಆ ಕಡೆಯ ಅರಣ್ಯದಲ್ಲಿರಲಿ" ಎಂದು ಆಜ್ಞೆಯಾಯಿತು. ಗಾವಾರ್ಡನು ಕೂಡಲೆ ಅದರಂತೆ ಸೈನಿಕರನ್ನು ಕಳಿಸಿಬಿಟ್ಟನು.

"ಹರ್ಬೆನ್‌ದ ಜನರು ಪ್ರಜಾಪಕ್ಷದವರನ್ನು ಸ್ವಾಗತಿಸಿದರೆಂದು ಆಗಲೆ ನೀನು ಹೇಳಿದಿಯಲ್ಲವೆ?"

"ಅಹುದು, ಮಹಾರಾಜ. ನಿಜವಾದ ಮಾತು ಹೇಳಿದ್ದೇನೆ."

"ನೀವು ಅವರ ಮನೆಗಳನ್ನು ಸುಟ್ಟುಹಾಕಿದಿರೆನಲಿಲ್ಲವೆ!"

"ಅಹುದು. ಕೆಲವೊಂದು ಸುಟ್ಟೆವು."

"ಇಡೀ ಹಳ್ಳಿಯನ್ನು ಸುಡಲಿಲ್ಲವೆ?"

"ಇಲ್ಲ."

"ಹಾಗಾದರೆ ಈಗ ಮೊದಲು ಹಳ್ಳಿಗೆ ಹಳ್ಳಿಯನ್ನೇ ಸುಟ್ಟುಹಾಕಿರಿ."

"ಅವರಲ್ಲಿ ಕೆಲವರು ಗಾಯಹೊಂದಿದವರಿರುತ್ತಾರೆ. ಕೆಲವರನ್ನು ಬಂಧನದಲ್ಲಿರಸಲಾಗಿದೆ."

"ಎಲ್ಲರನ್ನೂ ಹಾರಿಸಿಬಿಡಿರಿ."

"ಸುಮಾರು ೮೦ ಬಂಧಿತರಿರುವರು."

"ಅವರಿಗೂ ಗುಂಡುಹೊಡೆದು ಕೊಂದುಹಾಕಿರಿ."

" ಅವರಲ್ಲಿ ಇಬ್ಬರು ಹೆಣ್ಣು ಮಕ್ಕಳಿದ್ದಾರೆ. "

" ಅವರನ್ನೂ ಹೊಡೆದು ಹಾಕಿರಿ. "

" ಮೂರು ಚಿಕ್ಕ ಮಗುಗಳಿವೆ. "

" ಅವುಗಳನ್ನು ಹಿಡಿದು ತೆಗೆದುಕೊಂಡು ಬನ್ನಿರಿ. ಅವುಗಳ ಬಗೆ ಮತ್ತೆ ವಿಚಾರ ಮಾಡೋಣ "ವೆಂದು ಸೇನಾಪತಿಯು ಕುದುರೆಯನ್ನು ಹತ್ತಿ ಹೊರಟುಬಿಟ್ಟನು.

* * * * *

ಇದೆಲ್ಲ ಪ್ರಕಾರವು ಇತ್ತ ನಡೆದಿರುವಾಗ ಅತ್ತ ಆ ಭಿಕ್ಷುಕನು ಗುಡ್ಡದಲ್ಲಿ ಕಲ್ಲುಮುಳ್ಳು ತುಳಿಯುತ್ತ ತಿರುಗುತ್ತ ಹೊರಟಿದ್ದಾನೆ. ಸುತ್ತಮುತ್ತಲು ನಡೆದುದರ ಕಡೆಗೆ ಅವನ ಲಕ್ಷ್ಯವೇ ಸೆಳೆದಿರಲಿಲ್ಲ. ಒಂದು ಚಣ ಗಿಡದ ನೆರಳಿನಲ್ಲಿ, ಒಂದು ಚಣ ನೆತ್ತಿಬಿರಿಯುವ ಬಿಸಿಲಿನಲ್ಲಿ, ಪಿರಿ ಪಿರಿ ತಿರುಗುತ್ತ, ಸಿಕ್ಕ ಹಣ್ಣುಹಂಪಲ ತಿನ್ನುತ್ತ, ಸಿಕ್ಕಲ್ಲಿ ನೀರು ಕುಡಿಯುತ್ತ ಅವನ ಮಾರ್ಗಕ್ರಮಣ ಸಾಗಿತ್ತು. ಬಂದೂಕಿನ ಸಪ್ಪಳ ಕೇಳಿಸಿದರೆ ನಿಂತು ಕಿವಿಗೊಟ್ಟು ಕೇಳುವನು. ಸಪ್ಪಳ ನಿಂತಿತೋ ಸೃಷ್ಟಿ ಸೌಂದರ್ಯದಲ್ಲಿ ಮಗ್ನನಾಗುವನು. ಸೈನಿಕರ ಕೂಗಾಟ ಕೇಳಿಸಿದರೆ ತುಸು ಆಲಿಸುವನು. ಕೇಳುವದು ನಿಂತರೆ ಪಕ್ಷಿಗಳ ಮಧುರ ಗಾಯನದಲ್ಲಿ ತಲ್ಲೀನನಾಗುವನು. ಅವನ ಕಾಲುಗಳು ಸೋತಿದ್ದವು. ಮುಂದೆ ನಡೆಯುವದು ಅಸಾಧ್ಯವಾಗಿತ್ತು. ಸಂಜೆಯಾದ್ದರಿಂದ ಗುಡಿಸಲಿಗೆ ಹೋಗಿ ಬಿದ್ದುಕೊಂಡರಾಯಿತೆಂದು ಮೆಲಮೆಲ್ಲನೆ ಹೆಜ್ಜೆ ಹಾಕಹತ್ತಿದನು. ಅಷ್ಟರಲ್ಲಿ ಹೊಗೆಯು ಸುತ್ತೂ ಕಡೆಗೆ ಹಬ್ಬಿದುದು ಕಾಣಬಂತು. ಚೀತ್ಕಾರವೂ ಕೇಳಿಸತೊಡಗಿತು. ಟೇಲ್‌ಮಾರ್ಜನು ಇದನ್ನು ಕಂಡು ಬಲು ಗಾಬರಿಗೊಂಡನು. ಹೊಗೆಯಲ್ಲಿ ಬೆಂಕಿಯ ಕಿಡಿಗಳೂ ಹಾರಾಡುತ್ತಿದ್ದವು. ಹರ್ಬೆನ್‌ಪೇಲದ ಕಡೆಯಿಂದಹೊಗೆಯು ಬರುತ್ತಿರುವದರಿಂದ ಅವನಿಗೆ ಸಂಶಯವುಂಟಾಯಿತು. ಅವನು ದಣಿದಿದ್ದರೂ ಏನೋ ಸಂಭವಿಸಿರಬೇಕು, ಅದನ್ನು ನೋಡಬೇಕು ಎಂದು ಬಿರಬಿರನೆ ಕಾಲುಹಾಕಿ ಆ ಹಳ್ಳಿಯ ಹತ್ತಿರದ ಮರಡಿಗೆ ಬಂದನು. ಆ ಹಳ್ಳಿ

ಯೆಲ್ಲವೂ ಸುಟ್ಟು ಭಸ್ಮವಾಗಿ ಎಷ್ಟೋ ಹೊತ್ತಾಗಿತ್ತು. ಅರಮನೆಯು ಸುಟ್ಟದ್ದನ್ನು ನೋಡುವದಕ್ಕಿಂತಲೂ ಗುಡಿಸಿಲಗಳು ಆಹುತಿಯಾದುದನ್ನು ಕಂಡು ಅವನಿಗೆ ಬಲು ದುಃಖವಾಯಿತು. ಆ ಕರುಣಾಜನಕ ಸ್ಥಿತಿಯು ಅವನ ಮನಸ್ಸನ್ನು ಜರ್ಜರಗೊಳಿಸಿತು. ಬಡವರ ಮೇಲೆ ಬಂದಂಥ ಈ ಆಪತ್ತಿಯನ್ನು ಕಂಡು ಸಿಂಹವು ಕುರಿಯ ಬೇಟೆಯನ್ನಾಡಿದಂತಾಯಿ ತೆಂದು ಮರುಗಿದನು.

ಉಗ್ರಸ್ವರೂಪ ತಾಳಿದ ಅಗ್ನಿಯನ್ನು ಕಂಡು ಮನುಷ್ಯನು ಹೌಹಾರಿ ಹೋಗುತ್ತಾನೆ. ಟೇಲ್‌ಮಾರ್ಚನು ಕಲ್ಲಿನಂತೆ ನಿಂತನು. ವಿಧ್ವಂಸನ ಕಾರ್ಯವು ಶಾಂತತಾಪೂರ್ವಕವಾಗಿ ನಡೆದಿತ್ತು. ಮನುಷ್ಯರ ರಂಬಾಟ ವಿಲ್ಲ; ಆಕ್ರೋಶವೂ ಇಲ್ಲ. ಅಗ್ನಿಯು ಆ ಹಳ್ಳಿಯನ್ನೇ ಭಕ್ಷಿಸುತ್ತಿದ್ದನು. ಛಟ್‌ಛಟ್ ಎಂದು ಕಿಡಿಗಳು ಆರ್ಭಟಿಸುತ್ತಿದ್ದವು. ಈ ಶೋಕಜನಕ ಸ್ಥಿತಿ ಯನ್ನು ಕಂಡು ಆ ಭಿಕ್ಷುಕನು ದಿಕ್ಕು ತೋಚದೆ ಮಂಕು ಹಿಡಿದವರಂತೆ ನಿಂತುಬಿಟ್ಟನು. ಸುತ್ತೂಕಡೆಗೆ ಬೆಂಕಿ ಹುರುಪಳಿಸುತ್ತಿದ್ದುದರಿಂದ ಮನು ಷ್ಯರ ಧ್ವನಿಯಂತೂ ಕೇಳಬರಲಿಲ್ಲ. ಎಲ್ಲರೂ ಆಹುತಿಯಾಗಿರಬಹುದೇ ಅಥವಾ ಓಡಿ ಹೋಗಿ ಜೀವ ಉಳಿಸಿಕೊಂಡಿರಬಹುದೇ ಎಂಬ ವಿಚಾರ ಅವನ ತಲೆಯಲ್ಲಿ ಸುಳಿಯದೆ ಹೋಗಲಿಲ್ಲ. ಇಲ್ಲಿ ವಾಸಿಸಿದ್ದ ಜನರೆಲ್ಲರೂ ಹೋದರೆಲ್ಲಿ? ಇಲ್ಲಿಯ ಹುಡುಗರೆಲ್ಲರ ಗತಿಯೇನಾಯ್ತು? ಎನ್ನುತ್ತ ಮರಡಿಯನ್ನಿಳಿದನು. ಹೆಣಗಳ ರಾಶಿಯೇ ಹುರುಪಳಿಸಿ ಬೆಂದು ಬಿದ್ದಿತ್ತು. ಕಾಲಿಡಲೂ ಸ್ಥಳವಿರಲಿಲ್ಲ. ಅಂಥದರಲ್ಲಿಯೇ ಸ್ಥಳ ಮಾಡಿಕೊಳ್ಳುತ್ತ ಈ ಭಯಾನಕ ದೃಶ್ಯವನ್ನು ದಾಟುತ್ತ ದಾಟುತ್ತ, ಒಂದು ಸುಟ್ಟು ಹೋದ ಮನೆಯ ಗೋಡೆಯ ವರೆಗೆ ಬಂದನು. ಆ ಮನೆಯ ಬಾಗಿಲು ಅರ್ಧ ಮರ್ಧ ಸುಟ್ಟಿತ್ತು. ಒಳಗೆ ಅಂಗಣವಿತ್ತು. ಆ ಅಂಗಣವೆಲ್ಲವೂ ಹೆಣಗಳ ರಾಶಿಯಿಂದ ತುಂಬಿತ್ತು. ಇನ್ನೂ ಅಲ್ಲಲ್ಲಿ ಬೆಂಕಿಯು ಶಾಂತವಾಗಿ ಉರಿ ಯುತ್ತಿತ್ತು. ಮೇಲೆ ಚಂದ್ರನ ಪ್ರಕಾಶ ಬಿದ್ದಿದೆ. ಟೇಲ್‌ಮಾರ್ಚನು ಅಲ್ಲಿ ಬಿದ್ದಿದ್ದ ಹೆಣಗಳಲ್ಲಿ ಯಾರಿಗಾದರೂ ಜೀವವುಳಿದಿದೆಯೋ ಎಂದು ಒಬ್ಬೊ ಬ್ಬರನ್ನೇ ನೋಡುತ್ತ ಸಾಗಿದನು. ಆ ಹೆಣಗಳು ಪ್ರಜಾಪಕ್ಷದವರು.

ಎಲ್ಲರೂ ಸತ್ತಿದ್ದರು. ಅವರ ಶಸ್ತ್ರಾಸ್ತ್ರಗಳೇ ಇರಲಿಲ್ಲ. ಅವುಗಳನ್ನು ಮೊದಲೇ ಕಸಿದುಕೊಳ್ಳಲಾಗಿತ್ತು. ಎಲ್ಲರಿಗೂ ಗುಂಡುಗಳು ಹೊಡೆಯಲ್ಪಟ್ಟಿದ್ದವು. ಇದೇ ಸೈನಿಕರೇ ನಿನ್ನೆ ಈ ಹಳ್ಳಿಯನ್ನು ತಮ್ಮ ವಶಪಡಿಸಿಕೊಂಡಿದ್ದರು.

ಟೇಲಮಾರ್ಚನು ಪ್ರತಿಯೊಂದು ಹೆಣವನ್ನೂ ಸೂಕ್ಷ್ಮವಾಗಿ ಪರೀಕ್ಷಿಸಿದನು. ಎಲ್ಲರಿಗೂ ಗುಂಡು ಬಡಿದಿವೆಯೆಂದು ಕಂಡುಬಂದಿತು. ಇವರೆಲ್ಲರನ್ನೂ ಕೊಂದಂಥವರು ಬೇಗನೆ ಇಲ್ಲಿಂದ ಹೊರಟು ಹೋಗಿದ್ದರಿಂದ ಅಂತ್ಯವಿಧಿಯನ್ನು ಕೂಡ ಮಾಡದೆ ಹೋಗಿರಬಹುವೆಂದು ಕಲ್ಪಿಸಿಕೊಂಡನು. ಈ ಸ್ಮಶಾನಭೂಮಿಯನ್ನು ಬಿಟ್ಟು ಹೊರಡಬೇಕೆಂದು ಆ ಭಿಕ್ಷುಕನು ಅತ್ತಿತ್ತ ನೋಡುತ್ತಿರುವಾಗ ಅವನ ಕಣ್ಣಿಗೆ ನಾಲ್ಕು ಸಣ್ಣ ಸಣ್ಣ ಕಾಲುಗಳು ಕಂಡವು. ಅವೂ ಅಸ್ತವ್ಯಸ್ತವಾಗಿದ್ದವು ಟೇಲ್‌ಮಾರ್ಚನು ಹತ್ತಿರ ಹೋಗಿ ನೋಡಿದಾಗ ಅವು ಹೆಂಗಸರ ಕಾಲುಗಳೆಂದು ಕಂಡಿತು. ಇಬ್ಬರು ಹೆಂಗಸರು ಹತ್ತಿರ ಹತ್ತಿರ ಬಿದ್ದಿದ್ದರು. ಅವರಿಗೂ ಗುಂಡು ಹೊಡೆಯಲಾಗಿತ್ತು. ಒಬ್ಬಳು ಲಷ್ಕರಿ ಪೋಷಾಕಿನಲ್ಲಿದ್ದಳು. ಆಕೆಯ ಹತ್ತಿರ ಹಾಲಿನ ಪಾತ್ರೆಗಳಿದ್ದವು. ಹಾಲಿನ ತೊಟ್ಟೂ ಇರಲಿಲ್ಲ. ಆಕೆಗೆ ತಲೆಯಲ್ಲಿ ನಾಲ್ಕು ಗುಂಡುಗಳು ತಗುಲಿದ್ದವು. ಪ್ರಾಣಪಕ್ಷಿಯು ಯಾವಾಗಲೋ ಹಾರಿಹೋಗಿತ್ತು.

ಟೇಲ್‌ಮಾರ್ಚನು ಇನ್ನೊಬ್ಬಳ ಕಡೆಗೆ ಕಣ್ಣು ಹೊರಳಿಸಿದನು. ಹಳ್ಳಿಯ ಹೆಂಗಸರಂತಿದ್ದಳು. ಅವಳ ಮುಖವು ಕುಂದಿರಲಿಲ್ಲ; ಕಣ್ಣು ಮಾತ್ರ ಮುಚ್ಚಿದ್ದವು. ತಲೆಗೆ ಪೆಟ್ಟು ತಾಕಿತ್ತು. ಎಲ್ಲೆಂಬದು ಕಾಣುತ್ತಿರಲಿಲ್ಲ. ಅವಳ ಬಟ್ಟೆಗಳು ಚಿಂದಿಚಿಂದಿಯಾಗಿದ್ದವು. ಅವಳ ಎದೆಯ ಮೇಲಿನ ಅರಿವೆ ಸರಿದಿತ್ತು. ಅವಳ ಬಟ್ಟೆಯನ್ನು ಸರಿಸಿ ಗುಂಡು ಎಲ್ಲಿ ಬಡಿದಿದೆ ಎಂಬದನ್ನು ಶೋಧಿಸಿದನು. ಅವಳ ಭುಜದ ಎಲುಬು ಮುರಿದಿತ್ತು. ಅವಳ ಉರೋಭಾಗವನ್ನು ಕಂಡು "ತಾಯೀ, ನಿನ್ನ ಹಾಲಿಗಾಗಿ ಹಾತೊರೆಯುತ್ತಿದ್ದ ಮಗುಗಳೆಲ್ಲಿವೆ, ಏನು ಮಾಡುತ್ತಿವೆ?" ಎಂದು ಉದ್ಗಾರ ತೆಗೆ

ದನು. ಅವಳ ಮೈ ಮುಟ್ಟಿ ನೋಡಿದನು. ತಣ್ಣಗಾಗಿರದೆ ತುಸು ಬಿಸಿಯಾಗಿತ್ತು. ಟೀಲ್‌ಮಾರ್ಚನು ಗಾಬರಿಯಿಂದೆದ್ದು " ಇಲ್ಲಾರೂ ಬದುಕಿಲ್ಲವೇ ? " ಎಂದು ಚೀರಿಕೊಂಡನು.

" ಯಾರು ! ಟೀಲ್‌ಮಾರ್ಚನೇ " ಎನ್ನುತ್ತ ಇಬ್ಬರು ಮುಂದುವರಿದು ಬಂದರು. ಅವರಿಬ್ಬರೂ ಆ ಕಗ್ಗೊಲೆಯಿಂದ ತಪ್ಪಿಸಿಕೊಂಡು ಕೆಳಮನೆಯಲ್ಲಿ ಅಡಗಿಕೊಂಡಿದ್ದರು. ಈ ಭಿಕ್ಷುಕನ ಶಬ್ದವನ್ನು ಕೇಳಿದಾಕ್ಷಣವೇ ಅವರ ದೇಹದಲ್ಲಿ ಪ್ರಾಣ ಬಂದಂತಾಗಿ ಅವರು ಹೊರಬಂದರು. ಅವರಿಬ್ಬರೂ ಭೀತಿಯಿಂದ ನಡುಗುತ್ತಿದ್ದರು ಟೀಲ್‌ಮಾರ್ಚನೂ ಹೌಹಾರಿದನು. ಅವನ ಬಾಯಿಂದ ಶಬ್ದಗಳೇ ಹೊರಡಲಿಲ್ಲ. ದುಃಖದಿಂದ ಅವನಿಗೆ ಹುಚ್ಚು ಹಿಡಿದಂತಾಗಿತ್ತು. ಅವನು ಬೊಟ್ಟನಿಂದ ಆ ಸ್ತ್ರೀಯನ್ನು ತೋರಿಸಿದನು.

" ಅವಳಿಗೆ ಜೀವವಿದೆಯೋ ? " ಎಂದು ಒಬ್ಬನೆಂದನು.

ಟೀಲ್‌ಮಾರ್ಚನು ಇದೆ ಎಂಬರ್ಥದಿಂದ ಗೋಣು ಅಲ್ಲಾಡಿಸಿದನು.

" ಇನ್ನೊಬ್ಬಳೂ ಬದುಕಿದ್ದಾಳೆಯೋ ? "

ಟೀಲ್‌ಮಾರ್ಚನು ಇಲ್ಲೆಂದು ಗೋಣು ಹಾಕಿದನು.

" ಎಲ್ಲರೂ ಸತ್ತಿರುವರಲ್ಲವೇ ? ಇವೇ ಕಣ್ಣಿನಿಂದ ನಾನು ಎಲ್ಲವನ್ನೂ ನೋಡಿದೆನು. ನಾನು ಕೆಳಮನೆಯಲ್ಲಿ ಅಡಗಿಕೊಂಡಿದ್ದೆ. ನನಗೆ ಹೆಂಡತಿ, ಮಕ್ಕಳಿಲ್ಲ. ಅದೇ ಒಳಿತಾಗಿದೆ. ಅದಕ್ಕಾಗಿ ನಾನು ದೇವರ ಉಪಕಾರವನ್ನು ಎಷ್ಟೆಂದು ಹೇಳಲಿ ? " ನನ್ನ ಮನೆ ಸುಟ್ಟು ಭಸ್ಮವಾಯಿತು. ದೇವಾ, ಈ ಅನರ್ಥವನ್ನೇಕೆ ಮಾಡಿದೆ ? ಪ್ರತಿಯೊಬ್ಬರನ್ನೂ ಗುಂಡುಹಾಕಿ ಕೊಂದರು. ಪಾಪ ! ಹೆಂಗುಸಿಗೆ ಮೂರು ಮಗುಗಳಿದ್ದವು. ಅವು ' ಅವ್ವಾ, ಅವ್ವಾ ' ಎಂದು ಗಂಟಲು ಹರಿಯುವಂತೆ, ಕೇಳುವವರ ಎದೆ ಬಿರಿಯುವಂತೆ ಅಳುತ್ತಿದ್ದವು. ಅವಳು " ಮಕ್ಕಳಿರಾ, ಮಕ್ಕಳಿರಾ ಎಂದು ಎದೆ ಎದೆ ಬಡಿದುಕೊಳ್ಳುತ್ತ ಗಾಗರಿಯುತ್ತಿದ್ದಳು. ಅವರು ಈ ಹೆಣ್ಣುಮಗಳಿಗೆ ಗುಂಡು ಹಾಕಿ, ಆ ಮಗುಗಳನ್ನು ಎತ್ತಿಕೊಂಡೊಯ್ದರು.

ಇವಳಿಗಿನ್ನೂ ಜೀವವಿದೆಯಲ್ಲವೇ ? ಟೇಲ್‌ಮಾರ್ಜ, ಈಕೆಯನ್ನು ಬದುಕಿಸ ಬಾರದೇ ? ನಿನ್ನ ಗುಡಿಸಲಿಗೆ ಈಕೆಯನ್ನು ತೆಗೆದುಕೊಂಡು ಬರಲು ನಾವು ಸಿದ್ಧರಿದ್ದೇವೆ " ಎಂದೊಬ್ಬನು ದೈನಾಸಬಟ್ಟು ಟೇಲ್‌ಮಾರ್ಜನನ್ನು ಕೇಳಿದನು

'ಆಗಬಹುದು' ಎಂದು ಟೇಲ್‌ಮಾರ್ಜನು ಅತಿ ಕಷ್ಟದಿಂದ ಮಾತಾಡಿದ್ದನ್ನು ಕೇಳಿ ಅವರಿಬ್ಬರೂ ಒಂದು ಡೋಲಿಯನ್ನು ಸಿದ್ಧಪಡಿಸಿ, ಆಕೆಯನ್ನು ಅದರ ಮೇಲೆ ಮಲಗಿಸಿ ಗುಡಿಸಲಿನ ಕಡೆಗೆ ಸಾಗಿದರು. ಟೇಲ್‌ಮಾರ್ಜನು ನಡುನಡುವೆ ಆಕೆಯ ನಾಡೀಪರೀಕ್ಷೆ ಮಾಡುತ್ತಿದ್ದನು. ಅವಳ ಮುಖಕ್ಕೆ ರಕ್ತವು ಸಿಡಿದಿತ್ತು. ಚಂದ್ರಕಿರಣದಿಂದ ಅದೂ ಕಾಣಿಸು ತ್ತಿತ್ತು. ಆ ಮನುಷ್ಯರಿಬ್ಬರೂ ತಮ್ಮ ತಮ್ಮೊಳಗೆ ಮಾತನಾಡತೊಡಗಿದರು

" ಎಲ್ಲರನ್ನೂ ಕೊಂದರಲ್ಲ ! ಎಂಥ ರಾಕ್ಷಸರು ! "

" ಎಲ್ಲವನ್ನೂ ಸುಟ್ಟು ಹಾಕಿದರು. ಏನೂ ಉಳಿಸಲಿಲ್ಲ ! "

" ದೇವರೇ, ನಿನ್ನ ರಾಜ್ಯದಲ್ಲಿ ಹೀಗೂ ನಡೆಯುವದೇ ? "

" ಆ ಮುದುಕ-ಎಲ್ಲರಿಗೂ ಎತ್ತರವಿದ್ದನು ನೋಡು-ಅವನು ಆಜ್ಞೆ ವಿಧಿಸಿದನು "

ಅಹುದು, ಅವನೇ. ಚಾಂಡಾಲನು. "

ಈ ಕಗ್ಗೊಲೆ ನಡೆದಾಗ ಅವನೆಲ್ಲಿಯೂ ಕಾಣಲಿಲ್ಲ. ಅವನಿರಲಿಲ್ಲವೇ?

" ಛೇ, ಅವನೇಕೆ ಇದ್ದಾನು ? ಆಜ್ಞೆವಿಧಿಸಿ ಹೊರಟು ಹೋದನು. "

" ಅಂದರೆ ಅವನೇ ಇಷ್ಟೆಲ್ಲ ಅನರ್ಥಕ್ಕೆ ಕಾರಣವಾದನೇ ? "

" ಎಲ್ಲರನ್ನೂ ಹೊಡೆಯಿರಿ, ಎಲ್ಲವನ್ನೂ ಸುಟ್ಟುಹಾಕಿರಿ, ಯಾರ ಮೇಲೆಯೂ ದಯಾ-ಮಾಯೆಯನ್ನು ತೋರಿಸಬೇಡಿರಿ ಎಂದು ಅವನೇ ಅಂದನು. "

" ಅವನೇ ಅಲ್ಲವೇ ಆ ಮಾರ್ಕ್ವಿಸ್ ? "

" ಮಾರ್ಕ್ವಿಸ್ ಲ್ಯಾಂಟ್‌ನೆಕ್ ಎಂಬದೇ ಅವನ ಹೆಸರು. "

ಟೀಲ್‌ಮಾರ್ಚನು ಈ ಸಂಭಾಷಣವನ್ನು ಕೇಳುತ್ತ ನಡೆದಿದ್ದನು. ಮಾರ್ಕ್ವಿಸ್ ಲ್ಯಾಂಟ್‌ನೆಕ್‌ನೇ ಇದೆಲ್ಲಕ್ಕೂ ಕಾರಣನೆಂದು ತಿಳಿದ ಬಳಿಕ "ದೇವಾ! ದೇವಾ! ನನಗೆ ಹೀಗಾಗುತ್ತದೆಂದು ಮೊದಲಿಗೇ ತಿಳಿದಿದ್ದರೆ...." ಎಂದು ಹಣೆಯನ್ನು ಜಜ್ಜಿಕೊಂಡನು.



## ೭.

ಆ ವೇಳೆಗೆ ಪ್ಯಾರಿಸ ಪಟ್ಟಣದಲ್ಲಿ ಐಷಾರಾಮವು ವಿಪರೀತವಾಗಿ ಬೆಳೆದಿತ್ತು. ಬಾಗಿಲ ಮುಂದೆ ಕುರ್ಚಿ, ಮೇಜು ಹಾಕಿಕೊಂಡು ಉಣ್ಣುತ್ತಿದ್ದರು. ಹೆಂಗಸರು ದೇವಾಲಯದ ಪಾವಟಿಗೆಗಳ ಮೇಲೆ ಕುಳಿತು ಗಾಯಾಳುಗಳಿಗಾಗಿ ಮಲಾಮು ಪಟ್ಟಿಯನ್ನು ತಯಾರಿಸುತ್ತ ದೇಶಭಕ್ತಿಯ ಗೀತಗಳನ್ನು ಹಾಡುತ್ತಿದ್ದರು. ಸೈನಿಕರ ಕವಾಯಿತಿಗಾಗಿ ದೊಡ್ಡ ದೊಡ್ಡ ತೋಟಗಳನ್ನು ಉಪಯೋಗಿಸುತ್ತಿದ್ದರು. ರಾಜಮಾರ್ಗದಲ್ಲಿಯೆ ಕಂಬಾರರು ತೋಫು, ಬಂದೂಕುಗಳನ್ನು ತಯಾರಿಸುತ್ತಿದ್ದರು. ಅವರು ಮಾಡುತ್ತಿರುವ ಕೆಲಸವನ್ನು ನೋಡಿ ಜನರು ಆನಂದಭರಿತರಾಗಿ ಚಪ್ಪಾಳೆಯನ್ನಿಕ್ಕಿ ಅವರನ್ನು ಪ್ರೋತ್ಸಾಹಿಸುತ್ತಿದ್ದರು. ಪ್ರತಿಯೊಬ್ಬರ ಬಾಯಲ್ಲಿಯೂ "ಧೈರ್ಯ ತಾಳಿರಿ, ರಾಜ್ಯಕ್ರಾಂತಿಯಾಗುತ್ತದೆ" ಎಂಬ ಮಾತೇ ಮಾತು. ಇಂಥ ಪ್ರಸಂಗವಿದ್ದರೂ ಜನರು ನಗುತ್ತಲೇ ಇದ್ದರು. ಜನರು ನಾಚು-ರಂಗಗಳಲ್ಲಿಯೂ ತಲ್ಲೀನರಾಗುತ್ತಿದ್ದರು.

ಜರ್ಮನ್ನರು ಫ್ರೆಂಚರ ಬಾಗಿಲದಲ್ಲಿಯೇ ಬಂದಿದ್ದರು. ಅಲ್ಲಿಯ ರಾಜನು ನಾಟಕ ನೋಡುವದಕ್ಕಾಗಿ ಪ್ರತ್ಯೇಕವಾದ ಸ್ಥಳವೊಂದನ್ನು ಕಾಯ್ದಿರಿಸಿದ್ದನು. ಪ್ರತಿಯೊಂದು ಮಾತೂ ಭಯಪ್ರದವಾಗಿದ್ದವು; ಆದರೂ ಜನರು ಅಂಜುತ್ತಿರಲಿಲ್ಲ. ಸಂಶಯ ಬಂದ ಜನರನ್ನು ಆಗಿಂದಾಗಲೇ ಗಲ್ಲಿಗೇರಿಸುತ್ತಿದ್ದರು. ಸೇರಾ ಎಂಬವನೊಬ್ಬ ವಕೀಲನಿದ್ದನು. ಜನರು ಅವ

ನನ್ನು ಬಹಳೇ ತಿರಸ್ಕರಿಸುತ್ತಿದ್ದರು. ಅವನು ಉತ್ತಮೋತ್ತಮ ಉಡುಪನ್ನು ಧರಿಸಿಕೊಂಡು ಹಾಡುತ್ತ ಕಿಡಿಕಿಯಲ್ಲಿ ನಿಂತುಕೊಂಡು ಸಿಪಾಯರು ತನ್ನನ್ನು ಯಾವಾಗ ಹಿಡಿದುಕೊಂಡು ಹೋಗಬಹುದೆಂಬದನ್ನು ನಿರೀಕ್ಷಿಸುತ್ತಿದ್ದನು. ಉದ್ಯೋಗವಿಲ್ಲದವರಾರೂ ಇದ್ದಿಲ್ಲ. ಪ್ರತಿಯೊಬ್ಬರೂ ಒಂದಿಲ್ಲೊಂದು ಉದ್ಯೋಗದಲ್ಲಿ ನಿರತರಾಗಿಯೇ ಇರುತ್ತಿದ್ದರು. ಪ್ರಜಾಪಕ್ಷದ ಚಿನ್ಹವಿರದ ಒಂದೂ ಟೊಪ್ಪಿಗೆಯು ಬೀದಿಯಲ್ಲಿ ಕಾಣಬರುತ್ತಿದ್ದಿಲ್ಲ. ಪ್ರಜಾಪಕ್ಷದ ಕೆಂಪು ಟೊಪ್ಪಿಗೆಯು ತಮಗೆ ಚನ್ನಾಗಿ ಶೋಭಿಸುತ್ತದೆಂದು ಸ್ತ್ರೀಯರನ್ನು ತ್ತಿದ್ದರು. ಪ್ಯಾರಿಸ ಪಟ್ಟಣದಲ್ಲೆಲ್ಲ ಗಡಿಬಿಡಿಯೋ ಗಡಿಬಿಡಿಯೆದ್ದಿದೆ. ಚಮತ್ಕಾರವಾದ ಸಾಮಾನುಗಳನ್ನು ಮಾರುವ ಅಂಗಡಿಗಳಲ್ಲಿ ರಾಜಮುಕುಟ, ರಾಜದಂಡ ಮತ್ತು ರಾಜಚಿನ್ಹಾಂಕಿತ ಸಾಮಾನುಗಳು ಮಾರಲಿಕ್ಕೆ ಬರುತ್ತಿದ್ದವು. ಅರಮನೆಯಲ್ಲಿಯ ಸಂಪತ್ತೆಲ್ಲವೂ ಹೀಗೆ ಮಾರಾಟಕ್ಕೆ ಬರುತ್ತಿರುವದರಿಂದ ರಾಜಸತ್ತೆಯು ನಿರ್ನಾಮವಾಗತೊಡಗಿದೆ ಎಂಬದನ್ನು ಬೇರೆ ಹೇಳುವ ಕಾರಣವೇ ಇಲ್ಲ. ಬಡಜನರು ಬೀದಿಯಲ್ಲಿ ಕಾಲಲ್ಲಿಲ್ಲದೆ ನಡೆಯುವದನ್ನು ಮೊಚ್ಚಿಗಾರರು ನೋಡಿದರೆ ಅಲ್ಲಲ್ಲಿ ಧನ ಸಂಗ್ರಹ ಮಾಡಿ, ಅವರಿಗೆ ಮೊಚ್ಚೆಗಳನ್ನು ಕೊಂಡುಕೊಟ್ಟು ಅವರನ್ನು ಪ್ರಜಾಪಕ್ಷದ ಸೈನ್ಯಖಾತೆಗೆ ಕಳಿಸುತ್ತಿದ್ದರು. ಮುಖ್ಯ ಮುಖ್ಯ ಬೀದಿಗ ಳಲ್ಲಿ ದೇಶೋದ್ಧಾರಕರ ಪುತ್ಥಳಿಗಳು ನಿಲ್ಲಿಸಲ್ಪಟ್ಟವು. ಈ ಪಟ್ಟಣದಲ್ಲಿ ದೊಡ್ಡ ಅಂಗಡಿಗಳು ಬಹಳೇ ಕಡಮೆ ಇದ್ದವು. ಚಿಕ್ಕಪುಟ್ಟ ಅಂಗಡಿಗಳೂ, ಸಂಚಾರಿ ಅಂಗಡಿಗಳೇ ಹೆಚ್ಚು. ದೊಡ್ಡ ದೊಡ್ಡ ಜಮೀನದಾರರು ಚಿಕ್ಕ ಚಿಕ್ಕ ಮನೆಗಳಲ್ಲಿ ವಾಸಿಸತೊಡಗಿದರು. ಕೀಳ್ತರದ ಉದ್ಯೋಗಗಳನ್ನು ಕೈಕೊಂಡಿದ್ದರು. ಸರದಾರರೂ ತಮ್ಮ ಮೊದಲಿನ ಸೌಧಗಳಿಗೆ ಎರವಾಗಿ ಕೆಟ್ಟ ಕೆಟ್ಟ ಸ್ಥಳಗಳಲ್ಲಿರಬೇಕಾಗಿ ಬಂದಿತ್ತು. ಬೀದಿಯಲ್ಲಿ ವರ್ತಮಾನಪತ್ರ ಮಾರುವ ಹುಡುಗರು ದೊಡ್ಡ ಧ್ವನಿಯಿಂದ ಕೂಗುತ್ತ ಓಡುತ್ತಿದ್ದರು. ಗಾಯಕರು ಓಣಿಯೋಣಿ ತಿರುಗುತ್ತಿದ್ದರು. ಅಲ್ಲಿಯ ಜನರು ಒಬ್ಬರಿ ಗೊಬ್ಬರಿಗೆ 'ನಾಗರಿಕ' ಎಂದು ಸಂಬೋಧಿಸುತ್ತಿದ್ದರು. ಬೀದಿಗಳ ಮೊದಲಿನ ಹೆಸರುಗಳ ಬದಲಾಗಿ ಹೆಸರು ಹೊಂದಿದ ಕ್ರಾಂತಿಕಾರಕರ

ಹೊಸ ಹೆಸರುಗಳು ಇಡಲ್ಪಟ್ಟವು. ಹೊಸ ಪಕ್ಷದ ಮುಂದಾಳುಗಳನ್ನು ನೋಡಲು ಜನರು ಹಿಂಡು-ಹಿಂಡಾಗಿ ಬರುತ್ತಿದ್ದರು. ಎಷ್ಟೋ ಜನರಿಗೆ ಗಲ್ಲಿಗೇರಿಸಲ್ಪಡುವ ಅಪರಾಧಿಯನ್ನು ನೋಡಿ ತಮಾಷೆಯುಂಟಾಗುತ್ತಿತ್ತು. ಇಂಥ ಪ್ರಸಂಗದ ದಾರಿಯನ್ನೇ ಕೆಲವರು ಕಾಯುತ್ತಿದ್ದರು. ಇಂಥ ಪ್ರಸಂಗಗಳಿರದಿದ್ದರೆ ನ್ಯಾಯಸ್ಥಾನಗಳಿಗೆ ಹೋಗಿ ಖಟ್ಲೆಗಳನ್ನು ಕೇಳುತ್ತಿದ್ದರು. ಯಾರಿಗಾದರೂ ಗಲ್ಲಿನ ಶಿಕ್ಷೆಯಾದುದನ್ನು ಕಂಡು ಆನಂದಪಡುತ್ತಿದ್ದರು. ಹೊಸ ಕಾಯದೆಯಂತೆ ಜರುಗಿದ ವಿವಾಹಗಳನ್ನು ನೋಡಿ, ಜನರು ವಿವಾಹ ಕಚೇರಿಯ ಮುಂದೆ ನಿಂತು ನವೀನ ದಂಪತಿಗಳ ಗೇಲಿ ಮಾಡುತ್ತಿದ್ದರು. ಬಹು ಕಾಲದಿಂದ ಅಲ್ಲಲ್ಲಿರುವ ಸಾಧುಸಂತ ಹಾಗೂ ರಾಜರ ಪುತ್ಥಳಿಗಳ ತಲೆಯ ಮೇಲೆ ಹೊಸ ಕ್ರಾಂತಿಕಾರಕ ಪಕ್ಷದ ಟೊಪ್ಪಿಗೆಯನ್ನು ಹಾಕುವದರಲ್ಲಿ ಬಹಳ ಅಭಿಮಾನಪಟ್ಟುಕೊಳ್ಳುತ್ತಿದ್ದರು. ಜನರು ಮುಖ್ಯ ಮುಖ್ಯ ಬೀದಿಗಳಲ್ಲಿ ಕುಳಿತು ಇಸ್ಪೇಟು ಆಡುತ್ತಿದ್ದರು. ಇಸ್ಪೇಟಿನಲ್ಲಿಯೂ ಕೂಡ ಪರಿವರ್ತಿತ ಪರಿಸ್ಥಿತಿಯಂತೆ ಅಲ್ಲಿಯೂ ಬದಲಾವಣೆ ಕಂಡುಬರುತ್ತಿತ್ತು. ರಾಜನ ಇಸ್ಪೇಟಿನ ಬದಲು ಜ್ಞಾನಿಯ ಇಸ್ಪೇಟೂ, ರಾಣಿಯ ಬದಲು ಸ್ವಾತಂತ್ರ್ಯಮೂರ್ತಿಯೂ, ಗುಲಾಮನ ಬದಲಾಗಿ ಸಮತೆಯ ಮೂರ್ತಿಯೂ, ಯಕ್ಕಾದ ಸ್ಥಳವನ್ನು ಕಾಯದೆಯ ಪ್ರತಿನಿಧಿಯೂ ಆಕ್ರಮಿಸಿಕೊಂಡಿದ್ದವು. ಹಳೆಯ ಕಾಲದ ಪ್ರೇಕ್ಷಣೀಯ ಸ್ಥಳಗಳನ್ನು ರೆಂಟೆ-ಕುಂಟೆ ಹೊಡೆದು ಹೊಲವನ್ನು ಮಾಡಿ ಪೈರನ್ನು ಬೆಳೆಯಿಸಲು ಉಪಯೋಗಿಸಲಾಗಿತ್ತು. ಆದರೂ ಇದರಿಂದ ಜನರ ಸುಖ-ಸ್ವಾಸ್ಥ್ಯಗಳು ಹೆಚ್ಚಾಗಿದ್ದವೆಂದು ಹೇಳಲು ಬರುವಂತಿರಲಿಲ್ಲ, ಅವರಿಗೆ ಜೀವನದಲ್ಲಿ ಉತ್ಸಾಹವಿರಲಿಲ್ಲ. ಜಗತ್ತಿನಲ್ಲಿಯೇ ಇಂಥ ಬಂಡಾಯವೇ ಏಳಲೆಂದು ಹಾರೈಸುತ್ತಿದ್ದರು. ಮನುಷ್ಯಜಾತಿಯೇ ಹೇಳಹೆಸರಿಲ್ಲದಂತಾಗಲೆಂದು ಹಲವರ ಇಚ್ಛೆಯಾಗಿತ್ತೆಂದು ಹೇಳಿದರೂ ತಪ್ಪು ಭಾವನೆಗೆ ಅವಕಾಶವೇ ಇರಲಿಲ್ಲ.

ವರ್ತಮಾನಪತ್ರಗಳು ನಾಯಿಕೊಡೆಗಳಂತೆ ಉದ್ಭವಿಸಿದವು. ವರ್ತಮಾನಪತ್ರ ಓದದ ನರಪ್ರಾಣಿಯೇ ಇರಲಿಲ್ಲ. ಹೆಂಗಸರು ಬೀದಿಯಲ್ಲಿ

ತಮ್ಮ ಹೆರಳನ್ನು ಹಾಕಿಕೊಳ್ಳುತ್ತಿರುವಾಗ ಗಂಡಸರು ವರ್ತಮಾನಪತ್ರ ಗಳನ್ನು ಓದಿ ತೋರಿಸುತ್ತಿದ್ದರು. ಒಮ್ಮೊಮ್ಮೆ ಗಂಡಸರೇ ಹೆಂಗಸರಿಗೆ ಹೆಳಲು ಹಾಕುತ್ತಿರುವ ದೃಶ್ಯವೂ ಕಾಣಬರುತ್ತಿತ್ತು. ಜನರು ಹೋಗು ವಾಗ ಬರುವಾಗ ವರ್ತಮಾನಪತ್ರಗಳನ್ನು ಟೀಕಿಸುತ್ತಿದ್ದರು. ಯಾರು ಯಾವ ವಸ್ತುವನ್ನು ಮಾರಬೇಕು ಎಂಬ ನಿರ್ಬಂಧವೇ ಇರಲಿಲ್ಲ. ಆಯುಷ್ಯಕರ್ಮಿಯು ತನ್ನ ಅಂಗಡಿಯನ್ನು ಊಟದ ಮನೆ ಮಾಡಿದ್ದನು. ವ್ಯಾಪಾರಿಗಳು ನಡುಬೀದಿಯಲ್ಲಿಯೇ ಶೆರೆ-ಸಿಂದಿಯನ್ನು ಮಾರುತ್ತಿದ್ದರು. ಬೇಕುಬೇಕಾದ ಜಾಹೀರಾತುಗಳನ್ನು ಬೇಕಾದ ಹಾಗೆ ಬರೆದು ಸಿಕ್ಕಸಿಕ್ಕ ಸ್ಥಳದಲ್ಲಿ ಅಂಟಿಸಲಾಗುತ್ತಿತ್ತು. ಒಂದು ಜಾಹೀರಾತಿನಲ್ಲಿ ನನ್ನ ಹತ್ತಿರ ೫೦ ತರದ ಶೆರೆಯಿದೆ. ಮತ್ತೊಂದರಲ್ಲಿ ನಾನು ಬಿಕ್ಷುಕರ ತಲೆ ಬೋಳಿಸುತ್ತೇನೆ; ಸರದಾರರ ಕೂದಲು ಕತ್ತರಿಸುತ್ತೇನೆ; ಮಧ್ಯಮ ವರ್ಗದವರ ಕೂದಲು ಸರಿಪಡಿಸುತ್ತೇನೆ ಇನ್ನೊಂದರಲ್ಲಿ ಸರದಾರರ ಸ್ತ್ರೀಯರ ಅಳತೆಯ ಪಲ್ಲಂಗ ಗಳು ಮಾರಲಿಕ್ಕಿವೆಯೆಂದು ಸಾರಲಾಗಿತ್ತು. ಇದೇ ತರದ ಜಾಹೀರಾತು ಗಳ ಸುಗ್ಗಿಯೇ ಸುಗ್ಗಿ. ಹೇಳಕೇಳುವವರೇ ಇಲ್ಲದಾಗಿದ್ದರು. ಎಲ್ಲರೂ ಮನಬಲ್ಲಂತೆ ನಡೆಯುವವರೇ. ಎಷ್ಟೋ ಜನರಿಗೆ ಭವಿಷ್ಯ ಕೇಳುವ ಹುಚ್ಚು ಹಿಡಿದಿತ್ತು. ಭವಿಷ್ಯವಾದಿಯ ಸುತ್ತು ಮುತ್ತು ನಿಂತುಕೊಂಡು ಇಸ್ಪೇಟಿನ ಮೇಲಿನಿಂದ ಅವನು ಹೇಳುವ ಭವಿಷ್ಯಕ್ಕೆ ಜನರು ಮುಗ್ಧರಾ ಗುತ್ತಿದ್ದರು. ಅಲ್ಲಿ ರೊಟ್ಟಿ, ಇದ್ದಲಿ, ಸಾಬೂನಗಳ ಕೊರತೆಯೆನಿಸಹತ್ತಿತ್ತು. ಹಳ್ಳಿಗಳಿಂದ ಬರಡ ಎಮ್ಮೆ-ಆಕಳುಗಳು ಬರತೊಡಗಿದವು. ಒಂದು ವಾರಕ್ಕೆ ಪ್ರತಿಯೊಬ್ಬರಿಗೆ ಅರ್ಧ ಸೇರು ಮಾಂಸವನ್ನು ಕೊಡಬೇಕೆಂಬ ಆಜ್ಞೆಯು ಹೊರಟಿತ್ತು. ಮಾಂಸ ಕೊಂಡುಕೊಳ್ಳುವವರು ಅಂಗಡಿಗೆ ಮುತ್ತಿಗೆಯನ್ನು ಹಾಕಿಯೇ ನಿಲ್ಲುತ್ತಿದ್ದರು. ಅವರವರ ಸರತಿಯಂತೆ ಮಾಂಸ ಸಿಗಬೇಕಾ ದರೆ ಅವರ ಕುರಿಕೋಣವೇ ಬೀಳುತ್ತಿತ್ತು. ರೊಟ್ಟಿಯನ್ನು ಮಾರುವ ಲ್ಲಿಯೂ ಇದೇ ಹಣೆಬರಹವಿತ್ತು. ಹೊಸ ಸರಕಾರವು ಜನರ ಸಂಕಷ್ಟಗ ಳನ್ನು ನಿವಾರಿಸಲು ಅನೇಕ ಪ್ರಯತ್ನಗಳನ್ನು ಮಾಡುತ್ತಿತ್ತು. ಅದರಲ್ಲಿ ಸ್ವಲ್ಪ ಯಶಸ್ಸು ದೊರೆತಿತ್ತು. ಅವರಲ್ಲಿಯೇ ದುಃಖದಲ್ಲಿ ಸುಖವೆಂದರೆ

ತುಡುಗರ ಹಾವಳಿಯು ಕಡಿಮೆಯಿತ್ತು. ಜನರು ದಾರಿದ್ರ್ಯದಿಂದ ಬಹಳ ತೊಳಲಾಡುತ್ತಿದ್ದರು. ಹಸಿವೆಯಿಂದ ಸಾಯುತ್ತಿದ್ದರು. ಆದರೂ ಬೆಳ್ಳಿ-ಬಂಗಾರದ ಅಂಗಡಿಗಳ ಕಡೆಗೆ ಕಾಕದೃಷ್ಟಿಯನ್ನು ಬೀರಿದ್ದಿಲ್ಲ. ಹೆಣ್ಣು ಮಗಳೊಬ್ಬಳು ಒಂದು ತೋಟದಲ್ಲಿಯ ಗುಲಾಬಿ ಹೂ ಕೊಯ್ದುಕೊಂಡದ್ದನ್ನು ಕಂಡು ಜನರು ಆಕೆಯನ್ನು ತ್ರಾಹಿತ್ರಾಹಿ ಎನಿಸಿಬಿಟ್ಟರು.

ಉರುವಲ-ಕಟ್ಟಿಗೆಯ ಅಭಾವವಂತೂ ಹೇಳತೀರದು. ಆದ್ದರಿಂದ ಪಲ್ಲಂಗ, ತೊಲಿ, ಜಂತಿ, ಬಾಗಿಲ ಮೊದಲಾದವುಗಳನ್ನೇ ಉರಿಹಚ್ಚುತ್ತಿದ್ದರು. ಚಳಿಗಾಲದಲ್ಲಿ ಸಾರ್ವಜನಿಕ ಬೀದಿಗಳಲ್ಲಿ ನೀರು ನಿಂತುಬಿಡುತ್ತಿತ್ತು. ಅದನ್ನು ಕೊಂಡುಕೊಳ್ಳಲು ಹಣವು ಬೇಕಾಗುತ್ತಿತ್ತು. ಬಂಗಾರ ನಾಣ್ಯದ ಧಾರಣಿಯು ಬಹಳೇ ಏರಿತ್ತು. ಗಾಡಿಯಲ್ಲಿ ಕುಳಿತುಕೊಳ್ಳಬೇಕಾದರೆ ಬಹಳೇ ವೆಚ್ಚ ಬರುತ್ತಿತ್ತು. ಎಲ್ಲ ಪದಾರ್ಥಗಳಿಗೂ ಬೆಲೆ ಮಿತಿ ಮೀರಿ ಹೆಚ್ಚಾಗಿತ್ತು. ಭಿಕ್ಷುಕರು ಬೀದಿ ಬೀದಿ ತಿರುಗುತ್ತ ಆರ್ತಸ್ವರದಿಂದ ಹೊಟ್ಟೆಗೆ ಹಾಕಿರೆಂದು ಕಿರಿಚಿಕೊಳ್ಳುತ್ತಿದ್ದರು. ಇಷ್ಟು ತುಟ್ಟಿಯಾಗಲು ಕಾರಣವೆಂದರೆ ಖೊಟ್ಟಿ ನಾಣ್ಯಗಳೂ, ನೋಟುಗಳೂ ಪಸರಿಸಿ ಬಿಟ್ಟಿದ್ದವು. ಜನರಿಗೆ ಯಾವ ತರದ ಭೀತಿಯೋ ಇರಲಿಲ್ಲ. ರಾಜಸತ್ತೆಯು ನಾಶವಾಯಿತೆಂದು ಜನರಿಗೆ ಆನಂದವೆನಿಸಿತ್ತು. ಸ್ವಯಂಸೇವಕರ ತಂಡದ ಬೆಳವಣಿಗೆಗೆ ಮಿತಿಯೋ ಇರಲಿಲ್ಲ. ಅವರು ಸಾಯಲು ಒಂಟಿಗಾಲಿನ ಮೇಲೆ ಸಿದ್ಧರಾಗಿದ್ದರು. ಓಣಿ ಓಣಿಗೆ ಸ್ವಯಂಸೇವಕರ ದಳಗಳನ್ನು ನಿಲ್ಲಿಸಲಾಗಿತ್ತು. ಪ್ರತಿಯೊಂದು ಭಾಗಕ್ಕೆ ಭಿನ್ನವಾದ ಬಾವುಟದ ಏರ್ಪಾಟಾಗಿತ್ತು. ಬಾವುಟಗಳಲ್ಲಿ ಭಿನ್ನ ಭಿನ್ನವಾದ ಶಬ್ದಗಳನ್ನು ಬರೆಯಲಾಗಿತ್ತು ಒಂದರಲ್ಲಿ "ಇನ್ನು ಮೇಲೆ ನಮ್ಮ ಗಡ್ಡಕ್ಕೆ ಯಾರೂ ಕೈ ಹಚ್ಚಲಾರರು," ಇನ್ನೊಂದರಲ್ಲಿ "ನಾವು ಅಂತಃಕರಣದಲ್ಲಿಯ ಶ್ರೇಷ್ಠತೆಯನ್ನು ಬಿಟ್ಟು ಇನ್ನಾವ ಶ್ರೇಷ್ಠತೆಯನ್ನೂ ಮಾನಿಸಲಾರೆವು" ಎಂದು ಬರೆಯಲಾಗಿತ್ತು. ಎಲ್ಲ ಗೋಡೆಗಳ ಮೇಲೆ ಬಣ್ಣಬಣ್ಣದ ಕಾಗದದ ಜಾಹೀರಾತುಗಳು ಅಂಟಿಸಲ್ಪಟ್ಟಿದ್ದವು. "ಪ್ರಜಾಸತ್ತೆಯು ಚಿರಾಯುವಾಗಲಿ! ಅದಕ್ಕೆ ಜಯವಾಗಲಿ" ಎಂದು

ಅವುಗಳಲ್ಲಿ ಬರೆಯುಲಾಗಿತ್ತು. ಚಿಕ್ಕ ಪುಟ್ಟ ಮಗುಗಳೂ ಸಹ "ಜಯ ಜಯ" ಎಂದು ಕೂಗಾಡುತ್ತಿದ್ದವು.

ಪ್ಯಾರಿಸದ ಈ ದುಃಖಕಾರಕ ಸ್ಥಿತಿಯು ಬಹು ದಿವಸ ಬದುಕಲಿಲ್ಲ. ಜನರು ಅನೇಕ ಕಷ್ಟದ ದಿವಸಗಳನ್ನು ತೆಗೆದದ್ದರಿಂದ ಇನ್ನು ತಮಗೆ ಸುಖದ ದಿನಗಳು ಬೇಗನೆ ಬರಬಹುದೆಂದು ಆಶೆಯುಳ್ಳವರಾಗಿದ್ದರು. ಪ್ಯಾರಿಸ್ ಬಿಟ್ಟು ಬೇರೆಡೆಗಳಲ್ಲಿ ಜನರು ಹುಚ್ಚರಾಗಿದ್ದರು. ರಾಜಸತ್ತೆಯು ಮುಳುಗಿದ ಮೇಲೆ ಜನರಿಗ ಹಿಡಿಯುವ ಹುಚ್ಚು ಈ ಸಲವೂ ಅಂಟಿಕೊಂಡಿತ್ತು. ಜನರ ಸುಖಲೋಲುಪತೆ ಬೆಳೆಯುತ್ತಲಿತ್ತು. ಅವರ ವಿಲಾಸ ಭೋಗಗಳಿಗೆ ಅಂತ್ಯವೇ ಇಲ್ಲದಾಯಿತು. ಐಷಾರಾಮುಕ್ಕಾಗಿ ಜನರಲ್ಲಿ ಪೈಪೋಟಿಯೇ ನಡೆಯಿತು. ದೊಡ್ಡ ದೊಡ್ಡ ಅರಮನೆಗಳಲ್ಲಿ ಮನೋಹಾರಿಣಿಯರ ಮಧುರ ಗಾಯನಾಲಾಪದಲ್ಲಿ, ತಿಂಡಿ-ತೀರ್ಥಗಳ ಸೇವೆಯಲ್ಲಿ ಜನರ ಕಾಲವು ಹೋಗುತ್ತಿತ್ತು. ಈ ವಿಲಾಸವು ಅಶ್ಲೀಲಮಯವಾಗಿತ್ತೆನಬಹುದು. ಯಾವ ಸ್ಥಳದಲ್ಲಿ ಏನು ಮಾಡಬೇಕೆಂಬದರ ಅರಿವೇ ಜನರಲ್ಲಿ ಉಳಿದಿರಲಿಲ್ಲ. ಪವಿತ್ರ ದೇವಾಲಯಗಳೂ ತುತ್ತಾದವು. ಸ್ತ್ರೀಯರ ನಗ್ನ ಚಿತ್ರಗಳನ್ನು ಚಿತ್ರಿಸುವದರಲ್ಲಿಯೂ ನೋಡುವದರಲ್ಲಿಯೂ ಅವರು ಮಗ್ನರಾಗುತ್ತಿದ್ದರು ಲಜ್ಜೆ, ವಿನಯ, ನಮ್ರತೆಗಳು ಲಯವಾಗಿ ಲಜ್ಜಾವಿಹೀನ ರಾಜ್ಯ ನಡೆದಿತ್ತು. ಪ್ರಾಮಾಣಿಕತೆಗೆ ಸ್ಥಾನವೇ ಇರಲಿಲ್ಲ. ಕೆಳಗಿನವರನ್ನೊಳಗೊಂಡು ಮೇಲಿನವರ ವರೆಗೂ ಅಪ್ರಾಮಾಣಿಕತೆಯು ಬೆಳೆದು ಬಂದಿತ್ತು. ಘುಂಡ-ಗುಂಡರ ಹಾವಳಿ ಹಗಲು ಹಾಡೇ ನಡೆಯುತ್ತಿತ್ತು. ಹೆಂಗಸರ ನೀತಿಮತ್ತೆಯು ಹಾಳಾಗಿ ಹೋಗಿ, ಅವರೂ ಹೇಯವಾದ ಕೆಲಸಗಳನ್ನು ಮಾಡಲು ಹೇಸದವರಾಗಿದ್ದರು.

ಮೇಲೆ ವರ್ಣಿಸಿದ ಪ್ಯಾರಿಸದ ಪರಿಸ್ಥಿತಿಯು ೧೭೯೩ ರ ಮುಂದಿನದು. ಇವಕ್ಕೂ ಮೊದಲು ಚಿತ್ರಿಸಿದ ವರ್ಣನೆಯು ೧೭೯೩ರ ಮಧ್ಯದಲ್ಲಿತ್ತು. ಈ ಕಾಲದಲ್ಲಿ ರಾಜ್ಯಕ್ರಾಂತಿಕಾರಕ ಶೂರ ಪುರುಷರನೇಕರಿದ್ದರು. ಇವರಲ್ಲಿ ಕೆಲವರು ಒಳ್ಳೆ ನಡತೆಯುಳ್ಳವರೂ ಕೆಲವರು ದುಷ್ಟರೂ ಆಗಿದ್ದರು.

ಅಂಥವರಲ್ಲಿ ಸಿಮೋರೆಡಿನ್ ಎಂಬವನೊಬ್ಬನಾಗಿದ್ದನು. ಅವನು ಪ್ರಾಮಾ ಣಿಕನಾಗಿದ್ದರೂ ಉಗ್ರ ಸ್ವಾಭಾವದವನಾಗಿದ್ದನು.

ಸಿಮೋರೆಡಿನ್‌ನು ವಿವೇಕಶಾಲಿಯಾದ ಮನುಷ್ಯನು. ಅವನ ಪ್ರಾಮಾಣಿಕತೆಯ ಬಗ್ಗೆ ಎಳ್ಳಷ್ಟೂ ಸಂಶಯ ಬರುವ ಹಾಗಿಲ್ಲ ಅವನಲ್ಲಿ ನಿಗ್ರಹವೃತ್ತಿಯೂ ನೆಲೆಸಿತ್ತು; ಧರ್ಮದಲ್ಲಿ ವಿಶ್ವಾಸವನ್ನಿಟ್ಟಿದ್ದನು. ಅದ ರಿಂದ ಒಮ್ಮೊಮ್ಮೆ ಉದಾಸೀನನೂ ಆಗುತ್ತಿದ್ದನು. ಸಿಮೋರೆಡಿನ್‌ನಲ್ಲಿ ಅನೇಕ ಸದ್ಗುಣಗಳಿದ್ದವು. ಅವನ ಪೂರ್ವವೃತ್ತವು ಬಹಳ ಸಂಕ್ಷೇಪವಿದೆ. ಅವನು ಹಳ್ಳಿಯೊಂದರಲ್ಲಿ ಭಿಕ್ಷುಕರ ಪಾದ್ರಿಯಾಗಿದ್ದನು. ಮುಂದೆ ಶ್ರೀಮಂತರೊಬ್ಬರ ಮನೆಯಲ್ಲಿ ಶಿಕ್ಷಕನ ಕೆಲಸವನ್ನು ಕೈಕೊಂಡನು. ಅಲ್ಲಿಯೆ ಸ್ವಲ್ಪ ಹಣ ಸಂಗ್ರಹಿಸಿಕೊಂಡು ಪುನಃ ಸ್ವತಂತ್ರನಾದನು. ಹಿಡಿದ ಕೆಲಸವನ್ನು ಪೂರ್ಣ ಮಾಡುವ ಗುಣವೊಂದು ಅವನಲ್ಲಿ ಒಡೆದು ಕಾಣುತ್ತಿತ್ತು. ಅವನು ತನ್ನ ಬುದ್ಧಿಯ ಉಪಯೋಗವನ್ನು ಪರಿಸ್ಥಿತಿಯ ಯಥಾಯೋಗ್ಯ ಅವಲೋಕನೆಯ ಮೇರೆಗೆ ಮಾಡಿಕೊಳ್ಳುತ್ತಿದ್ದನು. ಯಾವುದೇ ಸಂಗತಿಯ ಬಗ್ಗೆ ಪೂರ್ಣ ವಿಚಾರ ಮಾಡದೆ ಅದರ ಕೈಯನ್ನು ಬಿಡುತ್ತಿದ್ದಿಲ್ಲ.

ಅವನಿಗೆ ಯುರೋಪದ ಪ್ರಮುಖ ಭಾಷೆಗಳು ಬರುತ್ತಿದ್ದವು. ಅಲ್ಲದೆ ಅವನು ಕೆಲವು ಪ್ರಾಚ್ಯ ಭಾಷೆಗಳನ್ನೂ ಅಭ್ಯಸಿಸಿದ್ದನು. ಅವನ ಅಭ್ಯಾ ಸವು ಆಳವಾಗಿತ್ತು. ತನ್ನ ಹೆಚ್ಚು ಕಾಲವನ್ನು ಅಭ್ಯಾಸದಲ್ಲಿ ಕಳೆಯುತ್ತಿ ದ್ದನು. ಅದರಿಂದ ಅವನಿಗೆ ತನ್ನ ಬ್ರಹ್ಮಚರ್ಯವನ್ನು ಪಾಲಿಸಲು ಶಕ್ಯ ವಾಗಿತ್ತು.

ಪರಿಸ್ಥಿತಿಯ ಮೂಲಕವೋ ಅಥವಾ ಕಾಲಮೂಲಾ ಕೂಡಿಕೊಂಡೋ ಏನೋ ಅವನು ಭಿಕ್ಷುಕನೇ ಆದನು. ಅವನಿಗೆ ಜ್ಞಾನದಿಂದ ತೃಪ್ತಿಯಿರ ಲಿಲ್ಲ. ಧರ್ಮಾಂಧಕರಣದಿಂದ ಅವನು ಬೇಸತ್ತಿದ್ದನು. ಅವನು ಆತ್ಮ ಚಿಂತನೆ ಮಾಡಿದ್ದನಾದರೂ ಅವನಿಗೆ ಸನ್ಮಾರ್ಗ ದೊರೆತಿರಲಿಲ್ಲ ತಾನಾ ಗಿಯೇ ಬಂದಂಥ ಭಿಕ್ಷುಕವೃತ್ತಿಯನ್ನು ಬಿಸುಡಲು ಶಕ್ಯವಿಲ್ಲದ್ದರಿಂದ ಅವನು ಘೋರವಾದ ತಪಶ್ಚರ್ಯೆಯಿಂದ ತನ್ನ ಪಾಪಕ್ಷಾಲನವನ್ನು ಮಾಡಿ

ಕೊಂಡು ಹೊಸ ಮಾನವನಾಗಿ ಬದುಕಬೇಕೆಂದು ನಿರ್ಧರಿಸಿದನು. ವ್ಯಾವಹಾರಿಕ ದೃಷ್ಟಿಯಿಂದ ಬ್ರಹ್ಮಚರ್ಯವ್ರತವನ್ನು ಸ್ವೀಕರಿಸಿದವನಿಗೆ ವಿವಾಹಬದ್ಧನಾಗುವದು ಶಕ್ಯವಿಲ್ಲದ್ದರಿಂದ ಅವನು ಜನತಾಸೇವಾರೂಪೀ ಸ್ತ್ರೀಯೊಡನೆ ವಿವಾಹಬದ್ಧನಾಗುವ ಮನೋನಿಗ್ರಹವನ್ನು ಮಾಡಿಕೊಂಡನು. ಕೌಟುಂಬಿಕ ಪರಿವಾರದ ಬದಲಾಗಿ ಇಡಿ ಜನತೆಯೇ ಅವನ ಬಳಗವಾಯಿತು. ಇಂಥಿವೆಲ್ಲ ಉದಾತ್ತ ವಿಚಾರಗಳು ಅವನ ಹೃದಯದಲ್ಲಿ ಬೇರೂರಿದ್ದವು. ತಾಯಿ-ತಂದೆಗಳು ತಮ್ಮ ಮಗನು ಹೆಸರುವಾಸಿಯಾಗಿ ದಿಗಂತಕೀರ್ತಿಯುತನಾಗಬೇಕೆಂದು ಬಯಸಿದ್ದರು; ಆದರೆ ಅವನಿಗೆ ಧಾರ್ಮಿಕಕ್ಷೇತ್ರದಲ್ಲಿ ಆಯುಷ್ಯ ಕಳೆಯುವದು ಮನಸಿಗೆ ಬರಲಿಲ್ಲ. ತಮ್ಮ ಮಗನು ಸಂಸಾರಿಯಾಗಿ ಸುಖವನ್ನು ಭೋಗಿಸಬೇಕೆಂದು ಅವರು ಇಚ್ಛಿಸಡುತ್ತಿದ್ದರು.

ಪ್ರೇಮವೃಕ್ಷವು ಹೀಗೆ ಒಣಗಿದ್ದರಿಂದ ಅವನ ಹೃದಯದಲ್ಲಿ ದ್ವೇಷವಂಕುರಿಸಿತು. ಅವನು ಅಸತ್ಯ, ರಾಜಸತ್ತೆ, ಮತ್ತು ಸ್ವಂತ ಕೆಲಸಗಳನ್ನು ದ್ವೇಷೈಕ ದೃಷ್ಟಿಯಿಂದ ನೋಡತೊಡಗಿದನು. ದೇಶದಲ್ಲಿದ್ದ ಪರಿಸ್ಥಿತಿಯು ಬಲು ತಿರಸ್ಕರಣೀಯವೆನಿಸಿತು. ಭವಿಷ್ಯತ್ಕಾಲದ ಉಜ್ವಲ ಪ್ರಗತಿಯು ಹೇಗಾದೀತೆಂದು ವಿಚಾರ ಮಾಡತೊಡಗಿದನು. ದುಃಖಸಾಗರದಲ್ಲಿ ಈಸಾಡುವವರನ್ನು ಕಂಡು ಅವನ ಅಂತಃಕರಣವು ಮಲಮಲನೆ ಮರುಗಿತು. ಅವನು ಧರ್ಮದ ತತ್ವನಿಷ್ಠನೂ, ತತ್ವನಿಷ್ಠೆಯ ನಾಸ್ತಿಕನೂ ಆದನು. ಮಾನವರ ದಾರಿದ್ರ್ಯವನ್ನೂ, ದುಃಖಗಳನ್ನೂ ಸಮೂಲ ನಾಶಗೊಳಿಸಲು ರಕ್ತಪಾತವನ್ನು ಮಾಡುವ ಮತ್ತು ರಾಜ್ಯಕ್ರಾಂತಿಯನ್ನು ಮಾಡುವ ವೀರ ಪುರುಷನೊಬ್ಬನು ಹುಟ್ಟಿ ಬರಲೇಬೇಕೆಂದು ಅವನಿಗೆನಿಸುತ್ತಿತ್ತು. ಅಂಥ ಸುಸಮಯದ ದಾರಿಯನ್ನೇ ಅವನು ಕಾಯುತ್ತಿದ್ದನು.

೧೭೮೯ನೇ ಇಸ್ವಿಯು ಆರಂಭವಾಯಿತು. ಅಂಥ ಪ್ರಸಂಗವೂ ತಲೆದೋರಿತು. ಸಿಮೋರೆಡಿನ್‌ನು ನಿಂತ ಕಾಲಮೇಲೆಯೇ ಸನ್ನದ್ಧನಾದನು. ಅವನು ಮಾನವಜಾತಿಯ ಪುನರ್ಘಟನೆಯಲ್ಲಿ ತನ್ನ ಶಕ್ತಿ ಸರ್ವಸ್ವವನ್ನೆಲ್ಲಾ ಹಾಕಿ ಪೂರ್ಣ ವಿಚಾರ ಮಾಡಿಯೇ ಅದರಲ್ಲಿ ಧುಮುಕಿದನು. ಮನೋ

ರಾಜ್ಯದಲ್ಲಿಯೇ ಸುರಾಜ್ಯವನ್ನು ಕಟ್ಟಬಯಸುವವನು ಭವಿಷ್ಯತ್ಕಾಲಕ್ಕೆ ತೀರ ಹೊಸಬನಾಗಿದ್ದನು. ತಾರ್ಕಿಕ ಸಾಮ್ರಾಜ್ಯದಲ್ಲಿ ಭಾವನೆಗಳ ಸಮಾವೇಶವಾಗುತ್ತಿರುವದಿಲ್ಲ. ಅವನು ಎಲ್ಲ ರಾಜ್ಯಕ್ರಾಂತಿಯ ಬಂಡುಗಳನ್ನು ಕಣ್ಣಾರೆ ಕಂಡಿದ್ದನು. ಬಂಡುಗಳು ಎದ್ದಿರುವಾಗ ಇವನು ಎಂದೂ ಎದೆಗುಂದಿರಲಿಲ್ಲ; ಗೊಂದಲಗೆಟ್ಟಿರಲಿಲ್ಲ. ರಣಾಂಗಣವು ಅವನಿಗೆ ಮನೋರಂಜಕ ಕ್ರೀಡಾಂಗಣವಾಗಿತ್ತು. ಅವನಿಗೆ ೫೦ ವರುಷ ತುಂಬಿದ್ದವು ಆದರೂ ಅವನಿಗೆ ವಯಸ್ಸು ಹೆಚ್ಚಾದಂತೆ ಕಾಣುತ್ತಿತ್ತು. ನೂತನ ರಾಜ್ಯವ್ಯವಸ್ಥೆಯ ನಿರ್ಮಾಣದ ಮೂಲಕ ಅವನ ಮುಪ್ಪು ಎಲ್ಲಿಯೋ ಅಡಗಿ ತರತರಿತ ತಾರುಣ್ಯಾವಸ್ಥೆಯು ಬಂದಿತ್ತು. ಅವನ ಕಣ್ಣಿಗೆ ಜಗತ್ತೇ ನವೀನ ಸೃಷ್ಟಿಯಂತೆ ಭಾಸವಾಯಿತು. ರಾಜ್ಯಕ್ರಾಂತಿಯ ಪ್ರತಿಯೊಂದು ಹೆಜ್ಜೆಯನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತಿದ್ದನು. ಮೊದಮೊದಲು ಅವನಿಗೆ ಈ ಬಂಡು ಯಶಸ್ವಿಯಾಗಲಾರದೆಂದೆನಿಸಿದ್ದರಿಂದ ಅವನು ಬಹಳೇ ಸಾವಧಾನದಿಂದ ನಡೆಯುತ್ತಿದ್ದನು. ಬಂಡುಗಾರರು ಸತ್ಯ ಮತ್ತು ನ್ಯಾಯಕ್ಕಾಗಿ ಹೋರಾಡುತ್ತಿದ್ದರು. ಆದ್ದರಿಂದ ಈ ಬಂಡು ಜಯಪ್ರದವಾಗಲೆಂದು ಮನವಾರೆ ಚಿಂತಿಸುತ್ತಿದ್ದನು. ಬೇರೆಯವರಾರಿಗೂ ಅಷ್ಟೊಂದು ವಿಶ್ವಾಸವೆನಿಸದಿದ್ದರೂ ಸಿಮೋರಡಿನ್‌ನಿಗೆ ದೃಢವಾದ ವಿಶ್ವಾಸವುಂಟಾಗಿತ್ತು.

ಸಿಮೋರೆಡಿನ್‌ನು ಹೀಗೆ ಆಶಾಬದ್ಧನಾಗಿ ಮನೋರಾಜ್ಯ ಕಟ್ಟುತ್ತಿರುವಾಗ ೧೭೭೩ ಬಂದಿತು. ಈ ವರುಷವೆಂದರೆ ಯುರೋಪು ಫ್ರಾನ್ಸದೊಡನೆಯೂ, ಫ್ರಾನ್ಸವು ಪ್ಯಾರಿಸದೊಡನೆಯೂ ಯುದ್ಧ ಸಾರಿದ ಯುಗವು. ಈ ಯುದ್ಧದಲ್ಲಿ ಫ್ರಾನ್ಸವು ಯುರೋಪದ ಮೇಲೆಯೂ ಪ್ಯಾರಿಸ್ ಪಟ್ಟಣವು ಫ್ರಾನ್ಸದ ಮೇಲೆಯೂ ಜಯವನ್ನು ಸಂಪಾದಿಸಿದವು. ಆದ್ದರಿಂದ ೧೮ನೇ ಶತಮಾನದ ೧೭೭೩ನೇ ಇಸ್ವಿಯು ಬಹಳ ಮಹತ್ವದ್ದು, ಗೊಂದಲಗೆಟ್ಟದ್ದೂ ಆಗಿದ್ದು, ಫ್ರಾನ್ಸದ ಇತಿಹಾಸದಲ್ಲಿ ಅಜರಾಮರವಾಗಿದೆ.

೧೭೭೩ರಲ್ಲಿಯ ಗೊಂದಲವು ಚರಮ ಸೀಮೆಯನ್ನು ಮುಟ್ಟಿತ್ತು. ಬಿರುಗಾಳಿಯ ವೇಗವು ಅತ್ಯದ್ಭುತವಾಗಿತ್ತು. ಅವರ ವೈಭವವೂ ಅದ್ವಿ

ತೀಯ ಸ್ವರೂಪವನ್ನು ತಳೆದಿತ್ತು. ಆದರೂ ಸಿವೋರೆಡಿನ್‌ನು ಗಂಭೀರನೂ, ಶಾಂತನೂ ಆಗಿದ್ದನು. ಸೃಷ್ಟಿಯೊಳಗೆ ಆಕಾಶದಲ್ಲಿ ಹಾರಾಡುವ ಕೆಲಜನರಿರುತ್ತಾರೆ. ಅವರ ವೃತ್ತಿಯು ಪ್ರಶಾಂತವಾಗಿರುತ್ತದೆ. ಆದರೂ ಆ ವೃತ್ತಿಯಲ್ಲಿ ವಿಲಕ್ಷಣವಾದ ಕ್ರೌರ್ಯವಿದ್ದು ಅದು ಬಂದಂಥ ಎಡರುಗಳನ್ನು ಎದುರಿಸದಿರಲಾರದು ಸಿವೋರೆಡಿನ್‌ನ ಹೃದಯವು ಬಹು ಕೋಮಲವಾಗಿತ್ತು. ಅವನ ಅಂತಃಕರಣವು ಮಾತ್ರ ಅನಾಥರನ್ನು ಕಂಡರೆ ಕರಗುತ್ತಿತ್ತು. ಅವರಿಗೆ ಬಂದಂಥ ಸಂಕಟ ನಿವಾರಿಸಲು ಅವನು ಯಾವಾಗಲೂ ಟೊಂಕಕಟ್ಟಿ ನಿಲ್ಲುತ್ತಿದ್ದನು. ಅವನ ಅಂತರಂಗವು ಪರಿಶುದ್ಧವಾಗಿತ್ತು. ಸತ್ಕೃತ್ಯಗಳು ನೋಡಲು ಮಂಗಲವೆನಿಸಿದರೂ ಅವುಗಳನ್ನು ಸಾಧಿಸುವದು ಬಹಳೇ ದುರ್ಘಟವಾದುದು. ಆದರೂ ಸಿವೋರೆಡಿನ್‌ನು ಇಂಥ ಕೃತ್ಯಗಳನ್ನು ಮಾಡಲು ಎಂದೂ ಹಿಂಜರಿಯುತ್ತಿರಲಿಲ್ಲ. ಒಮ್ಮೆ ಒಂದು ಊಟದ ಮನೆಯಲ್ಲೊಬ್ಬನು ಮೃತ್ಯುಮುಖಿಯಾಗಿದ್ದನು. ಅವನ ಗಂಟಲದಲ್ಲಿ ಒಂದು ಬೊಕ್ಕೆಯಾಗಿತ್ತು. ಅದು ಒಂದೇಸವನೆ ಹೊಡೆಯುತಿತ್ತು. ಆ ಬೊಕ್ಕೆಯನ್ನು ಒಡಯದೆ ಗತ್ಯಂತರವಿರಲಿಲ್ಲ. ಸಿವೋರೆಡಿನ್‌ನು ಸಮೀಪದಲ್ಲಿದ್ದನು. ಯಾವ ವಿಚಾರಕ್ಕೂ ಆಸ್ಪದಕೊಡದೆ ಅವನು ತನ್ನ ಬಾಯಿಂದ ಅದನ್ನು ಹೀರಿ ಉಗುಳಿಬಿಟ್ಟನು. ಅದರಿಂದ ಅವನ ಬಾಧೆಯು ಕಡಮೆಯಾಗಿ ಅವನು ಜೀವದಿಂದ ಪಾರಾದನು. ಇದನ್ನು ಕಂಡು ಸಮೀಪದಲ್ಲಿರುವ ಮನುಷ್ಯನೊಬ್ಬನು "ಮಹಾರಾಜ, ತಾವು ಹೀಗೆ ರಾಜನಿಗೆ ಮಾಡಿದ್ದರೆ ಅವನು ನಿಮ್ಮನ್ನು ಧರ್ಮಾಧ್ಯಕ್ಷನ ಪದವಿಗೇರಿಸುತ್ತಿದ್ದನು" ಎಂಬದನ್ನು ಕೇಳಿ, ಸಿವೋರೆಡಿನ್‌ನು "ಛೀ, ರಾಜನಿಗೆ ಇಂಥ ಆಪತ್ತಿ ಬಂದಿದ್ದರೆ ನಾನೆಂದಿಗೂ ಹೀಗೆ ಮಾಡುತ್ತಿದ್ದಿಲ್ಲ" ಎಂದು ಕೂಡಲೆ ಅವನಿಗೆ ಉತ್ತರಿಸಿದನು.

ಸಿವೋರೆಡಿನ್‌ನು ಮಾಡಿದ ಈ ಕೆಲಸವು ಸುತ್ತೂಕಡೆಗೆ ಹಬ್ಬಲು ವೇಳೆಹಿಡಿಯಲಿಲ್ಲ. ಫ್ರಾನ್ಸದಲ್ಲಿಯ ಬಡಬಗ್ಗರು ಈ ಸಂಗತಿಯನ್ನು ಕೇಳಿ ಬಹು ಆನಂದಪಟ್ಟರು. ಇದರಿಂದ ಸಿವೋರೆಡಿನ್‌ನ ವರ್ಚಸ್ಸು ಬಡಬಗ್ಗರು

ಮೇಲೆ ಚನ್ನಾಗಿ ಕುಳಿತಿತು. ಬಡಬಗ್ಗರು ಇವನ ಸಲಹೆಗಳನ್ನು ಕೇಳುತ್ತಿದ್ದರು. ಅದರಂತೆ ನಡೆಯಲೂ ಸಿದ್ಧರಾದರು.

ಆಗಸ್ಟ ೨೦ನೇ ತಾರೀಖು. ಅಂದು ಫ್ರಾನ್ಸದೊಳಗಿನ ಎಲ್ಲ ಪುತ್ಥಳಿಗಳನ್ನು ಉಧ್ವಸ್ತ ಮಾಡಬೇಕೆಂದು ಸಿಮೋರೆಡಿನ್‌ನು ಅವರ ಮನಸನ್ನು ಪರಿವರ್ತನಗೊಳಿಸಿದ್ದನು. ಯಾಕೆ ಈ ಪುತ್ಥಳಿಗಳಿರಬೇಕು? ಈಪುತ್ಥಳಿಗಳು ಯಾವ ಸತ್ಕಾರ್ಯಗಳನ್ನು ಮಾಡಿ ತಮ್ಮ ಹೆಸರನ್ನು ಅಜರಾಮರವಾಗಿ ಮಾಡಿಕೊಂಡಿದ್ದವು? ಛೆ, ಅಂಥವುಗಳಿಗೆ ಸ್ಥಾನದೊರಕುವದೇ? ಅವು ರಾಜ ಮಹಾರಾಜರ, ಅವರನ್ನು ಪೂಜಿಸುವವರ, ಅವರ ಬೇಳೆಯನ್ನು ಬೇಯಿಸಲು ಕಾರಣರಾದವರ ಪುತ್ಥಳಿಗಳೇ ಆಗಿದ್ದವು. ಜಗತ್ತಿನಲ್ಲಿಯ ನ್ಯಾಯವೆಂಥದು? ಅಧಿಕಾರ ದರ್ಪದಿಂದ ಬಡಬಗ್ಗರ ನೆತ್ತರವನ್ನು ಹೀರಿ, ಅಘೋರ ಕೃತ್ಯಗಳನ್ನು ಮಾಡಿ ತಮ್ಮ ಜಯಜಯಕಾರವನ್ನು ಘೋಷಿಸುವಂಥವರ ಪುತ್ಥಳಿಗಳೇ ಮೆರೆಯುತ್ತಿದ್ದವು. ಮಾತೃಭೂಮಿಯ ಏಕನಿಷ್ಠ ಸೇವಕರಿಗೆ ಬಂಡುಗಾರ, ಕೊಲೆಗಡಕ, ರಾಜದ್ರೋಹಿ ಎಂದು ಸಂಬೋಧಿಸಿ, ಅವರನ್ನು ರಸಾತಳಕ್ಕೆ ಮೆಟ್ಟಿ, ತಮ್ಮ ಉಧೋ ಉಧೋ ಮಾಡುವಂಥವರ ಪುತ್ಥಳಿಗಳು ಅವು ಆಗಿದ್ದವು.

ಸಿಮೋರೆಡಿನ್‌ನು. ಚಾಣಾಕ್ಷನಾಗಿದ್ದನು. ಇಂಥ ನೀಚರಿಗೆ ಮಾನಮರ್ಯಾದೆ ಮಾಡುವದು ಅವನಿಗೆ ಬೇಡಾಗಿತ್ತು. ಆದ್ದರಿಂದ ಈ ಪುತ್ಥಳಿಗಳನ್ನೆಲ್ಲ ಒಡೆದು, ಪುಡಿಪುಡಿ ಮಾಡಿ ಚೆಲ್ಲಲು ಆ ಜನರಿಗೆ ಅಪ್ಪಣೆಯನ್ನೀಯುತ್ತಿದ್ದನು. ಸಿಮೋರೆಡಿನ್‌ನಂಥ ಸತ್ಪುರುಷನ ಆಜ್ಞೆಯೆಂದಮೇಲೆ ನಿರಾಕರಿಸುವ ಎದೆಗಾರಿಕೆ ಯಾರಿಗಿರಬೇಕು! ರಾಜ ಮಹಾರಾಜರ ಪುತ್ಥಳಿಗಳು ಪುಡಿಪುಡಿಯಾಗಿ ಹುಡಿಗೂಡಿ ಹೋದವು. ಕಾಲನ ಪ್ರಭಾವವೆಂದರೆ ಹೀಗಿರುತ್ತದೆ! ಪುತ್ಥಳಿಗಳನ್ನು ನಿಲ್ಲಿಸತಕ್ಕವರು ಫ್ರಾನ್ಸದ ಈ ಇತಿಹಾಸದಿಂದ ಪಾಠಕಲಿತುಕೊಂಡು ಎಂಥ ಪುತ್ಥಳಿಗಳನ್ನು ನಿಲ್ಲಿಸಬೇಕೆಂಬದನ್ನು ಪೂರ್ಣ ವಿಚಾರ ಮಾಡಿ ಕೆಲಸ ಮಾಡಬೇಕಾಯಿತು.

ಮೊಟ್ಟಮೊದಲಿನ ಆಹುತಿಯೆಂದರೆ ಗಳನೇ ಲುಯಿಯ ಪುತ್ಥಳಿಯು. ಹೆಂಗುಸೊಬ್ಬಳು ರಾಜನ ಪುತ್ಥಳಿಯ ಕುತ್ತಿಗೆಗೆ ಹಗ್ಗದ ಒಂದು ತುದಿಯನ್ನು ಕಟ್ಟಿ, ಇನ್ನೊಂದನ್ನು ತನ್ನ ಕುತ್ತಿಗೆ ಕಟ್ಟಿಕೊಂಡು ಎಳೆದಾಡಲು ರಾಜೇಸಾಹೇಬರು ಉರುಳಿದರು. ಆದರೆ ಅವಳು ಆ ಪುತ್ಥಳಿಯ ಬುಡದಲ್ಲಿ ಸಿಕ್ಕು ಅಲ್ಲಿಯೇ ಪ್ರಾಣಕ್ಕೆರವಾದಳು. ಇದರಂತೆಯೇ ಗಣನೇ ಲುಯಿಯ ಅವಸ್ಥೆಯಾಯಿತು. ಈ ಮೂರ್ತಿಭಂಜಕನೊಬ್ಬನು ಅದರ ಸಮೀಪ ಹೋಗುವಷ್ಟರಲ್ಲಿ 'ಮೂರ್ಖ' ಎಂದಾವನೋ ಕೂಗಿದನು. ಅದನ್ನು ಕೇಳಿ ಅವನ ರಕ್ತವನ್ನು ಮೊದಲು ಕೆಡವಿದಮೇಲೆ ಆ ಪುತ್ಥಳಿಯನ್ನು ಪುಡಿಪುಡಿ ಮಾಡಿದನು. ಅದರ ಬಲಗೈಯೊಂದನ್ನು ಬಿಟ್ಟು ಉಳಿದ ಅವಯವಗಳನ್ನು ಕುಟ್ಟಿ ಪುಡಿಮಾಡಲಾಯಿತು ಅದರ ಈ ಬಲಗೈಯು ಸಾಮ್ರಾಟನ ಸರ್ವಸ್ವತಂತ್ರ ಸತ್ತಾಧಿಕಾರವನ್ನು ಸಾರುವಂತೆ ಎತ್ತಿ ಹಿಡಿಯಲಾಗಿತ್ತು. ಸಿಮೋರೆಡಿನ್‌ನು ಜನರಿಗೆ "ಈ ಕೈ ಹಾಗೇ ಉಳಿಯಲಿ, ನಾಶಗೊಳಿಸಬೇಡಿರಿ. ಈ ಕೈಯು ಹತಭಾಗಿಯಾದವನೊಬ್ಬನಿಗೆ ಆವಶ್ಯಕವಿದೆ. ಈ ಹತಭಾಗಿ ಯಾರಾಗಿರಬಹುದು? ಅವನಿಗೆ ಈ ಕೈ ಬೇಕೇಕೆ? ೩೭ ವರುಷಗಳ ಹಿಂದೆ ಇದೇ ಕೈಯೇ ದುರ್ದೈವಿಯಾದವನೊಬ್ಬನನ್ನು ಸೆರೆಮನೆಗೆ ನೂಕಿತ್ತು. ಆ ದುರ್ದೈವಿಯು ಇನ್ನೂ ಸೆರೆಮನೆಯಲ್ಲಿ ವಿಲಿವಿಲಿ ಒದ್ದಾಡುತ್ತಿದ್ದಾನೆ. ದಿನದಿನಕ್ಕೂ ಅವನು ಕ್ಷೀಣನಾಗುತ್ತ ನಡೆದಿದ್ದಾನೆ ಕೈಕಾಲುಗಳಲ್ಲಿ ಕಬ್ಬಿಣದ ಬೇಡಿಗಳ ಬಂಧನವಿದ್ದು ಸುತ್ತಲೂ ಬಿಗುವಾದ ಕಾವಲವಿದೆ. "ಎಲೈ ದುರ್ದೈವಿಯೇ, ನೀನು ಸೆರೆಮನೆಗೆ ಹೋಗುವದರಿಂದ ನಿನ್ನ ದೇಶವು ಸ್ವತಂತ್ರವಾಗಬಹದೆಂದು ನಿನಗೆ ಎಂದಾದರೂ ಸ್ವಪ್ನ-ಗಿಪ್ನ ಬಿದ್ದಿತ್ತೇ? ಯಾವ ಬೇಡಿಗಳಿಂದ ನೀನು ಬಂಧಿತನಾಗಿರುವೆಯೋ ಅದೇ ಬೇಡಿಗಳೇ ರಾಜಸತ್ತೆಯನ್ನು ಮಣ್ಣುಗೂಡಿಸಿ ನಿನ್ನ ದೇಶವನ್ನು ಪಾರತಂತ್ರ್ಯದಿಂದ ಮುಕ್ತಮಾಡಬಹುದೆಂಬ ಕಲ್ಪನೆಯಾದರೂ ನಿನಗೆ ಬಂದಿದೆಯೋ? ಅಯ್ಯೋ, ನಿನ್ನ ದುಃಖ ಭೋಗದಿಂದಲೇ ನಿನ್ನ ದೇಶೋನ್ನತಿಯು ಆಗಬೇಕೆಂಬ ಈಶ್ವರೀ ಸಂಕೇತವೇಕಿರಬಾರದು? ನಿನ್ನ ತಪಶ್ಚರ್ಯೆಯ ಫಲವು ಇಂದು ಕೈಗೂಡಿತು. ತೆಗೆ

ದುಕೋ ಆ ರಾಜನ ಈ ಕೈಯನ್ನು. ಯಾವ ಕೈಯು ನಿನಗೆ ಶಿಕ್ಷೆ ವಿಧಿಸಿತ್ತೊ ಆ ಕೈಯನ್ನು ವಶದಲ್ಲಿ ತೆಗೆದುಕೋ. ಯಾವ ಉಯಿಯು ಸತ್ತ ಮೇಲೆಯೂ ಇಡೀ ಫ್ರಾನ್ಸದ ಮೇಲೆ ಅಧಿಕಾರೀ ದೃಷ್ಟಿಯಿಂದ ನೋಡುತ್ತ ನಿಂತಿದ್ದನೋ ಅಂಥ ಉಯಿಯು ಪ್ರಜೆರ ಪಾದಧೂಳಿಯನ್ನು ನೆಕ್ಕುತ್ತ ಬಿದ್ದಿರುವನು. ಅಂಥವನ ಕೈಯ ಯಜಮಾನನು ನೀನಾಗಬಹುದೆಂಬ ಕನಸನ್ನು ಕಂಡಿದ್ದಿಯಾ? ಅದೇನೇ ಇದ್ದರೂ ರಾಜಸತ್ತೆಯು ಹೀಗೇ ಮಣ್ಣುಗೂಡುವದು. ಆದರೂ ಆ ಸತ್ತೆಯನ್ನು ಎತ್ತಿ ಹಿಡಿವ ರಾಜಹಸ್ತವು ಇದ್ದುಕೊಂಡಿರಲಿ" ಎಂದು ಹೇಳಿದನು.

ಸಿಮೋರೆಡಿನ್‌ನಲ್ಲಿ ಅಂತಃಸ್ಫೂರ್ತಿಯು ಉಕ್ಕಿಬರುತ್ತಿತ್ತು. ಅವನು ಅದರಂತೆ ನಡೆಯುತ್ತಿದ್ದನು. ಇಂಥ ಮನುಷ್ಯರು ಶೂನ್ಯವೃತ್ತಿಯವರಿರುವರೋ ಅಥವಾ ಮೈ ತುಂಬ ಕಣ್ಣಿದ್ದವರಂತೆ ದಕ್ಷರಿರುವರೋ ಎಂಬದನ್ನು ಹೇಳುವದು ದುಸ್ತರವಾದುದು. ಅವನು ಜ್ಞಾನಿಯೂ ಅಹುದು; ಅಜ್ಞಾನಿಯೂ ಅಹುದು. ಅವನು ಎಲ್ಲ ಶಾಸ್ತ್ರಗಳನ್ನು ಅಭ್ಯಸಿಸಿದ್ದನು. ಆದರೂ ಅವನಿಗೆ ವ್ಯವಹಾರ ಶಾಸ್ತ್ರದ ಗುಟ್ಟು ಗೊತ್ತಾಗಿರಲಿಲ್ಲ. ಕ್ರಾಂತಿಯ ಕಾಲದಲ್ಲಿ ಹುಂಬಗುತ್ತಿಗೆಯಿಂದ ಕೆಲಸಮಾಡುವದು ಗಂಡಾಂತರದ್ದಾಗಿರುವದು. ಸಿಮೋರೆಡಿನ್‌ನು ಹಿಂದೆಮುಂದೆ ನೋಡದೆ ತನ್ನ ಮನಸ್ಸಿನಲ್ಲಿ ನಿಶ್ಚಿತ ಧೋರಣೆಯೊಂದನ್ನು ಮಾಡಿಕೊಂಡು ಅದರಂತೆ ಮುಂದೆ ಸಾಗುತ್ತಿದ್ದನು. ಆ ವಿಚಾರದಂತೆ ಕಾರ್ಯವು ಕೈಗೂಡುವದು ಬಲು ಕಠಿಣವಾದುದೆಂದು ಅವನು ಮನಗಂಡಿದ್ದನು. ಪ್ರಖರವೃತ್ತಿಯಿಂದಲ್ಲದೆ ಆತ್ಮಸಂರಕ್ಷಣವಾಗಲಿ, ಉಳಿದಾವ ಕಾರ್ಯಗಳಾಗಲಿ ಆಗುವದಿಲ್ಲೆಂದು ಅವನ ನಂಬಿಗೆಯಾಗಿತ್ತು. ಆದರೆ ಇದು ತಾರ್ಕಿಕರಿಗೆ ಸರಿಹೋಗುತ್ತಿದ್ದಿಲ್ಲ. ಆಗ ಅಸ್ತಿತ್ವದಲ್ಲಿದ್ದ ಎಲ್ಲ ಮಂಡಳಗಳನ್ನು ಬಿಟ್ಟು ಒಂದು ಹೊಸಮಂಡಳವನ್ನೇ ಸ್ಥಾಪಿಸಬೇಕಾಯಿತು. ಈ ಮಂಡಳದ ಹೆಸರು 'ಇವೇಶೀ' ಎಂದಿಡಲಾಯಿತು. ಇದಕ್ಕೆ ಎಲ್ಲ ತರದ ಜನರು ಸದಸ್ಯರಾದರು. ಇವರ ಸಭೆಯು ಗುಪ್ತಸ್ಥಳದಲ್ಲಿಯ ನೆಲಮನೆಯೊಂದರಲ್ಲಿ ನೆರೆ

ಯುತ್ತಿತ್ತು. ಅಲ್ಲಿ ಮಾತಿನ ಮಳೆಗಿಂತ ಮೂಕವ್ಯಕ್ತಿಯೇ ಪ್ರಾಧಾನ್ಯ ನಾಗಿತ್ತು. ಅದರ ಕೇಂದ್ರವೂ ಪ್ಯಾರಿಸ್‌ಪಟ್ಟಣವೇ. ಪ್ಯಾರಿಸ್ ವೆಂದರೆ ಜನತೆಯ ಜೀವಾಳವಾಗಿತ್ತು. ಈ ಮಂಡಳದಲ್ಲಿದ್ದಷ್ಟು ಚೈತ ನ್ಯವು ಇನ್ನಾವಮಂಡಳಗಳಲ್ಲಿರಲಿಲ್ಲ. ಈ ಮಂಡಳದ ಮುಂದೆ ಪ್ರಚಂಡ ಕ್ರಾಂತಿಕಾರಕ ಮಂಡಳಗಳೂ ಡೊಗ್ಗಾಲು-ಮಂಡೆಯನ್ನೂರ ಬೇಕಾಯಿತು. ಈ ಮಂಡಳದ ಸದಸ್ಯರು ಅಜ್ಞಾನಿಗಳೂ, ಮೂರ್ಖರೂ, ಪ್ರಾಮಾಣಿಕರೂ, ಶೂರರೂ, ಗುಪ್ತಕಾರಸ್ಥಾನಿಗಳೂ ಆಗಿದ್ದರು. ಕೆಲವರು ಪೂಜ್ಯರಾಗಿದ್ದರು. ಕೆಲವರು ಕೆಟ್ಟವರಾಗಿದ್ದರು. ಅಂಥವರಿಗೆ ಗಲ್ಲಿನ ಶಿಕ್ಷೆಯೇ ಯೋಗ್ಯವಾಗಿತ್ತು. ಆದರೂ ಎಲ್ಲರೂ ನಿಷ್ಠಾವಂತರೂ ಉತ್ಸಾಹಿಗಳೂ ಆಗಿದ್ದರು. ಪ್ರಾನ್ಸದಲ್ಲಿ ಸಭೆಯೊಂದು ನೆರೆದಾಗ ಯಾರೋ ಒಬ್ಬರು ಭವಿಷ್ಯ ಕಾಲದ ಸಂಕಟದ ಸೂಚನೆಗಳನ್ನು ವಿವರಿಸುತ್ತ ಒಳ್ಳೇ ಆವೇಶದಿಂದ "ಪ್ಯಾರಿಸ್-ನಿವಾಸಿಗಳೇ, ಸಿದ್ಧರಾಗಿರಿ! ಒಂದು ದಿನ ಬರಲಿದೆ. ಆದಿನ ನೀವು, ನಿಮ್ಮ ಪಟ್ಟಣದ ಕಟ್ಟಡಗಳು ಪುಡಿಪುಡಿಯಾಗುವದನ್ನು ನೋಡು ವಿರಿ. ಪಟ್ಟಣದ ತಳಹದಿಯನ್ನು ವ್ಯರ್ಥವಾಗಿ ಶೋಧಿಸಲು ಹೆಣಗುವಿರಿ" ಎಂದು ಮಾಡಿದ ಭಾಷಣವನ್ನು ಕೇಳಿದ ಮೇಲೆಯೇ ಈ ಮಂಡಳವು ಸ್ಥಾಪಿಸಲ್ಪಟ್ಟಿತು. ಸಿವೋರೆಡಿನ್‌ನೂ ಈ ಮಂಡಳದಲ್ಲಿ ಸೇರಿದನು. ರಾಜಕ್ರಾಂತಿಯಲ್ಲಿ ಎಲ್ಲ ಜನರಿಗೂ ಅತ್ಯಾಚಾರವು ತೀರ ಆವಶ್ಯಕವೆಂದು ತೋರಿ ಬರುವ ಕಾಲವೂ ಬಂದೇ ಬಿಟ್ಟಿತು. ಎಲ್ಲ ಸೂತ್ರಗಳು ಈ ಮಂಡಳದವರ ಕೈಯಲ್ಲಿದ್ದವು.

ಸತ್ಯಕ್ಕಾಗಿ ಹೋರಾಡುವುವರಲ್ಲಿ ಎಲ್ಲವೂ ನ್ಯಾಯಬದ್ಧವಾಗಿ ರುತ್ತದೆಂದು ಸೀವೋರೆಡಿನ್‌ನಿಗೆ ಪೂರ್ಣ ನಂಬಿಗೆಯಾಗಿತ್ತು. ಎಂಥ ಉಗ್ರಗ್ರಾಮಿಗಳಾದರೂ ಈ ವಿಶ್ವಾಸದ ಅಂಕೆಯಲ್ಲಿ ಬರುತ್ತಿದ್ದರು. ಅದಕ್ಕಾಗಿ ಅವರು ಆತ್ಮಾರ್ಪಣಕ್ಕೂ ಸಿದ್ಧರಾಗುತ್ತಿದ್ದರು. ಇದರಿಂದ ಸಿವೋರೇಡಿನ್‌ನು ಇವರಿಗೆಲ್ಲ ಆರಾಧ್ಯದೇವತೆಯಾಗಿ ಬಿಟ್ಟನು. ಅವನು ವಜ್ರಹೃದಯಿಯಾಗಿದ್ದನಲ್ಲದೆ ಅವನ ಕಣ್ಣಲ್ಲಿ ನೀರು ಎಂದೂ ಬರುತ್ತಿದ್ದಿಲ್ಲ. ಅವನು ನ್ಯಾಯದೇವತೆಯ ಪ್ರತ್ಯಕ್ಷ ಮೂರ್ತಿಯೇ ಆಗಿದ್ದನು. ಕ್ರಾಂತಿಯ

ಕಾಲದಲ್ಲಿ ಧಾರ್ಮಿಕರು ತ್ರಿಶಂಕು ಸ್ವರ್ಗಿಗಳಾಗದೆ ಯಾವದಾದರೊಂದು ಪಕ್ಷಕ್ಕೆ ಅಂಟಿಕೊಳ್ಳದೆ ಸಾಗುವ ಹಾಗಿರಲಿಲ್ಲ. ಈ ಪಕ್ಷಕ್ಕೆ ಸೇರಿದ್ದಾದರೆ ಉಚ್ಚಧ್ಯೇಯ ಸಾಧನೆಗಾಗಿ ಹೋರಾಡಿ ಕೀರ್ತಿವಂತರಾಗಲು ಶಕ್ಯವಿತ್ತು. ಇಲ್ಲವೆ ಕ್ಷುದ್ರ ಮನೋವಿಕಾರಗಳಿಗೆ ಬಲಿಯಾಗಿ ಅಪಕೀರ್ತಿಗೆ ಗುರಿಯಾಗ ಬೇಕಾಗಿತ್ತು. ಸಿಮೋರೆಡಿನ್‌ನು ಉಚ್ಚ ಧ್ಯೇಯಗಳನ್ನಿಟ್ಟುಕೊಂಡದ್ದರಿಂದ ಅವನ ಸ್ಥಾನವು ಉನ್ನತಾವಸ್ಥೆಯನ್ನೇರಿತ್ತು. ಈಸ್ಥಾನವನ್ನಲಂಕರಿಸುವ ಯೋಗ್ಯತೆಯಿನ್ನಾರಿಗೂ ಇರಲಿಲ್ಲ. ಅದನ್ನು ಮುಟ್ಟುವದಂತೂ ದೂರತೋಪಾಸ್ತವೇ.

ಸಿಮೋರೆಡಿನ್‌ನು ತೀರ ಸಾದಾ ಮನುಷ್ಯನು. ಅವನು ಉಡುಪು ತೊಡಪುಗಳ ಬಗ್ಗೆ ಬಹಳ ಚಿಕಿತ್ಸೆ ಮಾಡುತ್ತಿದ್ದಿಲ್ಲ. ಇದ್ದಂಥ ಉಡುಪೂ ಹೊಲಸಾಗಿರುತ್ತಿತ್ತು. ಅವನ ತಲೆಯಲ್ಲಿ ಪೆಟ್ಟು ತಾಕಿದ ಕಲೆಯೊಂದು ಎದ್ದು ಕಾಣುತ್ತಿತ್ತು. ಅವನ ಹಣೆಯು ಹರವಾದುದರಿಂದ ಅವನ ಸ್ವಭಾವವು ಎಂಥದೆಂಬದು ಅದರಿಂದ ಕಂಡುಬರುವಂತಿತ್ತು. ಅವನ ಮಾತು ಗಂಭೀರವಾಗಿಯೂ ಆವೇಶಯುಕ್ತವಾಗಿಯೂ ಇರುತ್ತಿದ್ದವು. ಅವನ ಧ್ವನಿಯು ಕರ್ಕಶವಾಗಿತ್ತು. ಕಣ್ಣು ಆಳವಾಗಿದ್ದು ಬೆಳ್ಳಗಿದ್ದವು. ಒಟ್ಟಿನ ಮೇಲೆ ಅವನ ಮುಖಚರ್ಯೆಯು ಕ್ರೋಧಮಯವಾಗಿತ್ತೆಂದು ಹೇಳಲು ಅಡ್ಡಿಯೇ ಇರಲಿಲ್ಲ. ಇಂಥ ಸಿಮೋರೆಡಿನ್‌ನ ಹೆಸರು ಇಂದು ಬಹಳ ಜನರಿಗೆ ಗೊತ್ತಿದ್ದಿಲ್ಲ. ಈ ತರದ ಬೆಳಕಿಗೆಬಾರದ ಗುಪ್ತವ್ಯಕ್ತಿಗಳು ಇತಿಹಾಸದ ಗರ್ಭದಲ್ಲಿ ಎಷ್ಟಿರುವವೊ ಏನೋ ಯಾರಿಗೆ ಗೊತ್ತು! ಇಂಥವನಿಗೆ ಮನುಷ್ಯನೆಂದು ಕರೆಯುವದು ಯೋಗ್ಯವಾದೀತೆ? ಯಾವ ಮನುಷ್ಯನು ಮಾನವಜಾತಿಯ ಗುಲಾಮನೆಂದು ತಾನಂದುಕೊಳ್ಳುವನೋ ಅಂಥವನಿಗೆ ಸದಯಾಂತಃಕರಣ ವಿದ್ದೀತೇ? ಯಾವನು ತನ್ನ ಪ್ರೇಮವನ್ನೆಲ್ಲ ಮಾನವಜಾತಿಗಾಗಿ ಅರ್ಪಣ ಮಾಡಿರುವನೋ ಅಂಥವನಿಗೆ ಪ್ರೇಮ ಪ್ರವಾಹವು ಒಂದೇ ವ್ಯಕ್ತಿಯ ಕಡೆಗೆ ಒಲಿಯುವದು ಸಾಧ್ಯವಿದೆಯೋ? ಸಿಮೋರೆಡಿನ್‌ನಿಗೆ ದಯೆ ಮತ್ತು ಪ್ರೇಮಗಳೆಂಬವು ಅಪೂರ್ವ ವಸ್ತುಗಳೆಂಬ ವಿಷಯವು ಗೊತ್ತಿರ ಬಹುದೇ? ಇವೆಲ್ಲವನ್ನೂ ನಾವು ಮುಂದಿನ ಕಥಾಬಾಗದಲ್ಲಿ ಕಾಣಬಹುದಾಗಿದೆ.

ಅವನು ತರುಣನಿರುವಾಗ ಶ್ರೀಮಂತನೊಬ್ಬನ ಮನೆಯಲ್ಲಿ ಶ್ರೀಮಂತನ ಶಿಕ್ಷಕನಾಗಿದ್ದನು. ಅಲ್ಲಿ ಅವನು ಆ ಮನೆತನದ ಔರಸಪುತ್ರನಿಗೆ ಶಿಕ್ಷಣ ಕೊಡುತ್ತಿದ್ದನು. ಆ ಹುಡುಗನ ಮೇಲೆ ಇವನು ಬಹಳ ಮಮತೆ ಯುಳ್ಳವನಾಗಿದ್ದನು. ಚಿಕ್ಕವರನ್ನು ಪ್ರೀತಿಸುವದು ಬಲು ಸುಲಭವಾದುದು. ಚಿಕ್ಕವರು ಏನೇನು ಮಾಡುತ್ತಾರೋ ಅದೆಲ್ಲವನ್ನು ಕ್ಷಮಿಸುವದು ಅಷ್ಟೇ ಸುಲಭ ಕೆಲಸವೆನಬಹುದು. ಅವನು ರಾಜನಿರಲಿ, ಸರದಾರನಿರಲಿ, ಶ್ರೀಮಂತನಿರಲಿ ಅಥವಾ ಯಾರೇ ಇರಲಿ ಅಂಥವರನ್ನು ಕ್ಷಮಿಸುವದು ಹಿರಿಯರ ಕೈಯಲ್ಲಿರುತ್ತದೆ. ಚಿಕ್ಕವನು ಸರದಾರರ ಕುಟುಂಬದಲ್ಲಿ ಜನ್ಮವೆತ್ತಿದ ಅಪರಾಧ ಮಾಡಿದ್ದರೂ ಅವನ ಬಾಲ್ಯದ ಮೂಕವೃತ್ತಿಯು ಮೂಲಕ ಕ್ಷಮೆ ಮಾಡಿದುದರಲ್ಲಿಯೂ ಅವನ ಅಧಿಕಾರವಿರುತ್ತದೆ. ಅವನು ಪ್ರತಿಷ್ಠಿತ ಮನೆತನದಲ್ಲಿ ಜನ್ಮಧಾರಣಮಾಡಿದ್ದರೂ ಅವನ ಬಾಲ್ಯಾವಸ್ಥೆಯ ಪರಾವಲಂಬನವನ್ನು ಕಂಡು ಕ್ಷಣಹೊತ್ತು ಹಿರಿಯರು ಎಲ್ಲವನ್ನೂ ಮರೆತಿರಬೇಕಾಗುತ್ತದೆ. ಇಷ್ಟು ಸಣ್ಣ ಹುಡುಗನೂ ಸಹ ತನ್ನ ಯಜಮಾನನೆಂಬ ಸಂಗತಿಯನ್ನು ಅವನ ಆಶ್ರಿತನೂ ಮರೆಯುತ್ತಾನೆ. ಸಿಮೋರೆಡಿನ್‌ನು ತನ್ನ ಜೀವಕ್ಕಿಂತಲೂ ಹೆಚ್ಚಾಗಿ ಆ ಹುಡುಗನನ್ನು ಪ್ರೀತಿಸುತ್ತಿದ್ದನು. ನಿಜ ಸಂಗತಿ ಹೇಳಬೇಕೆಂದರೆ ಸಿಮೋರೆಡಿನ್‌ನ ಹೃದಯದಲ್ಲಿಯ ಪ್ರೇಮಪ್ರವಾಹವು ಬತ್ತಿ ಒಣಗಹೋಗಬೇಕಾಗಿತ್ತು. ಆದರೆ ಈ ಹುಡುಗನ ಸಲುವಾಗಿ ಅವನ ಹೃದಯದಲ್ಲಿ ದಯೆಯ ಸೆಲೆಯು ಪುಟಿಯುತ್ತಿತ್ತು. ಆ ಹುಡುಗನನ್ನು ಒಂದು ಕ್ಷಣಹೊತ್ತು ಬಿಟ್ಟಿರುವದೆಂದರೆ ಅವನ ಜೀವದ ಸುತ್ತು ಬರುತ್ತಿತ್ತು. ಆ ಹುಡುಗನೇ ತನ್ನ ಹೊಟ್ಟೆಯ ಮಗನೆಂಬಂತೆ ಅವನು ಭಾವಿಸಿದ್ದನು. ಹೊಟ್ಟೆಯಿಂದ ಹುಟ್ಟಿರದಿದ್ದರೂ ಅವನಿಗೆ ಆ ಹುಡುಗನಲ್ಲಿ ಆತ್ಮೀಯಭಾವ ನೆಲೆಸಿಬಿಟ್ಟಿತ್ತು. ಅವನ ಶರೀರ ಸೃಷ್ಟಿಗೆ ಕಾರಣನಾಗಿರದಿದ್ದರೂ ಸಿಮೋರೆಡಿನ್‌ನು ಆ ಹುಡುಗನ ಮಾನಸಿಕ ರಚನೆಯ ಸೃಷ್ಟಿಕರ್ತನಾಗಿದ್ದನು. ಅವನು ಈ ಚಿಕ್ಕ ಸರದಾರನನ್ನು ದೊಡ್ಡ ಮನುಷ್ಯನನ್ನಾಗಿ ಮಾಡ ಬೇಕಾಗಿತ್ತು. ಅವನು ಆ ಬಾಲಕನ ಕೋಮಲ ಮನಸಿನಲ್ಲಿ ತನ್ನ ಅಂತಃಕರಣದಲ್ಲಿಯ ಎಲ್ಲ ವಿಚಾರಗಳನ್ನು

ಬಿಂಬಿಸಿದ್ದನು. ಅವನು ತನ್ನ ಸರ್ವ ಸದ್ಗುಣಗಳನ್ನು ಆ ಹುಡುಗನಿಗೆ ಅರ್ಪಿಸಿಬಿಟ್ಟಿದ್ದನು. ಅವನು ಈ ಚಿಕ್ಕ ಸರದಾರನ ಬುದ್ಧಿಯಲ್ಲಿ ಜನತೆಯ ಅಂತಃಕರಣದ ಎರಕವನ್ನೇ ಹೊಯ್ದಿದ್ದನು. ಈ ಎಲ್ಲ ಸಂಗತಿಗಳಿಂದ ಅವರಿಬ್ಬರಲ್ಲಿ ಗಾಢವಾದ ಮೈತ್ರಿಯು ಬೆಳೆದುಬಂದಿತ್ತು. ಈ ಹುಡುಗನು ಕಣ್ಣಿಗೆ ಬಿದ್ದೊಡನೆ ಸಿಮೋರೆಡಿನ್‌ನಿಗೆ ಆನಂದವು ಉಕ್ಕೇರುತ್ತಿತ್ತು; ಈ ಭರದಲ್ಲಿ ಅವನು ತನ್ನ ದುಃಖಗಳನ್ನು ಮರೆಯುತ್ತಿದ್ದನು. ಹುಡುಗನ ತಾಯಿ-ತಂದೆ ತೀರಿಹೋಗಿದ್ದರು. ಅಮ್ಮನು ಕುರುಡಿ; ಅಜ್ಜನು ದೇಶಾಂತರ ಹೊರಟು ಹೋಗಿದ್ದನು. ಇಂಥ ಪರಿಸ್ಥಿತಿಯಲ್ಲಿ ಸಿಮೋರೆಡಿನ್‌ನಿಗೆ ಪಿತೃ ಪದವಿಯು ಬಂದಂತೆಯೇ ಆಗಿತ್ತು.

ಈ ಗುರು-ಶಿಷ್ಯರು ಮೊದಲಿನಿಂದಲೂ ಒಂದೇ ಕಡೆಗಿರುತ್ತಿದ್ದರು. ಈ ಹುಡುಗನು ತೀರ ಕೂಸಿರುವಾಗ ಒಮ್ಮೆ ಬೇನೆ ಬಿದ್ದಿದ್ದನು. ಅವನ ಬೇನೆಯು ಬಹಳೇ ಚಿಂತಾಜನಕವಾಗಿತ್ತು. ಸಿಮೋರೆಡಿನ್‌ನು ಹಗಲಿರುಳು ಅವನ ಹಾಸಿಗೆಯ ಬದಿಯಲ್ಲಿಯೇ ಇರುತ್ತಿದ್ದನು. ವೈದ್ಯನು ಔಷಧಮಾತ್ರ ಕೊಡುವವನು. ಆದರೆ ನಿಜವಾಗಿ ಆಯುಷ್ಯವನ್ನು ರಕ್ಷಿಸುವವರೆಂದರೆ ರೋಗಿಯ ಶುಶ್ರೂಷೆ ಮಾಡುವವರ ಕೈಯಲ್ಲಿರುತ್ತದೆ. ಹುಡುಗನಿಗೆ ಜ್ಞಾನದಾನ ಮಾಡಿದ್ದಲ್ಲದೆ ಅವನು ಅವನ ಪ್ರಾಣವನ್ನೂ ಉಳಿಸಿದ್ದನು. ಇದೆಲ್ಲ ರೀತಿಯಿಂದ ಇಬ್ಬರಲ್ಲಿಯೂ ನಿಕಟವಾದ ಋಣಾನುಬಂಧವು ಹೆಚ್ಚಾಗಿ ಉಂಟಾಯಿತು.

ಕೊನೆಗೆ ಕೊನೆಯ ದಿನವು ಬೆಳಗಿತು. ಅಂದು ಗುರು ಶಿಷ್ಯರ ಸಂಬಂಧವು ದೂರಾಗ ಬೇಕಾಗಿತ್ತು. ಶಿಷ್ಯನು ಈಗ ತರುಣನಾಗಿದ್ದಾನೆ. ಗುರುಮುಖದಿಂದ ಜ್ಞಾನಾರ್ಜನೆಯನ್ನು ಮಾಡಿದ್ದಾನೆ. ಇಂಥ ವಿರಹವು ಅವರ ಅಂತಃಕರಣದಲ್ಲಿ ಎಂಥ ದುಃಖವನ್ನು ತಂದೊಡ್ಡಿರಬೇಕೆಂಬದನ್ನು ವರ್ಣಿಸುವದು ಅಸಾಧ್ಯವಾದ ಮಾತು.

ಸಿಮೋರೆಡಿನ್‌ನಿಗೆ ಅವನ ವೇತನ ದೊರೆಯಿತು; ತನ್ನ ಮೊದಲಿನ ಉದ್ಯೋಗದಲ್ಲಿ ತೊಡಗಿದನು. ಗುರು-ಶಿಷ್ಯರ ನಡುವೆ, ದೊಡ್ಡದೊಂದು ಗೋಡೆ ಅಡ್ಡನಿಂತಿತು. ಚಿಕ್ಕ ಸರದಾರನು ಈಗ ದೊಡ್ಡ ಸರದಾರನಾಗಿ

ಸೈನ್ಯಖಾತೆಯಲ್ಲಿ ದೊಡ್ಡ ಅಧಿಕಾರಿಯಾಗಿದ್ದಾನೆ. ಅಧಿಕಾರ ಸ್ವೀಕರಿಸಿ ಆವನೀಗ ದೂರ ದೇಶಕ್ಕೆ ತೆರಳಿದನು. ಗುರುವು ಮೊದಲಿನಂತೆ ಬಡವನಾಗಿ ಭಿಕ್ಷುಕ ವರ್ಗಕ್ಕೆ ಪುನಃ ಸೇರಿದನು. ಮುಂದೆ ರಾಜ್ಯಕ್ರಾಂತಿಯಾಯಿತು. ಗುರುವು ಶಿಷ್ಯನನ್ನು ಮರೆತಿರಲಿಲ್ಲ. ಇಡಿ ಜಗತ್ತಿನಲ್ಲಿ ಅವನಿಗೆ ಪ್ರೇಮದ ವಸ್ತುವೊಂದಿದ್ದುದಾದರೆ ಈ ಅನಾಥ ಹುಡುಗನೆ ಆ ವಸ್ತುವೊಂದಾಗಿತ್ತು ಇಂಥ ಪ್ರೇಮಪಾಶದಲ್ಲಿ ಸಿಕ್ಕು ಒದ್ದಾಡುವ ಪ್ರಾಣಿಯು ಈ ಸಿಮೋರೆಡಿನ್‌ನು ಆಗಿದ್ದನೋ ಇಲ್ಲವೋ ಎಂಬದನ್ನು ಮುಂದೆ ನೋಡೋಣ.

---

## ೮.

೨೮ ನೇ ಜೂನ ೧೭೯೩. ಎರಡು ತಾಸು ರಾತ್ರಿಯಾಗಿರಬಹುದು. ಪ್ಯಾರಿಸ್ ಪಟ್ಟಣದ ಒಂದು ದೊಡ್ಡ ಮನೆಯ ಹಿಂಬದಿಯ ಕೋಣೆಯೊಂದರಲ್ಲಿ ಮೂವರು ಒಂದು ಮೇಜಿನ ಸುತ್ತುಮುತ್ತು ಕುಳಿತಿದ್ದಾರೆ. ನಾಲ್ಕನೇ ಕುರ್ಚಿಯು ಮಾತ್ರ ಬರಿದಾಗಿತ್ತು. ಹೊರಗೆ ಬೆಳಕು ಕಾಣುತ್ತಿದ್ದರೂ ಕೋಣೆಯೊಳಗೆ ಕತ್ತಲು ಕವಿದಿತ್ತು. ಗೋಡೆಗೆ ತೂಗುಹಾಕಿದ ಚಿಮಣಿಯೊಂದು ಮಿಣಿಮಿಣಿ ಉರಿಯುತ್ತಿತ್ತು. ರಾಬೆಸ್ಪಿಯರ್, ಡಾಂಟನ್, ಮೂರೆ ಎಂಬವರೆ ಆ ಮೂವರು. ಡಾಂಟನ್‌ನ ಮುಂದೆ ಸೆರೆಯ ಬಾಟಲಿ, ಕುಡಿಯುವ ಪಾತ್ರೆ. ಮೂರೆಯ ಮುಂದೆ ಕಾಫಿಯ ಪಾತ್ರೆ; ರಾಬೆಸ್ಪಿಯರನ ಮುಂದೆ ಕಾಗದ ಪತ್ರಗಳಿದ್ದವು. ಕಾಗದಪತ್ರಗಳ ಹತ್ತಿರ ಮಸಿದೌತಿ, ಲೆಕ್ಕಣಿಕೆ ಮತ್ತು ತಾಮ್ರದ ಮುದ್ರೆಗಳು ಇದ್ದವು. ಮೇಜಿನ ಮೇಲೆ ಫ್ರಾನ್ಸದ ನಕ್ಷೆಯೊಂದಿದೆ. ಕೋಣೆಯ ಹೊರಮುಗ್ಗಲು ಮೂರೆಯ ಕಾವಲುಗಾರರು ಕಾಯುತ್ತಿದ್ದರು. ಒಳಗೆ ಯಾರನ್ನೂ ಬಿಡಬಾರದೆಂಬ ಕಟ್ಟಪ್ಪಣೆಯಾಗಿತ್ತು.

ಈ ಸಭೆಯು ಬಹಳ ಹೊತ್ತು ನಡೆಯಿತು. ಅಲ್ಲಿದ್ದ ಕಾಗದಪತ್ರಗಳ ವಿಷಯವಾಗಿ ವಿವಾದ ನಡೆದಿತ್ತು. ಮಾತನಾಡುತ್ತಿದ್ದಂತೆ ಅವರ ಸ್ವರವು

ದೊಡ್ಡದಾಗುತ್ತಿತ್ತು. ಆ ಮೂವರಲ್ಲಿಯೂ ಭೇದ ಉಂಟಾಗಿರಬೇಕೆಂಬದು ಸ್ಪಷ್ಟವಾಗಿ ತೋರುತ್ತಿತ್ತು. ಹೊರಗಿನ ಜನರಿಗೂ ಆ ಧ್ವನಿಯು ಕೇಳಸ ತೊಡಗಿತ್ತು. ಆ ಕಾವಲುಗಾರರು ಬಾಗಿಲಿಗೆ ಕಿವಿಹಚ್ಚಿ ಅವರ ಭಾಷಣ ಗಳನ್ನು ಕೇಳುತ್ತಲಿದ್ದರು. ಅವರು ಕಾವಲುಗಾರರಾದರೂ ' ಇವೇಶೆಯ ' ಸಭಾಸದರಾಗಿದ್ದರು.

ಡಾಂಟನ್‌ನು ಕುರ್ಚಿಯಿಂದ ಚಟ್ಟನೆ ಎದ್ದು ಸಿಟ್ಟಿನಿಂದ ತನ್ನ ಕುರ್ಚಿಯನ್ನು ಹಿಂದಕ್ಕೆ ನೂಕಿ " ಸದ್ಯಕ್ಕೆ ಪ್ರಜಾಪಕ್ಷದಮೇಲೆ ಕಠಿಣ ಪ್ರಸಂಗ ಬಂದಿದೆ. ಫ್ರಾನ್ಸವನ್ನು ಶತ್ರುಗಳಿಂದ ರಕ್ಷಣೆ ಮಾಡುವದೊಂದೇ ಮಾತು ನನಗೆ ಹೊಳೆಯುತ್ತದೆ. ಇದರ ಬಗ್ಗೆ ಬರುವ ಸೂಚನೆಗಳೆಲ್ಲವೂ ಒಳ್ಳೆಯವೇ ಎಂದು ನನ್ನ ನಂಬಿಗೆಯಾಗಿದೆ. ಸಂಕಟಗಳನ್ನೆದುರಿಸುವಾಗ ನನಗೆ ಸರಿಕಂಡ ಮಾರ್ಗವನ್ನು ಅವಲಂಬಿಸುತ್ತೇನೆ. ನಾನು ಯಾವುದಕ್ಕೂ ಹೆದರದೆ ಧೈರ್ಯದಿಂದ ಎದುರಾಗಿ ನಿಲ್ಲುತ್ತೇನೆ. ಹಿಂದೆ ಸರಿಯುವದು ನನಗೆ ತಿಳಿಯದ ಸಂಗತಿ. ಮಿಳಿಮಿಳಿ ಮಾಡಿ ಉಪಯೋಗವಿಲ್ಲ. ನಾವು ಕ್ರೂರರಾಗಿ ಮುಂದಡಿಯಿಡದೆ ಗತ್ಯಂತರವಿಲ್ಲ. ಆನೆಯು ತನ್ನ ಹೆಜ್ಜೆಯನ್ನು ಎಲ್ಲಿಡುತ್ತದೆಂಬದನ್ನು ನೋಡಿ ಎಂದಾದರೂ ಹೆಜ್ಜೆಯಿಡುತ್ತದೆಯೇ ? ಅದರಂತೆ ನಾವೂ ನಡೆದು ಶತ್ರುಗಳ ಸಂಹಾರ ಮಾಡೋಣ " ಎಂದು ಭಾಷಣ ಮಾಡಿದನು.

ರಾಬೆಸ್ಪಿಯರನು " ಅಹುದು, ಅದೆ ನಿಜ ಶತ್ರುಗಳೆಲ್ಲಿರುವರೆಂಬದೆ ದೊಡ್ಡ ಪ್ರಶ್ನೆಯಾಗಿದೆ " ಎಂದಂದನು.

" ನಾನು ಹೊರಗೆ ಎಲ್ಲಿ ಅವರನ್ನು ಹಿಂದಕ್ಕಟ್ಟಿದೆನೋ ಅಲ್ಲಿಯೇ ಅವರಿದ್ದಾರೆ. "

" ಒಳಗೂ ಶತ್ರುಗಳಿರುವರೆಂದು ನನಗೆ ಸ್ಪಷ್ಟವಾಗಿ ಕಾಣುತ್ತದೆ "

" ಹಾಗಿದ್ದರೆ ನಾನು ಅವರನ್ನು ಓಡಿಸಿಯೇ ಬಿಡುತ್ತೇನೆ. "

" ಒಳಗೆ ಸೇರಿದ ಶತ್ರುಗಳನ್ನು ಹೊರಹಾಕುವದು ಬಲು ಕಠಿಣ. "

" ಹಾಗಾದರೆ ಅಂಥವರಿಗೇನು ಮಾಡಬೇಕು ? "

" ಮೂಲವನ್ನೇ ನಾಶಗೊಳಿಸಬೇಕು "

“ ನೀನನ್ನುವದು ನಿಜ. ಆದರೆ ಶತ್ರುಗಳು ಹೊರಗಿರುವರು. ”

“ ಇಲ್ಲ, ಒಳಗೇ ಇರುತ್ತಾರೆಂದು ನಾನನ್ನುತ್ತೇನೆ. ”

“ ಛೇ, ಎಂದಿಗೂ ಇಲ್ಲ. ಅವರು ಸರಹದ್ದಿಯಲ್ಲಿರುತ್ತಾರೆ. ”

“ ವೆಂಡಿಯ ಅಡವಿಯೊಳಗಿರುತ್ತಾರೆ. ”

ಮೂರನೆಯ ಧ್ವನಿಯೊಂದು ಕೇಳಬಂದಿತು. ಅದು ಅವರಿಬ್ಬರನ್ನು ಸಮಾಧಾನ ಮಾಡಲೆಳಸುತ್ತಿತ್ತು. “ ಶತ್ರುಗಳು ಸುತ್ತು ಕಡೆಗೆ ಇರುತ್ತಾರೆ. ನಿಮಗದರ ಕಲ್ಪನೆಯಿಲ್ಲೆಂದು ” ಮಾರೆ ಎಂದನು.

ರಾಬೆಸ್ಪಿಯರನು ಮಾರೆಯ ಕಡೆಗೆ ಹೊರಳಿ “ ಇದು ಸಣ್ಣ ಹುಡುಗರಿಗೂ ತಿಳಿದ ಮಾತು. ಶತ್ರುಗಳೆಲ್ಲಿರುವರೆಂಬದನ್ನು ನಾನು ತೋರಿಸಿ ಕೊಡುತ್ತೇನೆ ” ಎಂದು ಮಾತನಾಡಿದನು.

“ ಬಾಯಿಲೆ ಬಡಬಡಿಸಿದರೆ ಉಪಯೋಗವೇನು ? ತೋರಿಸು ” ಎಂದು ಮಾರೆಯು ಮೆಲ್ಲನೆ ಉಸಿರೆಳೆದನು.

ರಾಬೆಸ್ಪಿಯರನು ಕಾಗದದ ಮೇಲೆ ಕೈಯಿಟ್ಟು “ ನಾನೀಗ ನಿಮಗೆ ಅಧ್ಯಕ್ಷ ಮಾರೆಯ ಪತ್ರವನ್ನೋದಿ ತೋರಿಸಿದೆನು. ಅದೂ ಅಲ್ಲದೆ ಎಷ್ಟೋ ಮಾತುಗಳನ್ನೂ ಹೇಳಿದ್ದೇನೆ ಡಾಂಟನ್, ಹೊರಗಿನ ಶತ್ರುಗಳ ಬಗ್ಗೆ ಬಹಳ ಚಿಂತಿಸುವ ಕಾರಣವಿಲ್ಲ. ಒಳಗಿನ ಶತ್ರುಗಳದೇ ಅಂಜಿಕೆ ಹೆಚ್ಚಿದೆ. ಹೊರಗಿನವರೊಂದಿಗೆ ಕತ್ತಿ ಹಿರಿದು ಹೊಡೆದಾಡಬಹುದು. ಒಳಗಿನವರೊಂದಿಗೆ ಹೋರಾಡುವದೆಂದರೆ ಹೃದಯದಲ್ಲಿ ಚೂರಿಯನ್ನಿರಿದಂತಿದೆ ನಮ್ಮ ಚರ್ಚೆಯು ಮೇಲಿಂದ ಹೇಳಬೇಕೆಂದರೆ ವೆಂಡಿಯ ಸೈನಿಕರು ಇಲ್ಲಿಯವರೆಗೆ ಬೇರೆ ಬೇರೆ ಸೇನಾಪತಿಯ ಕೈಕೆಳಗಿದ್ದರು; ಆದರೆ ಈಗ ಅವರಿಗೊಬ್ಬ ಮುಖ್ಯ ಸೇನಾಪತಿಯು ದೊರಕಿದ್ದಾನೆ ” ಎಂದು ಹೇಳಿದನು.

“ ಸೇನಾಪತಿಯೆಂದರೂ ಅಷ್ಟೇ; ಒಬ್ಬ ತುಡುಗನೆಂದರೂ ಅಷ್ಟೇ. ಅವನು ಫ್ರಾನ್ಸದ ದಂಡೆಯಲ್ಲಿಳಿದು ಬಿಟ್ಟಿರುವನು. ಅವನಾರೆಂಬದು ನಿಮಗೆ ಗೊತ್ತೇ ಇದೆ. ಅವನು ಬಂದಿಳಿದ ಕ್ಷಣದಿಂದ ಎಂಥೆಂಥ ಅನನ್ವಿತ ಕೃತ್ಯಗಳಾದವೆಂಬದರ ವರದಿಗಳು ನಮ್ಮ ಕಿವಿಯ ಮೇಲೆ ಬೇಕಾದಷ್ಟು

ಬಂದಿವೆ. ನಾವು ನಮ್ಮ ಪರರಾಷ್ಟ್ರೀಯ ಖಾತೆಯನ್ನು ಹೆಚ್ಚಿಸಬೇಕು. ಅವನಿಗೆ ನೆರವಾಗಲು ಇಂಗ್ಲಿಷರೂ ಟೊಂಕಕಟ್ಟಿದ್ದಾರೆ. ಒಕ್ಕಲಿಗರೂ ಬಂಡೆದ್ದ ಕೂಡಲೆ ಇಂಗ್ಲಿಷರು ಹಲ್ಲೆಯನ್ನು ಮಾಡುವದೆಂದು ಗೊತ್ತಾಗಿದೆ. ನಕಾಶದಲ್ಲಿ ಗುರುತು ಮಾಡಿ, ತೋರಿಸಿ, ಅಲ್ಲಿ ಇಂಗ್ಲಿಷರು ಕಾಯ್ದು ಕೊಂಡು ಹೊಂಚು ಹಾಕಿ ಕುಳಿತಿದ್ದಾರೆ. ಹೀಗೆ ಇಂಗ್ಲಿಷರ ಸೈನ್ಯವು ನಮ್ಮ ದಂಡೆಯಲ್ಲಿ ಬಂದು ನುಗ್ಗಿ ಬಿಟ್ಟರೆ ನಮ್ಮ ಗತಿ ನೆಟ್ಟಗಾಗಲಾರದು. ಅವರು ೧೦-೧೫ ದಿನಗಳಲ್ಲಿ ೩-೪ ಲಕ್ಷ ಸೈನ್ಯ ಸಂಗ್ರಹ ಮಾಡಿಕೊಳ್ಳ ಬಹುದು. ಒಂದೊಂದೇ ಪಟ್ಟಣಗಳು ಅವರ ವಶಕ್ಕೆ ಹೋಗಬಹುದು. ಹಾಗಾದ ಮೇಲೆ ದೇಶದಲ್ಲಿ ಪುನಃ ರಾಜಸತ್ತೆಯು ಮೆರೆದಾಡಬಹುದು" ಎಂದು ಡಾಂಟನ್‌ನು ತನ್ನ ಅಭಿಪ್ರಾಯ ವ್ಯಕ್ತಪಡಿಸಿದನು.

"ಏನು ಇಂಗ್ಲಂಡ ರಾಜ ರಾಜಸತ್ತೆಯೋ ?"

"ಅಲ್ಲ, ಫ್ರಾನ್ಸದ ರಾಜಸ ಸತ್ತೆಯು."

"ಫ್ರಾನ್ಸದ ರಾಜನು ಪರಕೀಯ ರಾಜರಗಿಂತಲೂ ನೀಚನಿರು ತ್ತಾನೆ. ಪರಕೀಯರನ್ನು ಹೊರಹಾಕಲು ೧೫ ದಿನಗಳು ಸಾಕು. ಆದರೆ ರಾಜಸತ್ತೆಯನ್ನು ಕಸಿದುಕೊಳ್ಳಬೇಕಾದರೆ ೧೫೦೦ ವರುಷಗಳು ಸಾಲದೆ ಹೋಗುವವು" ಎಂದು ರಾಬೆಸ್ಪಿಯರನು ಮಾತನಾಡಿದನು.

ಡಾಂಟನ್‌ನು ತನ್ನ ಸ್ಥಳದಲ್ಲಿಯೇ ಕುಳಿತಿದ್ದನು. ಗಂಭೀರ ವಿಚಾರ ಗಳಲ್ಲಿ ಮಗ್ನನಾದಂತೆ ತನ್ನ ಕೈಗಳಿಂದ ತಲೆಯನ್ನು ಹಿಡಿದುಕೊಂಡಿದ್ದನು. ತುಸು ಹೊತ್ತಿನ ಮೇಲೆ ವಿಚಾರ ತಂದ್ರಿಯಿಂದೆಚ್ಚತ್ತು, "ಇಂಗ್ಲಿಷರು ಫ್ರಾನ್ಸದಲ್ಲಿ ಬರಬೇಕೆಂದಂತೆ ಜರ್ಮನರು ಬರಲು ಶಕ್ಯವಿರಲಿಲ್ಲವೇ ?" ಎಂದನು.

"ಮುಂದೇನು ?"

"ಕೇಳುವದೇನು ! ನಾವು ಜರ್ಮನರನ್ನು ಹೇಗೆ ಹೊಡೆದೋಡಿಸ ಬಹುದಿತ್ತೋ ಅದೇ ಪ್ರಕಾರ ಇಂಗ್ಲಿಷರನ್ನೂ ಹೊರಗೆ ಹಾಕಲೇಬೇಕು." ಎಂದಂದು ಡಾಂಟನ್‌ನು ಚಟಕ್ಕನೆ ಎದ್ದುನಿಂತನು. ರಾಬೆಸ್ಪಿಯರನು ತನ್ನ ತಣ್ಣಗಿನ ಕೈಯನ್ನು ಸುಡುತ್ತಿರುವ ಡಾಂಟನ್‌ನ ಕೈಮೇಲಿಟ್ಟು

“ಡಾಂಟನ್, ಜರ್ಮನರ ಮಾತು ಬೇರೆ ತರದ್ದು. ಅವರಿಗೆ ಫ್ರಾನ್ಸಿನವರು ಎಂದೂ ಬೆಲೆ ಕೊಟ್ಟಿರುವದೇ ಇಲ್ಲ. ಆದರೆ ಇಂಗ್ಲಿಷರಿಗೆ ನಮ್ಮ ಜನರು ಸಾನುಕೂಲವುಳ್ಳವರಾಗಿದ್ದಾರೆ. ಆಗ ಜರ್ಮನರ ಕೂಡ ಯುದ್ಧವೆಂದರೆ ಪರಕೀಯರೊಡನೆ ನಡೆಯುಬಹುದಾದ ಯುದ್ಧವೆನಬಹುದು. ಈಗ ಇಂಗ್ಲಿಷರೊಡನೆ ಯುದ್ಧ ಮಾಡುವದೆಂದರೆ ನಮ್ಮವರೊಡನೆ ಯುದ್ಧ ಮಾಡಬೇಕಾದ ಪ್ರಸಂಗವಿದೆ. ಎರಡೂ ಯುದ್ಧಗಳಲ್ಲಿ ಬಹಳೇ ಅಂತರವಿದೆ. ಒಂದು ಸ್ವಲ್ಪ ಕುಳಿತುಕೋ. ನಕಾಶದ ಕಡೆಗೆ ಕಣ್ಣು ಹಾಕು. ಸುಳ್ಳೇ ಕೈಕಾಲು ನಡುಗಿಸಬೇಡ.”

ಆದರೆ ಡಾಂಟನ್‌ನು ತನ್ನ ವಿಚಾರಗಳ ತಂದ್ರಿಯಲ್ಲಿದ್ದನು. ಒಮ್ಮೆಲೆ ಅವನು ಕೂಗುತ್ತ ಮಾತಾಡತೊಡಗಿದನು. “ಸಂಕಟವು ಪಶ್ಚಿಮದ ಕಡೆಗಿದೆ. ಅದು ಪೂರ್ವದಲ್ಲಿದೆಯೆಂದು ತಿಳಿಯುವದು ಶುದ್ಧ ಮೂರ್ಖತನವಾಗಿದೆ. ರಾಬೆಸ್ಪಿಯರ್, ಇಂಗ್ಲಂಡವು ಸಮುದ್ರಮಾರ್ಗವಾಗಿ ಹಲ್ಲೆ ಮಾಡಬಹುದೆಂಬ ಮಾತನ್ನು ನಾನೂ ಒಪ್ಪುತ್ತೇನೆ. ಸ್ಪೇನ್‌ದವರು ಪರ್ವತವನ್ನು ದಾಟಿ ಬಂದು ನಮ್ಮ ಬಾಗಿಲದಲ್ಲಿ ಬಂದಿದ್ದಾರೆ. ಎಂಬದೂ ನನಗೆ ಒಪ್ಪಿತವಿದೆ. ಅವರಂತೆ ಇಟಲಿ, ಜರ್ಮನಿಗಳೂ ಬೆದರಿಕೆ ಹಾಕಿರುವದನ್ನೂ ನಾನು ಬಲ್ಲೆ. ರಶಿಯವು ಟೊಂಕ ಕಟ್ಟಿ ಸಿದ್ಧವಾಗಿ ನಿಂತಿದೆ. ನಾವು ಗಂಡಾಂತರದಲ್ಲಿದ್ದೇವೆ. ಹೊರಗೆ ಈ ಎಲ್ಲ ಚಾಂಡಾಳರು ಹೊಂಚು ಹಾಕಿ ಕುಳಿತಿದ್ದಾರೆ. ಒಳಗೆ ಈ ದೇಶದ್ರೋಹಿಗಳು ತಮ್ಮ ಸೇಡನ್ನು ತೀರಿಸುವ ಯತ್ನದಲ್ಲಿದ್ದಾರೆ. ನಮ್ಮ ಸೈನ್ಯವು ಬಹಳೇ ಕಷ್ಟವನ್ನು ಸೋಸಹತ್ತಿದೆ. ಸೈನ್ಯದಲ್ಲಿ ವ್ಯವಸ್ಥೆಯಿಲ್ಲ; ಧಾನ್ಯಸಾಮುಗ್ರಿಯಿಲ್ಲ; ನಾನೂರಷ್ಟು ಜನರಿಲ್ಲ; ಸೇನಾಪತಿ ವಂಚಿಸಿದ್ದಾನೆ ಪರಕೀಯರ ಸಾಮರ್ಥ್ಯವು ಬೆಳೆಯುತ್ತಲಿದೆ. ನಮ್ಮ ಒಂದೊಂದು ಪ್ರದೇಶವು ಅವರ ಬಾಯಿಗೆ ಬೀಳುತ್ತಲಿದೆ. ಇಂಥ ಪರಿಸ್ಥಿತಿಯಲ್ಲಿ ನಾವು ಒಂದು ವೇಳೆ ಸುಮ್ಮನೆ ಕುಳಿತುಕೊಂಡರೆ ಜನತೆಯು ನಮಗೆ ಏನಂದೀತು ? ರಾಜ್ಯಕ್ರಾಂತಿಯು ಫ್ರಾನ್ಸಕ್ಕಾಗಿರದೆ ಪರಕೀಯರ ಲಾಭಕ್ಕಾಗಿದೆ ಎಂದು ಜನರು ಅನ್ನಬಹುದು. ನಮ್ಮ ಕೊರತೆಗಳ ಮೂಲಕ ಜರ್ಮನಿಗೆ ಬಹಳ ಲಾಭವಾಗಬಹುದು. ಫ್ರೆಂಚರು ಜರ್ಮನಿಯ ಸಲ

ವಾಗಿ ತಮ್ಮ ರಾಜನನ್ನು ಕೊಂದು ಹಾಕಿದರೆಂದು ಜನರು ಅನ್ನಬಹುದು" ಎಂದಂದು ಡಾಂಟನ್‌ನು ಹೊಟ್ಟೆ ಹುಣ್ಣಾಗುವಂತೆ ನಗತೊಡಗಿದನು.

ಮಾರೆಯು ಮುಗುಳುನಗೆಯಿಂದ "ನಿಮ್ಮಿಬ್ಬರಿಗೂ ಹುಚ್ಚು ಹಿಡಿದಿದೆ. ಡಾಂಟನ್‌ನಿಗೆ ಜರ್ಮನಿಯ ಹುಚ್ಚು; ರಾಬೆಸ್ಪಿಯರನಿಗೆ ವೆಂಡಿಯ ಹುಚ್ಚು ಹತ್ತಿದೆ. ಹೀಗಾಗಿ ಇಬ್ಬರಿಗೂ ವಸ್ತುಸ್ಥಿತಿಯ ನಿಜವಾದ ಜ್ಞಾನವಿಲ್ಲ. ಪ್ಯಾರಿಸದ ಪ್ರತಿಯೊಂದು ಸಂದಿಗೊಂದಿಗಳಲ್ಲಿಯೂ ಬಂಡುಗಾರರ ತಂಡಗಳು ಸ್ಥಾಪಿಸಲ್ಪಟ್ಟಿವೆ. ಈ ತಂಡಗಳು ಎಲ್ಲ ತರದ ಸಿದ್ಧತೆಯನ್ನು ಮಾಡಿಕೊಂಡಿವೆ ಎಂಬ ಮಾತು ಊರ ತುಂಬೆಲ್ಲ ಹರಡಿದೆ. ಕೆಲಕೆಲವು ತಂಡಗಳಂತೂ ಸದ್ಯಕ್ಕಿರುವ ಸತ್ತೆಯನ್ನು ಕಿತ್ತೊಗೆಯಲು ಯಾವ ಮಾರ್ಗವನ್ನು ಹಿಡಿಯಬೇಕೆಂಬ ವಿಚಾರದಲ್ಲಿ ಮಗ್ನವಾಗಿವೆ. ಕೆಲವು, ತಂಡಗಳು ಪ್ರಜಾಪಕ್ಷದದ ವಿರುದ್ಧ ಪ್ರಚಾರ ಮಾಡಿ ರಾಜಸತ್ತೆಯನ್ನು ಹೇಗೆ ಸ್ಥಾಪಿಸಲಿಕ್ಕಾದೀತು ಎಂಬ ಹೊಂಚು ಹಾಕುತ್ತಲಿವೆ. ಸದ್ಯಕ್ಕಿರುವ ಪ್ರಬಲ ಪಕ್ಷವನ್ನು ಮುರಿಬಡಿದು ತಮ್ಮ ಪಕ್ಷದ ಅಧಿಕಾರವನ್ನು ಹೇಗೆ ಸ್ಥಾಪಿಸಬಹುದೆಂಬ ಹಂಚಿಕೆಯಲ್ಲಿಯೇ ಎಲ್ಲ ಪಕ್ಷಗಳ ಪ್ರಯತ್ನ ಅಖಂಡವಾಗಿ ಸಾಗಿದೆ. ಆದಕಾರಣ ನಾನನ್ನುವ ಮಾತುಗಳಲ್ಲಿ ಏನಾದರೂ ತಥ್ಯಾಂಶವಿದೆಯೋ ಇಲ್ಲವೋ ಎಂಬದನ್ನು ಹೇಳಿರಿ" ಎಂದು ಮಾತನಾಡಿದನು.

ಡಾಂಟನ್‌ನ ನಗು ಈಗ ನಿಂತಿತು. ಆದರೆ ಮಾರೆಯು ನಗುತ್ತಲೇ ಇದ್ದನು. "ನೀನು ನಿನ್ನ ವಂಚನೆಯನ್ನೇ ಮಾಡಿಕೊಳ್ಳುತ್ತಿರುವಿ" ಎಂದು ಡಾಂಟನ್‌ನು ಸಿಟ್ಟಿನಿಂದ ಗರ್ಜಿಸಿದನು.

"ಇರಲಿ. ನಾನು ನಿನ್ನ ಐದಿಶಿಯನ್ನೂ ಬಲ್ಲೆ. ನಾವು ನಮ್ಮ ವೇಳೆಯನ್ನು ವ್ಯರ್ಥವಾಗಿ ಕಳೆಯುತ್ತಿರುವೆವು. ನಾನು ನನ್ನ ವಂಚನೆಯನ್ನು ಮಾಡಿಕೊಳ್ಳುತ್ತಿರುವೆನೆ? ಒಳ್ಳೇದು, ನನ್ನ ಪರೀಕ್ಷೆ ನಿನಗಿನ್ನೂ ಆಗಿರುವಂತೆ ಕಾಣುವದಿಲ್ಲ. ನಾ ನೀ ಎಂದು ಡಂಗುರ ಸಾರುವವರನ್ನೇ ಮಣ್ಣು ಮುಕ್ಕಿಸಿದ್ದೇನೆ. ನಿನ್ನಂಥವನ ಪಾಡೇನು? ನನ್ನ ಮಾತು ತಪ್ಪಿರುವವೇ? ದೇಶದ್ರೋಹಿಗಳಾರೆಂಬದನ್ನು ನಾನು ಹಾಹಾ ಅನ್ನುವದರಲ್ಲಿ ಹುಡುಕಿ ತೆಗೆಯುತ್ತೇನೆ. ಅಂಥ ಬಂಡುಗಾರರ ಪುಂಡರನ್ನು ಆದಷ್ಟು ಬೇಗನೆ

ಯಮಲೋಕಕ್ಕೆ ಅಟ್ಟುವದೇ ಸ್ತುತ್ಯವಾದ ಕೆಲಸವು. ನಾನಿಂದು ಒಡ ನುಡಿಯುತ್ತಿರುವ ಭವಿಷ್ಯದ ಫಲವು ನಿಮಗೆ ಎರಡೇ ದಿನಗಳಲ್ಲಿ ನಿದ ರ್ಶನಕ್ಕೆ ಬಾರದಿರದು. ನಾನೇ ನಿಮಗೆ ಫೌಜುದಾರಿಯ ಗುನ್ಹೆಯ ಕಾಯಿದೆ ಗಳನ್ನು ಮಾಡಿಕೊಟ್ಟಿರುವೆನು. ನಾನು ಪ್ರಜಾಪಕ್ಷಕ್ಕೆ ಸಲ್ಲಿಸಿದ ಸೇವೆಯ ಇತಿಹಾಸವನ್ನು ಹೇಳತೊಡಗಿದರೆ ಎರಡು ದಿನಗಳಾದರೂ ಮುಗಿ ಯಲಿಕ್ಕಿಲ್ಲ. ಆದರಿಂದ ವಿರುದ್ಧ ಪಕ್ಷದವರು ನನ್ನನ್ನು ಯಾವಾಗ ಆಹುತಿ ತೆಗೆದುಕೊಂಡೇವೆಂದು ದಾರಿ ಕಾಯುತ್ತಿರುವರು. ನಿಮಗೆ ನನ್ನ ಮಾತು ಗಳು ಬರಷಣವಾಗುತ್ತಿದ್ದರೆ ನನ್ನ ಅಭಿಪ್ರಾಯವನ್ನೇಕೆ ಕೇಳಬೇಕಿತ್ತು? ನಾನು ನಿಮ್ಮ ಕಡೆಗೆ ಇಂದೇ ಬಂದಿರುವೆನೇ? ನನಗೆ ಇಲ್ಲಿ ಬರುವದರಿಂದ ಆಗುವ ಲಾಭವಾದರೂ ಏನು? ನಿಮಗೆ ರಾಜಕಾರಣವೆಂದರೇನೆಂಬದಾ ದರೂ ಗೊತ್ತಿದೆಯೇ? ಇನ್ನೂ ನೀವು ರಾಜಕಾರಣದಲ್ಲಿ ಹಸುಗೂಸುಗ ಳಾಗಿರುವಿರಿ. ರಾಜಕಾರಣ ಓನಾಮಾ ಬಾರದೆ ಉದ್ದೋಉದ್ದ ಭಾಷಣ ಗಳನ್ನು ಮಾತ್ರ ಬಿಗಿಯುತ್ತಿರುವಿರಿ. ನಿವಿಬ್ಬರೂ ತಪ್ಪಿರುವಿರೆಂಬದನ್ನು ನಾನು ಹೇಳಬಲ್ಲೆ. ಈಗ ನಮಗೆ ಬಂದಿರುವ ಸಂಕಟವು ಲಂಡನ್ ಇಲ್ಲವೆ ಬರ್ಲಿನ್‌ಗಳಿಂದ ಪ್ರಾಪ್ತವಾಗಿರದೆ ಇಲ್ಲಿಯದೇ ಆಗಿದೆ. ನಮ್ಮ ನಮ್ಮಲ್ಲಿ ಒಗ್ಗಟ್ಟಿರುವದಿಲ್ಲ. ನಮ್ಮ ನಮ್ಮ ವಿಚಾರಗಳೇ ಸರಿಯಾಗಿರುವವೆಂಬ ನಂಬಿಗೆಯಿಂದ ಜನತೆಯನ್ನು ನಾವು ಸೆಳೆದುಕೊಳ್ಳುವ ಎತ್ತುಗಡೆಯಲ್ಲಿ ದ್ದೇವೆ. ಹೀಗೆ ಮಾಡುವದರಿಂದ ಜನತೆಯ ಕಣ್ಣಲ್ಲಿ ಮಣ್ಣೆರಚಿದಂತಾಗಿ ದೇಶದಲ್ಲೆಲ್ಲ ಅರಾಜಕತೆಯೆದ್ದಿದೆ.

"ಅರಾಜಕತೆಯೆದ್ದಿದೆಯೇ? ಅದನ್ನೆಬ್ಬಿಸಿದವನು ನಿನ್ನ ಹೊರತು ಯಾರಿರುವರು?" ಎಂದು ಡಾಂಟನ್‌ನು ಅವನನ್ನು ಕೆಣಕಿದನು.

ಮಾರೆಯು ಅವನ ಮಾತಿಗೆ ಲಕ್ಷ್ಯಕೊಡವೆ ತನ್ನ ಭಾಷಣವನ್ನು ಮುಂದುವರಿಸಿದನು. "ರಾಬೆಸ್ಪಿಯರ್ ಮತ್ತು ಡಾಂಟನ್‌ರೇ, ಈಗ ಬಂದಿರುವ ಗಂಡಾಂತರವು ಇಲ್ಲಿಯ ಎಲ್ಲ ಸಂದಿಗೊಂದಿಗಳಿಂದಲೇ ಎದ್ದಿ ರುವದೆಂಬದನ್ನು ನಿಮ್ಮ ಲಕ್ಷ್ಯಕ್ಕೆ ಇನ್ನೊಮ್ಮೆ ಬರಲೆಂದು ಎಚ್ಚರಿಕೆ ಕೊಡುತ್ತೇನೆ ದೇಶದಲ್ಲಿ ಅರಾಜಕತೆಯನ್ನುಂಟುಮಾಡುವ ಪುಂಡ ಜನರ

ಕ್ಕೆ ನಿಮಗಿಂತಲೂ ಮೇಲೆಯೇ ಇರುವದು. ಅನ್ನದ ಅಭಾವದಿಂದಲೂ ನೋಟುಗಳ ಅತಿ ಪ್ರಸರಣದಿಂದಲೂ ಸಂಕಟವು ಹೆಚ್ಚು ಭೀಕರವಾಗುತ್ತ ನಡೆದಿದೆ. ಈ ನೋಟುಗಳ ಅತಿಪ್ರಸರಣವು ಎಷ್ಟಾಗಿದೆಯೆಂದರೆ ಬೀದಿಯಲ್ಲಿ ನೋಟು ದೊರೆತರೆ ಜನರು ಅದನ್ನು ತುಳಿದು ಚೆಲ್ಲುವರಲ್ಲದೆ ಕೈಯಿಂದ ಮುಟ್ಟದೆ ಹೋಗುವರು. ವ್ಯಾಪಾರಸ್ಥರಿಂದಲೂ, ಭಾಂಡವಲುಶಾಹಿಯುವರಿಂದಲೂ ಈ ಗಂಡಾಂತರವು ಇನ್ನೂ ಬೆಳೆಯುತ್ತಿದೆ ಎಂಬ ಲಕ್ಷ್ಯವೂ ನಿಮಗೆ ಬಾರದಿರುವದು ತೀರ ಶೋಚನೀಯವಾದ ಮಾತೇ ಸರಿ. ಮನೆಗೆ ಬೆಂಕಿ ಹತ್ತಿದೆ; ಆ ಬೆಂಕಿ ಲಂಡನ್, ಬರ್ಲಿನ್‌ಗಳಿಂದ ಬಂದಿದೆ ಎಂದು ನೀವು ಲಂಡನ್, ಬರ್ಲಿನ್‌ಗಳಿಗೆ ಹಾರಾಡುತ್ತಿರುವಿರಿ. ನಿಮ್ಮ ಸುತ್ತಲೂ ಶತ್ರುಗಳು ಸುಳಿದಾಡುತ್ತಿದ್ದಾರೆ. ನಿಮ್ಮ ಪೋಲೀಸರು, ಗುಪ್ತ ಪೋಲೀಸರುಗಳಿಂದ ಯಾವ ಕೆಲಸವೂ ಆಗಲಾರದು. ಅಲ್ಲಲ್ಲಿ ಅನೇಕ ಗುಪ್ತ ಕಾರಸ್ಥಾನಗಳು ಸಲೀಲವಾಗಿ ಸಾಗಿವೆ. ಗುಪ್ತಪೋಲೀಸರು ನಿಮಗೆ ಸುದ್ದಿ ತಿಳಿಸದೆ ಶತ್ರುಗಳಿಗೆ ತಿಳಿಸುತ್ತಿರುವರು. ಬೀದಿ ಬೀದಿಗಳಲ್ಲಿ ವರ್ತಮಾನಪತ್ರಗಳು ಅಸಂಖ್ಯವಾಗಿ ಮಾರಾಟವಾಗುತ್ತಲಿವೆ. ಜನರು ಹೊಸದಾಗಿ ಸ್ಥಾಪಿತವಾಗುವ ಸತ್ತೆಗೆ ತಲೆದೂಗುತ್ತಲಿದ್ದಾರೆ. ಇವೆಲ್ಲವುಗಳ ಬಗ್ಗೆ ನೀವು ಕಿವಿಯಲ್ಲಿ ತುಳಸೀಪತ್ರಿಯನ್ನು ಹಾಕಿಕೊಂಡು ಕುಳಿತಿರುವಿರಿ. ಜನರು ಆಹಾರಕ್ಕಾಗಿ ಒದ್ದಾಡುತ್ತಿದ್ದು, ಶಾಂತತೆಯ ಕಾಲವು ಎಂದು ಬಂದೀತೆಂದು ಬಾಯಿ ಬಾಯಿ ಬಿಡುತ್ತಿದ್ದಾರೆ ನೀವು ಮಾತ್ರ ಕೋಣೆಯ ಬಾಗಿಲವಿಕ್ಕಿಕೊಂಡು ಹಂಚಿಕೆ ಹಾಕುತ್ತ ಕಾಲಹರಣ ನಡೆಸಿರುವಿರಿ. ಇಲ್ಲಿ ನಡೆದಿರುವದು ಯಾರಿಗೂ ತಿಳಿಯದೆಂದು ನೀವು ಕಲ್ಪಿಸಿರುವಿರಿ. ಅದು ಶುದ್ಧ ತಪ್ಪುತಿಳಿವಳಿಕೆ. ಯಾಕೆಂದರೆ ಗೋಡೆಗಳಿಗೂ ಕಿವಿಯಿರುತ್ತವೆ. ನಿಮ್ಮ ಬಾಯಿಂದ ಹೊರಬರುವ ಪ್ರತಿಯೊಂದು ಅಕ್ಷರವೂ ಎಲ್ಲಕಡೆಗೂ ಹಬ್ಬುತ್ತದೆ. ಪ್ರಜಾನಿಷ್ಠ ಜನರು ಬೀದಿಯಲ್ಲಿ ಬರಿಗಾಲಿನಿಂದ ಪಿರಿಪಿರಿ ತಿರುಗುತ್ತಾರೆ. ರಾಜನಿಷ್ಠ ಜನರು ಮೀಸೆಯ ಮೇಲೆ ಕೈಹಾಕುತ್ತ ಉತ್ಸಾಹದಿಂದ ಮೆರೆದಾಡುತ್ತಾರೆ. ನಿನ್ನೆ ಮೊನ್ನೆ ಬಂಧಿಸಲ್ಪಟ್ಟ ಸರದಾರ, ಜಮೀನದಾರರು ಮುಕ್ತರಾದ ಗೌಡಬಂಗಾಲವು

ಯಾರಿಗೆ ಗೊತ್ತಿದೆ? ತೋಫುಗಳ ಬಂಡೆಗಳಿಗೆ ಹೊಡಿದ ಜಾತೀಯ ಕುದುರೆಗಳು ಬೀದಿಯ ಬೂದಿಯಲ್ಲಿ ಹೊರಳಾಡುತ್ತ ಬಿದ್ದುಕೊಂಡಿವೆ. ನಾಟಕ ಗೃಹಗಳಲ್ಲಿ ನಿಮ್ಮ ಅಪಪ್ರಚಾರವ ಅಶ್ಲೀಲ ಪ್ರದರ್ಶನಗಳು ಸಾಗುತ್ತಲಿವೆ. ನಿಮ್ಮಿಬ್ಬರ ನೆತ್ತರ ಕುಡಿಯಲು ಕತ್ತಿಗಳು ತೂರಾಡುತ್ತಲಿರುವ ದೃಶ್ಯವು ಕಾಣುಬರುತ್ತದೆ."

"ಶಹಬಾಶ್ ಮಾರಿಯೇ" ಎಂದು ಡಾಂಟನ್‌ನು ಚಪ್ಪಾಳೆ ತಟ್ಟಿದನು ರಾಬೆಸ್ಪಿಯರನು ನಶಾಶದಕಡೆಗೇ ನೋಡುತ್ತಿದ್ದನು. ನಮಗೆ ಸರ್ವಾಧಿಕಾರಿಯೊಬ್ಬನು ಬೇಕೇ ಬೇಕು" ಎಂದು ಮಾರೆಯು ತಿಳಿಸಿದನು.

"ನಿನ್ನ ಮಾತಿನ ಅರ್ಥವಾಯಿತು. ಸರ್ವಾಧಿಕಾರಿ ನೀನಾಗುವಿಯಾ ಅಥವಾ ನಾನಾಗಲೋ" ಎಂದು ರಾಬೆಸ್ಪಿಯರನು ಅವನನ್ನು ಕೇಳಿದನು

ಇದೇ ಮಾತನ್ನೇ ಮಾರಿಯು ಉಚ್ಚರಿಸುವದನ್ನು ಡಾಂಟನ್‌ನು ಕೇಳಿ ಸಿಟ್ಟಿನಿಂದ "ಸರ್ವಾಧಿಕಾರಿ ಬೇಕೇ? ಬೇಕಾದರೆ ನನ್ನನ್ನು ನಿಯಮಿಸಿರಿ. ಹೇಗೆ ಮಾಡುತ್ತೇನೆಂಬದನ್ನು ನೋಡಿರಿ" ಎಂದು ಚೀರಿದನು.

"ನಾವು ನಮ್ಮಲ್ಲಿ ಐಕ್ಯಮತದಿಂದ ನಡೆಯೋಣ. ಪ್ರಸಂಗ ಎಂಥದಿದೆ ಎಂಬುದರ ಅರಿವು ನಮಗಿದೆ. ನಿಮ್ಮಿಬ್ಬರ ಮಾತುಗಳಲ್ಲಿ ಸತ್ಯಾಂಶವಿಲ್ಲದೆ ಇಲ್ಲ. ಆದರೂ ನನ್ನ ಮಾತು ಪೂರ್ಣ ಸತ್ಯವಾಗಿದೆ. ಸುತ್ತೂಕಡೆಯಿಂದಲೂ ಶತ್ರುಗಳು ಸಿದ್ಧರಾಗಿರುವ ಮಾತೇನೂ ಸುಳ್ಳಲ್ಲ. ಅವರೆಲ್ಲರೂ ಪ್ರಜಾಪಕ್ಷವನ್ನು ಬಗ್ಗುಬಡಿಯುವದರಲ್ಲಿ ಮಗ್ನರಾಗಿದ್ದಾರೆ. ನಾವೆಲ್ಲರೂ ಐಕ್ಯರಾಗುವದರಲ್ಲಿಯೇ ನಮ್ಮ ಕಲ್ಯಾಣವಿದೆ. ವೇಳೆಗಳೆಯುವದರಲ್ಲಿ ಅರ್ಥವಿಲ್ಲ. ನನ್ನ ಮಾತು ಒಬ್ಬ ಸರ್ವಾಧಿಕಾರಿಯನ್ನು ನಿಯಮಿಸಿರಿ. ನಾವು ಮೂವರೂ ಕ್ರಾಂತಿಯ ತ್ರಿಮೂರ್ತಿಗಳಾಗಿದ್ದೇವೆ. ಆ ಅಧಿಕಾರವನ್ನು ನಾವೇ ತೆಗೆದುಕೊಳ್ಳೋಣ." ಎಂದು ಮಾರಿಯು ಸಾರಿದನು. ಸ್ವಲ್ಪ ಹೊತ್ತು ಶಾಂತತೆ ನೆಲೆಸಿತು. ಮುಂದೆ ಮಾತಿಗೆ ಮಾತು ಬೆಳೆದು ಅವರವರಲ್ಲಿ ವಾಗ್ಯುದ್ಧವೇ ಆರಂಭವಾಯಿತು.

"ನಾನು ಆ ಬೈರಾಗಿಗೆ ಅಂದ ಮಾತುಗಳು ನಿನಗೆ ಹೇಗೆ ಗೊತ್ತಾದವು?"

"ಅದು ನನ್ನ ಉದ್ಯೋಗವೇ ಆಗಿದೆ. ನೀವಿಬ್ಬರೂ ಆಡುವ ಮಾತುಗಳೂ, ಮಾಡುವ ಕೆಲಸಗಳೂ ನನಗೆ ತಿಳಿಯುತ್ತವೆ. ಅಷ್ಟೇ ಏಕೆ—ಈ ಪ್ಯಾರಿಸದಲ್ಲಿ ಯಾರು ಏನು ಮಾಡುತ್ತಾರೆ, ಏನೇನು ಮಾತಾಡುತ್ತಾರೆ ಎಂಬುದೆಲ್ಲವೂ ನನಗೆ ಗೊತ್ತೇ ಇರುತ್ತದೆ." ಎಂದಂದು ಬಿರಿಗಣ್ಣುಗಳಿಂದ ಡಾಂಟನ್‌ನನ್ನು ನೋಡುತ್ತ, ಹಿಂದೆ ಸಂಭವಿಸಿದ ಅನೇಕ ಸಂಗತಿಗಳ ಪುರೋಚಿಯನ್ನು ಮರ್ಮಕ್ಕೆ ತಗಲುವಂತೆ ಹೇಳತೊಡಗಿದನು. ಅವನು ರಾಬೆಸ್ಪಿಯರನ ಉಡುಪುತೊಡಪುಗಳಬಗ್ಗೆ, ಅವನ ಕೂತೇಳು ರೀತಿಯ ಬಗ್ಗೆ, ಅವನ ರೀತಿಯ ಬಗ್ಗೆ ಕಡುತರವಾದ ಟೀಕೆಯ ಮಳೆಗರೆದನು. ಪರಸ್ಪರರಲ್ಲಿ ಮಾತುಗಳು ಬಲು ತೀಕ್ಷ್ಣವಾಗಿ ಒಬ್ಬರಿಗೊಬ್ಬರು ಕೈಗೆ ಕೈ ಹತ್ತಿ ಎಲ್ಲಿ ಹೊಡೆದಾಡುವರೋ ಎನ್ನುವಷ್ಟು ಪ್ರಸಂಗವು ಹದಗೆಟ್ಟಿತು. ಅವರಿಬ್ಬರ ಈ ಮುಷ್ಟಿಯುದ್ಧದಲ್ಲಿ ಡಾಂಟನ್‌ನು ನಡುವೆ ಬಂದು ಅವರನ್ನು ಶಾಂತಗೊಳಿಸಲು ಮಾತನಾಡತೊಡಗಿದನು. ಆ ರಭಸದಲ್ಲಿ ಇವನ ಮಾತುಗಳು ಬೆಂಕಿಯಲ್ಲಿ ಎಣ್ಣೆ ಸುರುವಿದಂತಾಯಿತು. ಮಾರೆಯು ಅವನ ಮ್ಯೆಮೇಲೆ ಕಿಸಕ್ಕನೆ ಹೋಗಿ "ನಡುವೆ ಮಾತಾಡುವ ಅಧಿಕ ಪ್ರಸಂಗವನ್ನು ಮಾಡೆಂದು ಯಾರು ನಿನಗೆ ಹೇಳಿದರು?" ಎಂದು ಕೇಳಿದನು.

"ಬಡಿದಾಡಿ ತಲೆಯೊಡೆದುಕೊಳ್ಳಬಾರದೆಂದು ಮಾತಾಡಿದೆನು. ಸುತ್ತೂಕಡೆಗೆ ಯುದ್ಧವಾರಂಭವಾಗಿದೆ. ನಿಮ್ಮಲ್ಲಿಯೇ ಯುದ್ಧವಾಗಬಾರದೆಂದು ನನ್ನಿಚ್ಛೆ. ನಾನೇ ಈ ಕ್ರಾಂತಿಯನ್ನುಂಟುಮಾಡಿದೆನು; ಅದರ ಕೊನೆಯೂ ನನ್ನ ಕಣ್ಮುಂದೆ ಆಗಬಾರದೆಂದು ನನಗೆನಿಸಿ ನಡುವೆ ಬಂದೆನು. ತಪ್ಪೇನು?"

"ನೀನು ನಿನ್ನ ಪಾಲನ್ನು ತೆಗೆದುಕೊಳ್ಳುವ ಜಾಣತನವನ್ನು ತೋರಿಸಲು ಬಂದಿರುವಿಯಾ?"

“ ಏನು ಬೊಗಳುವಿಯೋ ನೀನು? ನಾನು ನನ್ನ ಪಾಲನ್ನು ತೆಗೆದು ಕೊಳ್ಳುವದೆಂಬದನ್ನು ನೋಡುವ ಇಚ್ಛೆ ನಿನಗಿದ್ದರೆ ಸತ್ತು ಸ್ವರ್ಗಸೇರಿದ ವರನ್ನು ಹೋಗಿ ಕೇಳು ಅಂವರೆ ಅವರು ನಿನಗೆ ಹೇಳುವರು ” ಎಂಬ ದನ್ನು ಕೇಳಿ ಇಬ್ಬರೂ ನೆನೆನೆನಿಸಿಕೊಂಡು ಒಬ್ಬರೊಬ್ಬರ ಮೇಲೆ ಆರೋಪಗಳ ಹೊರೆಯನ್ನು ತೀರಿಸಿಕೊಳ್ಳತೊಡಗಿದರು. ರಾಬೆಸ್ಪಿಯರನು ತನ್ನ ಕೈಯುಗರನ್ನು ಕಡಿಯುತ್ತ ಸುಮ್ಮನೆ ಕುಳಿತಿದ್ದನು. ನಗುವದು, ಕೆಲೆಯುವದು ಅವನ ಜನ್ಮದಲ್ಲಿಯೋ ಬರೆದಿದ್ದಿಲ್ಲ. ಇವನ ಈ ಸ್ವಭಾ ವವು ಇಬ್ಬರಿಗೂ ಸೇರುತ್ತಿದ್ದಿಲ್ಲ.

ಇನ್ನೇನು ಮಾತಿನ ಯುದ್ಧ ನಿಂತು, ಮಲ್ಲಯುದ್ಧಕ್ಕೆ ಬಂದಿತು. ಮಾರಿಯ ಬಾಯಿ ಒಂದೇ ಸವನೆ ಒಟಗುಡುತ್ತಿತ್ತು. ಡಾಂಟನ್‌ಸ ದಿಸ ಗಳು ಮುಗಿದವು; ರಾಬೆಸ್ಪಿಯರನು ಅವ್ವಾಳಿಯಿರುವನು. ನಿಮ್ಮಿಬ್ಬ ರನ್ನೂ ಮಾರಿಗೆ ಬಲಿಕೊಡುವೆನು ಎಂದು ಮೊದಲಾಗಿ ಅವನ ಬಾಯ್ಪ್ರ ಸಾದವು ನಡದೇ ಇತ್ತು. ಸ್ವಲ್ಪ ಹೊತ್ತಿನ ನಂತರ ಅವೇಕೋ ಏನೋ ಎಲ್ಲವೂ ಸ್ತಬ್ಧವಾಯಿತು. ಮೂವರೂ ಗಪ್ಪುಚಿಪ್ಪಾಗಿ ಕುಳಿತರು. ರಾಬೆಸ್ಪಿಯರನ ಮುಖವು ಬಿಳುಪೇರಿತ್ತು ಡಾಂಟನ್‌ನ ಮುಖವು ಕೆಂಜಗವಾಗಿತ್ತು. ಇಬ್ಬರೂ ಥರಥರ ನಡುಗುತ್ತಿದ್ದರು. ಮಾರಿಯ ಉರಿ ಗಣ್ಣುಗಳು ಶಾಂತವಾದವು. ಡಾಂಟನ್‌ನಿಗೆ ತನ್ನ ಮಾತು ಬಿದ್ದುಹೋಯಿ ತೆಂಬದು ಪೂರ್ಣವಾಗಿ ಗೊತ್ತಾಗಿದ್ದರೂ ಅದನ್ನೊಪ್ಪಿಕೊಳ್ಳಲು ಅವನು ಸಿದ್ಧನಿರಲಿಲ್ಲ “ ಈ ಮಾರೆಯು ಒಂದೇ ಸವನೆ ಬಡಬಡಿಸುತ್ತಾನೆ. ಮಾತಿನ ಮಲ್ಲಗಾರಿಕೆಯಿಂದ ಅವನು ಎಲ್ಲರ ಬಾಯಿ ಬಡಿದು ತನ್ನದನ್ನೆ ಸಾಧಿಸಿಕೊಳ್ಳುವ ಗತ್ತುಗಾರಿಕೆ ಅವನಿಗೆ ಚನ್ನಾಗಿ ಸಾಧಿಸಿದೆ ” ಎಂದು ಡಾಂಟನ್‌ನು ತನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸಿದನು.

“ ಛೀ, ಇನ್ನು ಮುಂದೆ ನಾನು ನಿಮ್ಮಿಬ್ಬರೊಡನೆ ಮಾತನಾಡು ವದೇ ಇಲ್ಲ. ಡಾಂಟನ್, ನಿನಗೆ ಒಳಿತಾಗುವ ಮಾತನ್ನು ಹೇಳುತ್ತೇನೆ ಕೇಳು. ನೀನು ಈಗ ಪ್ರೇಮಪಾಶದಲ್ಲಿ ಸಿಕ್ಕಿರುತ್ತೀ. ಆದಕಾರಣ ಮದುವೆ ಮಾಡಿಕೋ. ಈ ರಾಜಕಾರಣವನ್ನು ಬಿಟ್ಟುಬಿಡು” ಎಂದು ಮಾರೆಯು

ಅವನಿಗೆ ಹೇಳಿ, ಬಾಗಿಲ ಕಡೆಗೆ ತೆರಳಿ, ಅವರಿಬ್ಬರಿಗೂ ಜೀವದ ಹೆದರಿಕೆ ತೋರಿದನು. ಅದನ್ನು ಕಂಡು ಅವರಿಬ್ಬರೂ ಹೌಹಾರಿಹೋದರು.

ಇಷ್ಟರೊಗೆ ಒಳಗೊಬ್ಬನು ಬಂದು "ಮಾರೆಯೇ, ನೀನು ತಪ್ಪಿ ನಡೆದುಕೊಳ್ಳುತ್ತೀ." ಎನ್ನಲಾಗಿ ಎಲ್ಲರ ಕಣ್ಣುಗಳು ಬಾಗಿಲ ಕಡೆಗೆ ಹೊರಳಿದವು. ಬಂದವನು ಸಿಮೋರೆಡಿನ್‌ನು ಎಂದು ಕಂಡುಬಂದಿತು. "ನೀನು ತಪ್ಪಿ ನಡೆದುಕೊಳ್ಳುತ್ತೀ" ಎಂದು ಮತ್ತೊಮ್ಮೆ ಅವನು ಮಾತನಾಡಿದನು. ಮಾರೆಯ ಮೋರೆಯು ಕಪ್ಪಿಟ್ಟಿತು.

"ನಿನ್ನ ಉಪಯೋಗವು ಯಾವಾಗಾದರೊಮ್ಮೆ ಆಗುವದು; ಆದರೆ ಇವರಿಬ್ಬರ ಆವಶ್ಯಕತೆಯಿದೆ ಅವರನ್ನೇಕೆ ಬೆದರಿಸುತ್ತೀ? ಗೆಳೆಯರೇ, ಒಂದಾಗಿರಿ. ಜನರು ನಿಮ್ಮ ಒಕ್ಕಟ್ಟಿನ ದಾರಿಯನ್ನೇ ಕಾಯುತ್ತಿರುವರು" ಎಂದು ಸಿಮೋರೆಡಿನ್‌ನು ಹೇಳಿದನು.

ಸಿಮೋರೆಡಿನ್‌ನ ಭಾಷಣದಿಂದ ಎಲ್ಲರ ದ್ವೇಷಾಗ್ನಿಯು ನಂದಿತು. ಮನೆಮನೆಯಲ್ಲಿಯ ಜನರಲ್ಲಿ ಜಗಳ ನಡೆದಾಗ ಮೂರನೆಯವರು ಬಂದಾಗ ಶಾಂತತೆಯುಂಟಾಗುವಂತೆ ಇಲ್ಲಿಯೂ ಎಲ್ಲವೂ ಸ್ತಬ್ಧವಾಯಿತು.

ಸಿಮೋರೆಡಿನ್‌ನು ಮೇಜಿನ ಹತ್ತಿರ ಬಂದು ಕುಳಿತ ಮೇಲೆ ರಾಬೆಸ್ಪಿಯರನು "ನೀವು ಒಳಗೆ ಹೇಗೆ ಬಂದಿರಿ?" ಎಂದು ಅವನನ್ನು ವಿಚಾರಿಸಿದನು.

ಮಾರೆಯು ಶರಣಾಗತನಾದ ಮನುಷ್ಯನು ಎಷ್ಟು ನಮ್ರನಾಗಬೇಕೋ ಅಷ್ಟು ನಮ್ರನಾಗಿ, ದೀನ ಸ್ವರದಿಂದ "ಅವರು ಇವೇಶಿಯ ಸಭೆಯ ಸದಸ್ಯರಿರುವದರಿಂದ" ಎಂದನು. ಮಾರೆಯು ಯಾವುದಕ್ಕೂ ಹೆದರದಿದ್ದರೂ ಈ ಇವೇಶಿ ಸಭೆಗೆ ಬಲು ಬೆದರುತ್ತಿದ್ದನು.

"ಏನೂ ಪರವಾ ಇಲ್ಲ. ಯೋಗ್ಯ ವೇಳೆಗೇ ಬಂದಿದ್ದಾರೆ. ನಾವು ನಮ್ಮ ವಾದ-ವಿವಾದವನ್ನು ಅವರ ಮುಂದೆ ಮಂಡಿಸೋಣ" ಎಂದು ಡಾಂಟಿಯು ತನ್ನ ಅಭಿಪ್ರಾಯ ವ್ಯಕ್ತಪಡಿಸಿದನು.

"ಏನು ನಡೆದಿತ್ತು?"

" ವೆಂಡಿಯು ಬಗ್ಗೆ ಮಾತಾಡುತ್ತಿದ್ದೆವು. " ರಾಬೆಸ್ಪಿಯರನೆಂದನು.

" ವೆಂಡಿಯು ವಿಷಯವಾಗಿಯೆ ! ವೆಂಡಿಯೆಂದರೆ ಗಂಡಾಂತರದ ಮಾತಾಗಿದೆ. ರಾಜ್ಯಕ್ರಾಂತಿಯು ಕೊನೆಯಾಗುವದಾದರೂ ಈ ವೆಂಡಿಯ ಮೂಲಕವೇ ಆಗುವವರಲ್ಲಿ ಸಂಶಯವಿಲ್ಲ. ವೆಂಡಿಯ ಭಯ ಒಂದಿದ್ದರೆ ಜರ್ಮನಿಯದು ಹತ್ತರಷ್ಟಿದೆ. ಫ್ರಾನ್ಸವು ಬದುಕಬೇಕಾಗಿದ್ದರೆ ವೆಂಡಿಯನ್ನು ಹಿಂಡಿ ಹಿಪ್ಪೆಯನ್ನು ಮಾಡಲೇಬೇಕು. " ಎಂದು ಸಿಮೋರೆಡಿನ್‌ನು ಹೇಳಿದನು.

ಈ ಭಾಷಣದಿಂದ ರಾಬೆಸ್ಪಿಯರನ ಮುಖವು ಪ್ರಫುಲ್ಲಿತವಾಯಿತು. ಇಬ್ಬರಲ್ಲಿಯೂ ಸ್ನೇಹವಂಕುರಿಸಿತು. ಆದರೂ ತಾವು ಒಮ್ಮೆ ಧರ್ಮಗುರು ವಾಗಿದ್ದಿರಾ ಎಂಬ ಪ್ರಶ್ನೆಯನ್ನು ಕೇಳದೆ ಇರಲಿಕ್ಕಾಗಲಿಲ್ಲ. ಯಾಕೆಂದರೆ ಸಿಮೋರೆಡಿನ್‌ನ ಮುಖದ ಮೇಲೆ ಧರ್ಮಗುರುತ್ವದ ಲಕ್ಷಣಗಳು ಇನ್ನೂ ಜೀವಂತವಾಗಿದ್ದವು.

" ಅಹುದು; ಧರ್ಮಗುರುವಾಗಿದ್ದೆನು." ಎಂದು ಅವನು ಹೇಳಿದನು.

" ಅದೇನು ದೊಡ್ಡದು! ಉಳಿದವರಂತೆಯೇ ಅವನ ಉಪಯೋಗವೂ ಆಗುತ್ತದೆ. ಕ್ರಾಂತಿಯುಗದಲ್ಲಿ ದೇವಾಲಯದೊಳಗಿನ ಗಂಟೆಗಳನ್ನು ಕರ ಗಿಸಿ ತೋಫಿನ ಗುಂಡು ಮಾಡುವಂತೆ ಧಾರ್ಮಿಕ ಜನರಿಗೆ ಗೃಹಸ್ಥಾಶ್ರಮದ ದೀಕ್ಷೆಯನ್ನು ತೆಗೆದುಕೊಳ್ಳಬೇಕಾಗುತ್ತದೆ " ಎಂದು ಡಾಂಟನ್‌ನು ಬಾಯಿ ಬಿಟ್ಟನು. ರಾಬೆಸ್ಪಿಯರನು " ನಡೆಯಿರಿ, ವೆಂಡಿಯ ಕಡೆಗೆ " ಎಂದನು.

" ಸಿಮೋರೆಡಿನ್‌ನು " ಅಲ್ಲಿ ನಡೆದದ್ದಾದರೂ ಏನು " ಎಂದನು.

" ಅಲ್ಲಿಯ ಜನರಿಗೆ ಒಮ್ಮೆ ಸೇನಾಪತಿಯು ದೊರಕಿದನು. ಅದ ರಿಂದ ಅಲ್ಲಿಯ ಜನರಿಂದ ಬೇಕಾದಷ್ಟು ಉಪಟಳವೇಳಬಹುದು " ಎಂದು ರಾಬೆಸ್ಪಿಯರನು ನುಡಿದನು.

" ಆ ಸೇನಾಪತಿ ಯಾರು ? " ಎಂದು ಸಿಮೋರೆಡಿನ್‌ನೆನ್ನಲಾಗಿ " ಅವನ ಹೆಸರು ಲ್ಯಾಂಟ್‌ನೆಕ್. ಭಯಂಕರ ಮನುಷ್ಯನು ! ಅವನು ಪಟ್ಟಣಗಳನ್ನೇನು ಸುಡುತ್ತಾನೆ ! ಗಾಯಾಳುಗಳನ್ನು ಗುಂಡು ಹೊಡೆದು ಕೊಂದುಹಾಕುತ್ತಾನೇನು ! ಕೈದಿಗಳನ್ನು ಯಮಪುರಿಗೆ ಅಟ್ಟುತ್ತಾನೇನು !

ಹೆಂಗಸರ ಜೀವವನ್ನೇನು ತೆಗೆದುಕೊಳ್ಳುತ್ತಾನೆ! '' ಎಂದು ರಾಬೆಸ್ಪಿಯರನು ಲ್ಯಾಂಟ್‌ನೆಕ್‌ನ ಇತಿಹಾಸವನ್ನೆ ವರ್ಣಿಸಿದನು.

" ನನಗೆ ಅವನ ಪರಿಚಯವಿದೆ ಅವನೊಬ್ಬ ಹಟಮಾರಿ. ಈಗ ಅವನು ಸೇನಾಪತಿಯಾಗಿರುವನೇ ? ಏನೇ ಇದ್ದರೂ ಅವನೊಬ್ಬ ಒಳ್ಳೇ ಪ್ರತಿಸ್ಪರ್ಧಿಯಾಗಿದ್ದಾನೆ " ಎಂದು ಸಿಮೋರೆಡಿನ್‌ನೆಂದನು.

" ಇಬ್ಬರು ಹೆಂಗಸರನ್ನು ಗುಂಡಿಕ್ಕಿ ಕೊಂದನಂತೆ. ಅವರಿಬ್ಬರಲ್ಲಿ ಒಬ್ಬಳಿಗೆ ಮೂರು ಮಕ್ಕಳಿದ್ದುವಂತೆ. ಆ ಮಗುಗಳ ಗತಿಯೇನಾಯಿತೋ ದೇವರಿಗೇ ಗೊತ್ತು ! ಆದರೂ ಅವನು ಶೂರ ಸೇನಾಪತಿಯಾಗಿದ್ದು ಅವನಿಗೆ ಯುದ್ಧಕಲೆಯಲ್ಲಿ ಸಾಕಷ್ಟು ಗತಿಯಿದೆ. "

" ಅವನಂಥ ಕಟುಕರವನಿಗೆ ಸರಿಯಾದವರು ಯಾರೂ ಇಲ್ಲೆಂದು ನನ್ನ ಸೈನಿಕರೆನ್ನುತ್ತಿದ್ದರು. " ಎಂದು ಸಿಮೋರೆಡಿನ್‌ನು ಮಾತು ಮುಗಿಸಿದನು.

ರಾಬೆಸ್ಪಿಯರನು ಸ್ವಲ್ಪ ಹೊತ್ತು ವಿಚಾರಮಗ್ನನಾದನು. ವಿಚಾರ ಗಳತಂದ್ರಿಯು ಕಡಮೆಯಾದಮೇಲೆ " ಇಂಥ ಮನುಷ್ಯನು ವೆಂಡಿಯಲ್ಲಿ ರುತ್ತಾನೆ ! " ಎಂದನು.

" ಅಲ್ಲಿ ಅವನು ಬಂದು ಎಷ್ಟು ದಿನಗಳಾದವು ? "

" ಸುಮಾರಾಗಿ ಮೂರು ವಾರಗಳಾಗಿರಬೇಕು. "

" ಅವನನ್ನು ಬಂಧಿಸುವ ವ್ಯವಸ್ಥೆಯನ್ನು ಮಾಡಲೇಬೇಕು. "

" ಈಗಾಗಲೇ ಮಾಡಿಯೇ ಬಿಟ್ಟಿದೆ. ಹಿಡಿದು ಕೊಟ್ಟವರಿಗೆ ಬಹು ಮಾನವಿಡಲಾಗಿದೆ. "

" ಅವನ ಶಿರಚ್ಛೇದ ಮಾಡಲೇಬೇಕು. "

" ಆ ಕೆಲಸ ನಿಮ್ಮಕಡೆಯಿಂದಾಗಬೇಕು. " ನೀವು ವೆಂಡಿಯ ಕಾಡಿಗೆ ಹೋಗಬೇಕು. ನಾವೆಲ್ಲರೂ ನಿಮ್ಮನ್ನೇ ನಿಯಮಿಸಬೇಕೆಂದಿದ್ದೇವೆ. "

" ಸರಿಯಾಯಿತು. ನಾನು ಈ ಕೆಲಸವನ್ನು ಸಂತೋಷದಿಂದ ಪಾರುಗಾಣಿಸುತ್ತೇನೆ. "

ರಾಬೆಸ್ಪಿಯರನು ಚಾಣಾಕ್ಷನಾದ ಮುತ್ಸದ್ದಿಯಾದ್ದರಿಂದ ಮನುಷ್ಯರ ಗುಣಪರೀಕ್ಷೆಯನ್ನು ಚನ್ನಾಗಿ ಮಾಡಬಲ್ಲವನಾಗಿದ್ದನು. ಅವನು ಕಾಗದ ವನ್ನು ತೆಗೆದುಕೊಂಡು ಬರೆಯುತೊಡಗಿದನು. ಸಿಮೋರೆಡಿನ್‌ನು "ಲ್ಯಾಂಟ್‌ನೆಕ್‌ನು ದೊಡ್ಡ ಮನುಷ್ಯನು. ನಾನೂ ಅವನಷ್ಟೇ ಕ್ರೂರ ಕರ್ಮಿಯಾಗಬೇಕಾಗಿದೆ. ನನ್ನ ದೇಹದಲ್ಲಿ ನೆತ್ತರದ ಕೊನೆಯ ಹನಿಯಿರು ವವರೆಗೆ ನಾನು ಅವನೊಡನೆ ಹೋರಾಡುವೆನು. ಪರಮೇಶ್ವರ ಕೃಪೆ ಯಿದ್ದರೆ ಮಾತ್ರ ಪ್ರಜಾಪಕ್ಷಕ್ಕೆ ಜಯವುಂಟಾಗಿ, ನಾವು ಕೈಕೊಂಡ ಪವಿತ್ರ ಕಾರ್ಯವು ಚಿರಸ್ಥಾಯಿಯಾಗಿ ಉಳಿಯುವದು." ಎಂದು ಉದ್ಗಾರ ತೆಗೆದನು.

"ದಿವಸ ದಿವಸಕ್ಕೂ ದೇವರು ಮುದುಕನಾಗುತ್ತಾ ನಡೆದಿದ್ದಾನೆ." ಎಂದು ಡಾಂಟನ್‌ನೆಂದನು.

"ಏನೇ ಇದ್ದರೂ ಅವನಲ್ಲಿ ನನಗೆ ಪೂರ್ಣ ವಿಶ್ವಾಸವಿರುತ್ತದೆ" ಎಂದು ಸಿಮೋರೆಡಿನ್‌ನು ಉತ್ತರವಿತ್ತು, ತಲೆಯನ್ನು ತುರಿಸಿಕೊಳ್ಳುತ್ತ "ನನ್ನನ್ನು ಎಲ್ಲಿ ನಿಯಮಿಸಿದ್ದೀರಿ" ಎಂದು ವಿಚಾರಿಸಿದನು.

"ಲ್ಯಾಂಟ್‌ನೆಕ್‌ನ ವಿರುದ್ಧ ಹೋರಾಡಲು ಕಳಿಸಿದ ಸೈನ್ಯದ ಸೇನಾಪತಿಯೊಡನೆ ನೀವಿರಬೇಕು. ಆ ಸೇನಾಪತಿಯು ಸರದಾರರ ಮನೆ ತನದವನಿರುವನು. ಅದನ್ನು ಮಾತ್ರ ತಾವು ಪೂರ್ಣವಾಗಿ ಲಕ್ಷ್ಯದಲ್ಲಿಡ ತಕ್ಕದ್ದು."

"ಅದೇನು ದೊಡ್ಡ ಕೆಲಸ? ಸರದಾರನಿರುವದರಿಂದ ಆಗುವದೇನಿದೆ? ಈ ಸರದಾರನು ಮತ್ತು ಧರ್ಮಗುರುವು ಒಂದೇ ಮಾಲೆಯೊಳಗಿನ ಮಣಿ ಗಳೇ ಅಲ್ಲವೇ? ನಮ್ಮ ಈ ಪ್ರಜಾಪಕ್ಷದಲ್ಲಿ ಎಷ್ಟೋ ಶ್ರೀಮಂತ ಸರದಾರರು ಸೇರಿಕೊಂಡಿದ್ದಾರೆ." ಎಂದು ಡಾಂಟ್‌ನ್‌ನು ತನ್ನ ಮತವನ್ನು ಪ್ರದರ್ಶಿಸಿದನು.

"ಈಗೇನಾಗಿದೆ-ಇದೆಲ್ಲವೂ ಒಳ್ಳೆಯದೇ ಆಗಿದೆ. ಈ ಡಾಂಟನ್‌ನು ಈ ಸರದಾರರೆಲ್ಲರೂ ದೇಶದ್ರೋಹಿಗಳಾಗಿರುವರು" ಎಂದು ನಿನ್ನೆ ಅನ್ನು ತ್ತಿದ್ದನೆಂದು ಮಾರೆಯು ಶ್ರುತಪಡಿಸಿದನು.

" ಗೆಳೆಯರೇ, ನೀವು ಈ ಸರದಾರರಲ್ಲಿ ವಿಶ್ವಾಸವನ್ನಿಟ್ಟದ್ದು ಒಳ್ಳೆಯದೆ ಆಗಿದೆ. ಆದರೆ ಜನತೆಯಲ್ಲಿ ಮಾತ್ರ ಆ ವಿಶ್ವಾಸ ಉಳಿದಂತಿಲ್ಲ. ಅದರಲ್ಲೂ ನನ್ನಂಥ ಧಾರ್ಮಿಕ ಮನುಷ್ಯನನ್ನು ಈ ಸರದಾರರ ಮೇಲೆ ಕಣ್ಣಿಡುವ ಹೊಣೆಗಾರಿಕೆ ಹೊರಿಸಿದ್ದರಿಂದ ಈ ಕೆಲಸವು ಬಹಳೇ ಕಠಿಣವೆನಿಸತೊಡಗಿದೆ. ನಾನೀಗ ದೃಢಮನಸ್ಕನೂ, ಕಠೋರವೃತ್ತಿಯುವನೂ ಆಗಲೇಬೇಕಾಗಿದೆ. " ಎಂದು ಸಿಮೋರೆಡಿನ್‌ನು ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸಿದನು.

" ನೀವನ್ನುವದು ಅಕ್ಷರಶಃ ನಿಜವಿದೆ. ಆ ಸರದಾರನು ಇನ್ನೂ ತರಣನು. ನೀವು ಅವನಿಗಿಂತಲೂ ಹಿರಿಯರಾದವರು. ಆದ್ದರಿಂದ ನಿಮ್ಮ ವರ್ಚಸ್ಸು ಅವನ ಮೇಲೆ ಬಿದ್ದೇ ಬೀಳುವದು. ನೀವು ಅವನ ಮನದಿಂಗಿತವನ್ನರಿತುಕೊಂಡು ಅವನಿಗೆ ಮಾರ್ಗ ತೋರಿಸಿಕೊಡಬೇಕು. ಅವನು ಯುದ್ಧಕಲೆಯಲ್ಲಿ ನಿಪುಣನಿರುವನೆಂದು ಎಲ್ಲರೂ ನಂಬಿ ಹೊಗಳುತ್ತಿದ್ದಾರೆ. ಅವನು ಇಲ್ಲಿಯ ವರೆಗೆ ತೋರಿಸಿದ ಶೌರ್ಯದ ಮೇಲಿಂದಲೇ ಈ ಮಾತು ಸಿದ್ಧವಾಗುವಂತಿದೆ. ಅವನು ತನ್ನ ಸೈನ್ಯದ ರಚನೆಯನ್ನು ಬಹು ಕುಶಲತೆಯಿಂದ ಮಾಡಿಕೊಂಡು ೧೫ ದಿನಗಳಲ್ಲಿಯೇ ಲ್ಯಾಂಟ್‌ನೆಕ್‌ನ ಸೈನ್ಯವನ್ನು ಮುತ್ತಿ, ಹಿಂದಕ್ಕಟ್ಟಿದನು. ಅವನು ಲ್ಯಾಂಟ್‌ನೆಕ್‌ನನ್ನು ಪೂರ್ಣ ಗೊತ್ತಿಗೆ ಹಚ್ಚದಿರಲಾರನೆಂದು ನನಗೆ ನಂಬಿಗೆಯಾಗಿದೆ. ಲ್ಯಾಂಟ್‌ನೆಕ್‌ನಾದರೂ ಸಾಮಾನ್ಯ ಸೇನಾಪತಿಯಲ್ಲ. ಆದರೂ ನಮ್ಮ ತರುಣ ಸೇನಾಪತಿಯು ಈಗಾಗಲೆ ಎಲ್ಲರ ಮೇಲೆ ತನ್ನ ಪ್ರಭಾವವನ್ನು ಬೀರಿದ್ದಾನೆ. ಇದರಿಂದ ಎಷ್ಟೋ ಜನರು ಅವನನ್ನು ನೋಡಿ ಹೊಟ್ಟೆಕಿಚ್ಚುಪಡುತ್ತಿದ್ದಾರೆ. ಈ ಲ್ಯಾಂಟ್‌ನೆಕ್‌ನ ಪರಾಭವವು ತನ್ನನ್ನು ಬಿಟ್ಟು ಉಳಿದವರಾರೂ ಮಾಡತಕ್ಕದ್ದಲ್ಲೆಂಬ ಮಹತ್ವಾಕಾಂಕ್ಷೆಯನ್ನಿಟ್ಟುಕೊಂಡಿದ್ದಾನೆ. ಈ ಮಹತ್ವಾಕಾಂಕ್ಷೆಯಿಂದಲೇ ವೆಂಡಿಯ ಬಂಡಾಯದಲ್ಲಿ ನಾನಾ ತರದ ಸನ್ನಿವೇಶಗಳು ತಲೆದೋರಿವೆ. ನಮ್ಮ ಸೈನಿಕರು ಶೂರರಿರುತ್ತಾರೆ. ಆದರೆ ಸೇನಾಪತಿಯು ಅಷ್ಟೊಂದು ಯೋಗ್ಯತೆಯುವನಿರುವದಿಲ್ಲ. ಸೈನ್ಯದ ಎಲ್ಲ ತುಕಡಿಗಳ ಮೇಲಿನ ಸೇನಾಪತಿಗಳನ್ನು ಪುನಃ ಪರ್ಯಾಲೋಚಿಸಿ ನಿಯಮಿಸಬೇಕಾ

ಗಿದೆ. ಲ್ಯಾಂಟ್‌ನೆರ್‌ನು ೫೦೦೦೦ ಹಳ್ಳಿಗರ ನೆರವಿನಿಂದ ಇಂಗ್ಲಂಡದ ಸೇನೆಯನ್ನು ನಮ್ಮ ಸಮುದ್ರತೀರದಲ್ಲಿ ಇಳಿಸಬೇಕೆಂದಿದ್ದಾನೆ. ಅವನ ಈ ಇಚ್ಛೆಯು ಕೈಗೂಡದಂತೆ ನಾವು ವ್ಯವಸ್ಥೆ ಮಾಡಬೇಕಾಗಿದೆ. ನಮ್ಮ ಈ ತರುಣ ಸೇನಾಪತಿಯು ಮುಖ್ಯ ಸೇನಾನಿಯ ಅಪ್ಪಣೆ ಇಲ್ಲದೆ ಲ್ಯಾಂಟ್‌ನೆರ್‌ನ ಸೈನ್ಯದಲ್ಲಿ ನುಗ್ಗಿಬಿಡುತ್ತಾನೆ. ಅವನ ಕುತ್ತಿಗೆಯನ್ನು ಕತ್ತರಿಸಲು ಹವಣಿಸುತ್ತಾನೆ. ಆದರೆ ಮುಖ್ಯಸೇನಾನಿಯು ಅವನನ್ನು ತಡೆಹಿಡಿದು ಹಿಂದಕ್ಕೆಳೆಯುತ್ತಾನೆ. ಸಭಾಧ್ಯಕ್ಷನು ಅವನನ್ನೇ ಮುಖ್ಯ ಸೇನಾನಿಯನ್ನಾಗಿ ಮಾಡಬೇಕೆಂದು ಇಚ್ಛಿಸುತ್ತಾನೆ. ಆದರೆ ಈಗಿನ ಸೇನಾಪತಿಯು ಅವನಿಗೆ ಗುಂಡು ಹೊಡೆದು ಕೊಂದುಹಾಕಿರಿ ಎಂದೆನ್ನುತ್ತಾನೆ." ಎಂದು ರಾಬೆಸ್ಪಿಯರನು ಎಲ್ಲ ವಿವರಗಳನ್ನು ಸಂಕ್ಷೇಪವಾಗಿ ಸಿಮೋರೆಡಿನ್‌ನಿಗೆ ತಿಳಿಯಪಡಿಸಿದನು.

"ಈ ತರುಣ ಮನುಷ್ಯನು ಅಲೌಕಿಕ ಪುರುಷನೆಂದು ಕಾಣುತ್ತದೆ" ಎಂದು ಸಿಮೋರೆಡಿನ್‌ನು ಮಾತನಾಡಿದ್ದನ್ನು ಮಾರೆಯು ಕೇಳಿ "ಆದರೆ ಅವನಲ್ಲಿ ಒಂದು ದೊಡ್ಡ ದೋಷವಿದೆ" ಎಂದನು.

"ಅದಾವ ದೋಷವಿದೆ?" ಎಂದು ಸಿಮೋರೆಡಿನ್‌ನು ವಿಚಾರಿಸಲಾಗಿ ಮಾರೆಯು "ದಯೆ. ಅವನು ಹುಲಿಯಂತೆ ಹೋರಾಡುವನು. ಮುಂದೆ ಹಸುವಿನಂತೆ ಮೆತ್ತಗಾಗುವನು. ಅವನು ಎಲ್ಲರನ್ನೂ ಕ್ಷಮಿಸಿಬಿಡುತ್ತಾನೆ. ಹೆಂಗಸರು, ಹುಡುಗರು, ಸಾಧುಸಂತರು ಮತ್ತು ಕೈದಿಗಳಿಗೆ ಅವನು ಜೀವದಾನ ಮಾಡಿಬಿಡುತ್ತಾನೆ" ಎಂದು ತನ್ನ ಮಲ್ಲಿನಾಥಿಯನ್ನು ಬಿಚ್ಚಿದನು.

"ದೊಡ್ಡ ತಪ್ಪು ಮಾಡುತ್ತಾನೆ."

"ಅಪರಾಧ ಮಾಡುತ್ತಾನೆ."

"ಯಾವಾಗಾದರೊಮ್ಮೆ."

"ಮೇಲಿಂದ ಮೇಲಲ್ಲ."

"ಅದೇಕೆ? ಯಾವಾಗಲೂ" ಎಂದು ಮೊದಲಾಗಿ ತಲೆಗೊಂದರಂತೆ ಎಲ್ಲರೂ ಮಾತಾಡಿದರು.

"ನಮ್ಮ ನಮ್ಮ ದೇಶಬಾಂಧವರೊಡನೆ ಬಡಿದಾಡಬೇಕಾದ್ದರಿಂದ ಹೀಗಾಗುವದು ಸಹಜವಿದೆ" ಎಂದು ಸಿಮೋರೆಡಿನ್‌ನೆಂದನು.

"ಪ್ರಜಾಪಕ್ಷದ ಸೇನಾಪತಿಯು ರಾಜಪಕ್ಷದ ಸರದಾರರನ್ನು ಬಂಧಿಸಿ ಮುಕ್ತಮಾಡಿದರೆ, ನೀವು ಅವನಿಗೇನು ಮಾಡಬಲ್ಲಿರಿ ?" ಎಂದು ಮಾರೆಯು ಕೇಳಿದನು.

"ನಾನು ಅವನನ್ನು ಗುಂಡಿಕ್ಕಿ ಕೊಂದು ಹಾಕುವೆನು."

"ಅಥವಾ ಕುತ್ತಿಗೆ ಕೊಯ್ಯುವಿರಾ ?"

"ಎರಡರಲ್ಲೊಂದು ಮಾಡುವೆನು."

"ಹಾಗಾದರೆ ಯಾರಾದರೂ ಇಂಥ ಕೃತಿಯನ್ನೆಸಗಿದರೆ ಅವರ ರುಂಡವು ಮುಂಡದಿಂದ ಬೇರೆಯಾಗುವಂತೆ ಮಾಡುವಿರಾ ?"

"ಓಹೋ, ೨೪ ತಾಸುಗಳಲ್ಲಿ."

"ಅಂದಮೇಲೆ ರಾಬೆಸ್ಪಿಯರನ ಅಭಿಪ್ರಾಯದಂತೆ ನನ್ನ ಮತವೂ ಇರುತ್ತದೆ. ಅವಶ್ಯವಾಗಿ ಇವರನ್ನೇ ಅಲ್ಲಿಗೆ ಕಳಿಸಿರಿ." ಎಂದು ಮಾರೆಯು ಹೇಳಿದನು.

"ಈ ಧಾರ್ಮಿಕ ಮನುಷ್ಯನನ್ನು ಆ ಸರದಾರನ ಮೇಲೆ ಬೇಕಾದ ಹಾಗೆ ನಿಯಮಿಸಿರಿ. ಇವರೊಬ್ಬೊಬ್ಬರೇ ಇದ್ದರೆ ವಿಶ್ವಾಸವಿಡುವಂತಿರಲಿಲ್ಲ. ಆದರೆ ಇಬ್ಬರೂ ಒಂದೇ ಆದಮೇಲೆ ಇನ್ನೇನು ಹೆದರುವ ಕಾರಣವಿಲ್ಲ" ಎಂದು ಡಾಂಟನ್ನನು ಕೊಂಕು ನುಡಿದನು.

ಇದನ್ನು ಕೇಳಿ ಸಿಮೋರೆಡಿನ್‌ನ ಕಣ್ಣುಗಳು ಕೆಂಪಗಾದವು. ಆದರೂ ಅವನು ತನ್ನ ಮನೋವಿಕಾರವನ್ನು ವ್ಯಕ್ತಪಡಿಸದೆ ಕಠೋರಸ್ವರದಲ್ಲಿ "ಅವನು ಒಂದು ವೇಳೆ ತಪ್ಪು ಮಾಡಿದರೆ ಅವನಿಗೆ ದೇಹಾಂತ ಶಿಕ್ಷೆ ವಿಧಿಸುವೆನು" ಎಂದೆಂದನು.

"ಓಹೋ, ಸಿಕ್ಕಿತು ಅವನ ಹೆಸರು" ಎಂದು ಕಾಗದದ ಕಡೆಗೆ ನೋಡುತ್ತ ರಾಬೆಸ್ಪಿಯರನು "ಈ ಗಾವೆನ್‌ನ ಮೇಲೆ ನಿಮ್ಮನ್ನು ಸರ್ವಾಧಿಕಾರಿಯನ್ನಾಗಿ ಮಾಡಿದೆ" ಎಂದನು. ಈ ಹೆಸರು ಕಿವಿಗೆ ಬಿದ್ದೊಡ

ನೆಯ ಸಿವೋರೆಡಿನ್‌ನ ಮುಖಚರ್ಯೆಯು ವಿಚಿತ್ರವಾಗಿ " ಏನು ಅವನ ಹೆಸರು ಗಾವೆನ್ ಎಂದೇ " ಎಂದು ಅವನು ವಿಚಾರಿಸಿದನು.

ಮಾರೆಯ ಲಕ್ಷ್ಯದಲ್ಲಿ ಇವನ ಮುಖಚರ್ಯೆಯ ಬದಲಾವಣೆಯು ನೆಟ್ಟುಬಿಟ್ಟಿತು. " ಈಗ ನಾವು ಹಾಕಿದ ಕರಾರಿನ ಮೇರೆಗೆ ನೀವು ಈ ಸ್ಥಾನವನ್ನು ಸ್ವೀಕರಿಸುವಿರೋ ಅಥವಾ ಇಲ್ಲವೋ ? ನಿಮ್ಮ ನಿರ್ಧಾರ ವೇನು " ಎಂದು ಮಾರೆಯು ವಿಚಾರಿಸದೆ ಬಿಡಲಿಲ್ಲ.

ಸಿವೋರೆಡಿನ್‌ನು ದೊಡ್ಡ ದನಿಯಿಂದ " ಸ್ವೀಕರಿಸುವದೆಂದು ನಿರ್ಧ ರಿಸಿದ್ದೇನೆ " ಎಂದು ಕೂಡಲೆ ಉತ್ತರವನಿತ್ತನು. ಆದರೂ ಅವನ ಮುಖ ಚರ್ಯೆಯು ಮಾತ್ರ ಮೊದಲಿನಗಿಂತಲೂ ಹುಚ್ಚುಚ್ಚಾರವಾಗಿತ್ತು.

ರಾಬೆಸ್ಪಿಯರನು ಹತ್ತಿರ ಬಿದ್ದಿದ್ದ ಲೆಕ್ಕಣಿಕೆಯನ್ನು ತೆಗೆದುಕೊಂಡು ಒಂದು ಕಾಗದದ ಮೇಲೆ ಒಂದೆರಡು ಸಾಲು ಬರೆದನು. ಅದಕ್ಕೆ ತನ್ನ ಅಂಕಿ ವನ್ನು ಹಾಕಿ ಡಾಂಟನ್‌ನ ಕಡೆಗೆ ಕೊಟ್ಟನು. ಡಾಂಟನ್‌ನು ಅದರ ಮೇಲೆ ಸಹಿ ಮಾಡಿ ಮಾರೆಯ ಕೈಯಲ್ಲಿ ಕೊಟ್ಟನು. ಮಾರೆಯ ಸಹಿಯಾದ ನಂತರ ಆ ಕಾಗದವನ್ನು ಓದಲು ಸಿವೋರೆಡಿನ್ನನ ಕಡೆಗೆ ಕೊಡಲಾಯಿತು. ಮಾರೆಯ ಕಣ್ಣು ಮಾತ್ರ ಸಿವೋರೆಡಿನ್ನನ ಮೇಲೆಯೇ ಇತ್ತು.

" ಸಮುದ್ರದ ದಂಡೆಯಲ್ಲಿರುವ ಗಾವೆನ್‌ನ ಕೈಕೆಳಗಿರುವ ಸೈನ್ಯದ ಮೇಲೆ ಸಂಪೂರ್ಣ ಅಧಿಕಾರ ನಡೆಸುವ ಸ್ಥಾನವನ್ನು ಈ ಆಜ್ಞೆಯ ಮೇರೆಗೆ ಸಿವೋರೆಡಿನ್ನನಿಗೆ ಕೊಡಲಾಗಿದೆ " ಸಹಿ ರಾಬೆಸ್ಪಿಯರ, ಡಾಂಟನ್, ಮಾರೆ

ಪ್ಯಾರಿಸ ತಾ. ೨೮-೬-೧೭೯೩.

ಎಂದು ಅವನು ಓದಿದನು

ಸಿವೋರೆಡಿನ್ನನ ದೃಷ್ಟಿಯು ಕಾಗದದ ಮೇಲೆ ಬಿದ್ದಿರುವಾಗ ಮಾರೆಯ ದೃಷ್ಟಿಯು ಅವನ ಮೇಲೆ ಬಿದ್ದಿತ್ತು. ರಾಬೆಸ್ಪಿಯರನು " ಇನ್ನು ಒಂದು ಕ್ಷಣ ಸಹ ವಿಲಂಬ ಮಾಡಲಾಗದು. ನಾಳೆ ಅಂಕಿತ, ಮುದ್ರೆ ಸಹಿತವಾದ ಅಧಿಕಾರ ಪತ್ರವು ನಿಮ್ಮ ಕೈಗೆ ಬರುವದು. ಈ ಆಜ್ಞೆಯು ತಾತ್ಪೂರ್ತಿಕವಿರುತ್ತದೆ. ಈ ಅಧಿಕಾರದಿಂದ ನಿಮಗೆ ಸಂಪೂರ್ಣ ಅಧಿಕಾರ ಕೊಡಲ್ಪಟ್ಟಿದೆ. ಅಂದಮೇಲೆ ನೀವು ಗಾವೆನ್‌ನನ್ನು ಸರ್ವಸತ್ತಾಧೀಶನನ್ನಾಗಿ

ಮಾಡಬಹುದು. ಅಥವಾ ಗಲ್ಲಿಗೇರಿಸಲೂ ಬಹುದು. ನಾಳೆ ಮೂರು ಗಂಟೆಗೆ ಆಜ್ಞಾಪತ್ರವು ನಿಮಗೆ ಕೊಡಲ್ಪಡುವದು. ನೀವು ಯಾವಾಗ ಹೊರಡುವವರು ? " ಎಂದು ವಿಚಾರಿಸಿದನು.

" ನಾಲ್ಕು ಗಂಟೆಗೆ " ಎಂದಿಷ್ಟೆ ಸಿಮೋರೆಡಿಸ್‌ನೆನ್ನಲಾಗಿ ಎಲ್ಲರೂ ತಮ್ಮ ತಮ್ಮ ಮನೆಯ ದಾರೀ ಹಿಡಿದರು.

---

## ೯.

ಈ ಜಗತ್ತಿನಲ್ಲಿ ಫ್ರಾನ್ಸದ ಸಭೆಯಂಥ ಸಭೆಯು—ಭವ್ಯ ದಿವ್ಯ ಸಭೆಯು ಎಲ್ಲಿಯೂ ನೋಡಲು ಸಿಗಲಾರದು. ಈ ಸಭೆಯು ಜನತಾ ಜನಾರ್ದನನ ಮೊದಲನೆಯ ಅವತಾರವು. ಈ ಸಭೆಯ ಅವತಾರದಿಂದಲೇ ನವಯುಗವು ಆರಂಭವಾಯಿತು. ಈ ಜನಸಭೆಯು ಅಸ್ತಿತ್ವದಲ್ಲಿ ಬಂದಾಗ ಜನರಿಗೆ ಇದರ ಮಹತ್ವವೇ ಕಂಡುಬರಲಿಲ್ಲ. ಆಗಿನ ಜನರ ದೃಷ್ಟಿಯು ಅದರ ಭವಿತವ್ಯತೆಯ ಮೇಲೆ ಸ್ಥಿರವಾಗಿ ನಿಲ್ಲದಾಗಿತ್ತು. ಇದನ್ನು ನೋಡಿಯೇ ಅವರಿಗೆ ಹೆದರಿಕೆಯುಂಟಾಗಿತ್ತು. ಇದರ ಉಜ್ವಲ ಪ್ರಭಾವದಿಂದ ಅವರ ಕಣ್ಣು ಕುಕ್ಕುವದಂತೂ ದೂರೇ ಉಳಿದಿತು. ಪ್ರತಿಯೊಂದು ಅಸಾಮಾನ್ಯ ವಸ್ತುಗಳಿಗೆ ಒಂದು ತರದ ಪಾವಿತ್ರ್ಯದ ಆವರಣವಿದ್ದೇ ಇರುತ್ತದೆ. ಸಾಮಾನ್ಯ ವಸ್ತುಗಳನ್ನೇ ನೋಡಿ ಒಮ್ಮೊಮ್ಮೆ ಅದೆಷ್ಟೋ ಕೌತುಕ ಪಡಬೇಕಾಗುತ್ತದೆ. ಆದರೆ ವಿಶಾಲ ವಸ್ತುವೇ ಇರಲಿ, ಅದ್ವಿತೀಯ ಪ್ರತಿಭೆಯೇ ಇರಲಿ, ಗಗನಚುಂಬಿತ ಪರ್ವತ ರಾಜಿಗಳೇ ಇರಲಿ ಅಥವಾ ಪಂಡಿತನ ಗ್ರಂಥವೇ ಇರಲಿ, ನಾವು ಅದರ ಸನ್ನಿಧಿಯನ್ನು ಸೇರುತ್ತಲೇ ಭೀತಿಗ್ರಸ್ತರಾಗಿ ಬಿಡುತ್ತೇವೆ. ಅದರಂತೆ ಈ ಸಭೆಯ ಬಗ್ಗೆ ಜನರಲ್ಲಿ ಆ ರೀತಿಯ ಕಲ್ಪನೆಯಾಗಿತ್ತು.

ಪ್ರತಿಯೊಂದು ಕಲ್ಪನೆಗೆ ಯಾವುದಾದರೊಂದು ಮೂರ್ತಸ್ವರೂಪವು ಬಂದೇ ಬರುತ್ತದೆ. ಪ್ರತಿಯೊಂದು ತತ್ವಕ್ಕೆ ಯಾವುದಾದರೊಂದು

ಬಾಹ್ಯಾವರಣದ ಅವಶ್ಯಕತೆ ಇದ್ದೇ ಇರುತ್ತದೆ. ದೇವಾಲಯವೆಂದರೇನು ? ದೇವರ ವಿಷಯವಾಗಿರುವ ನಮ್ಮ ಭಾವನೆಗಳು ಒಂದು ಮರ್ಯಾದಿತ ಪವಿತ್ರ ಸ್ಥಳದಲ್ಲಿ ಕೇಂದ್ರೀಕೃತವಾಗುವದೇ ಮತ್ತೇನು ? ಪ್ರತಿಯೊಂದು ವಿಚಾರಕ್ಕೂ ಒಂದು ಸ್ಥಳವು ಅವಶ್ಯವಿದೆ. ಜನಸಭೆಯ ಕಲ್ಪನೆಯು ಹುಟ್ಟಿದ ಮೇಲೆ ಅದರ ಪ್ರಾಣಪ್ರತಿಷ್ಠೆಯನ್ನು ಎಲ್ಲಾದರೂ ಮಾಡಲೇಬೇಕಾಯಿತು.

೧೦-೫-೧೭೯೩ನೇ ದಿನ ಈ ಸಭೆಯು ಟುಲೆರಿಂಜ್ ಎಂಬ ರಾಷ್ಟ್ರಭವನದಲ್ಲಿ ನೆರೆಯಿತು. ದಿವಾಣಖಾನೆಯ ಮಧ್ಯಭಾಗದಲ್ಲಿ ಉಚ್ಚಾಸನವೊಂದು ಸಿದ್ಧವಾಯಿತು. ಸುತ್ತುಮುತ್ತಲೂ ಚಿತ್ರ-ವಿಚಿತ್ರ ಬಣ್ಣಗಳ ಪಡದೆಗಳು ಮಧ್ಯಭಾಗದಲ್ಲಿ ಬಾಕಗಳು ಒಂದರ ಹಿಂದೊಂದು ಹಾಕಲ್ಪಟ್ಟವು. ಈ ಭವನದಲ್ಲಿ ಸಭೆಯ ವ್ಯವಸ್ಥೆ ತಾತ್ಪೂರ್ತಿಕವೆಂದು ಮಾಡಲಾಯಿತು. ರಾಜನ ಕಾಲದಲ್ಲಿ ಇಲ್ಲಿ ನಾಟಕಗಳು ಜರುಗುತ್ತಿದ್ದವು. ರಾಜಪಕ್ಷದವರು ಈ ಸಭಾಮಂಡಪವನ್ನು ನೋಡಿ ನಗುತ್ತಿದ್ದರು. 'ಎಂಥ ದಿವಾಣಖಾನೆಯಿದು ! ಎಲ್ಲ ಸಾಮುಗ್ರಿಗಳು ಅರಿವೆ, ಕಾಗದ, ತುಂಡುಚೂರು ಕಟ್ಟಿಗೆಗಳಿಂದ ಸಿದ್ಧಗೊಳಿಸಲ್ಪಟ್ಟವೆ ! ಇದರ ನಾಶವು ಹಾ ಹಾ ಎನ್ನುವದರೊಳಗಾಗಿ ಆಗುವದು' ಎಂದು ಅವರು ನಗೆಯಾಡುತ್ತಿದ್ದರು ಆದರೆ ಅಂಥ ಪ್ರಸಂಗವೇನು ಬರಲಿಲ್ಲ ಫ್ರಾನ್ಸವು ಈ ಮಂದಿರಕ್ಕೆ ಶಾಶ್ವತ ಸ್ವರೂಪವನ್ನು ಕೊಟ್ಟುಬಿಟ್ಟಿತು. ಈ ಸಭಾಗೃಹದ ಗೋಡೆಯ ಮೇಲೆ ಬೇರೆ ಬೇರೆ ವಾಕ್ಯಗಳ ಪಟಗಳು ತೂಗುಹಾಕಲ್ಪಟ್ಟವು. ಅವುಗಳಲ್ಲಿ ಕೆಲವು ಹೀಗೆ ಇದ್ದವು; "ರಾಜನು ಮರಳಿ ಬರುತ್ತಾನೆ. ಅವನನ್ನು ಸನ್ಮಾನಿಸುವವರಿಗೆ ಹೊಡೆತ ಬೀಳುವವು; ಅವಮಾನ ಪಡಿಸುವವರನ್ನು ಕೊಲ್ಲಲಾಗುವದು. ತಡೆಯಿರಿ, ನಿಮ್ಮ ತಲೆಯ ಮೇಲಿನ ಟೊಪ್ಪಿಗೆ ತೆಗೆಯಬೇಡಿರಿ. ಅವನು ತನ್ನ ಹೇಳಿಕೆಯನ್ನು ಕೊಡಲು ನ್ಯಾಯಾಧೀಶನ ಕಡೆಗೆ ತೆರಳುತ್ತಿದ್ದಾನೆ. ರಾಜನು ರಾಷ್ಟ್ರದ ಮೇಲೆ ಜಪ್ಪಿಸಿ ಕುಳಿತಿದ್ದನು. ಅವನು ದೇಶಕ್ಕೆ ಬೆಂಕೀ ಕೊಟ್ಟಿದ್ದಾನೆ. ಈಗ ಜನರ ಸರತಿಯು ಬಂದಿವೆ. ಕಾನೂನು ! ಕಾನೂನು ! " ಎಂಬೀ ಪ್ರಕಾರದ ವಾಕ್ಯಗಳು ಗೋಡೆಯನ್ನಲಂಕರಿಸಿದ್ದವು. ಇದೇ ಸ್ಥಳದಲ್ಲಿಯೇ ೧೬ನೇ ಲುಯಿಯ ವಿಚಾರಣೆಯ ನಿರ್ಣಯವು ಹೊರಬಿದ್ದಿತ್ತು.

ಯಾವ ದಿವಾಣಖಾನೆಯಲ್ಲಿ ಸಭೆಯು ಜರುಗಿತ್ತೋ ಅದರ ಸುತ್ತು ಮುತ್ತು ಸಶಸ್ತ್ರ ಸೈನಿಕರ ಕಾವಲಿತ್ತು. ಈ ಸ್ಥಳದಲ್ಲಿಯ ಎಲ್ಲ ಪದಾರ್ಥಗಳೂ ಮಹತ್ವವುಳ್ಳವಾಗಿದ್ದವು. ಸಭೆಯೊಳಗೆ ಪ್ರವೇಶಿಸಿದೊಡನೆ ಎರಡು ವಿಶಾಲವಾದ ಕಿಡಿಕಿಗಳಲ್ಲಿ ಎತ್ತರವಾದ ಸ್ವಾತಂತ್ರ್ಯದೇವತೆಯ ಪುತ್ಥಳಿಯು ಕಣ್ಗೆ ಗೋಚರವಾಗುವದು. ಈ ಜಾಗೆಯು ಬಲು ವಿಸ್ತಾರವಾಗಿತ್ತು. ಇದರಲ್ಲಿ ಕಟ್ಟಿಗೆಯಲ್ಲಿ ಕೆತ್ತನೆಯ ಕುಸುರಿನ ಕೆಲಸವು ಪ್ರೇಕ್ಷಣೀಯ ವಾಗಿತ್ತು. ಈ ದಿವಾಣಖಾನೆಯ ಕಟ್ಟಡವನ್ನು ನೋಡಿ ಜನರು ಬೆಪ್ಪಾಗುತ್ತಿದ್ದರು. ಇದರಲ್ಲಿಯ ಕೋಣೆಗಳು ಚೌಕೋನಾಕೃತಿಯಲ್ಲಿದ್ದವು. ಈ ಚೌಕೋನಾಕೃತಿಯ ಒಂದು ಬದಿಗೆ ಸಭಾಸದರು ಕುಳಿತುಕೊಳ್ಳುವ ದಕ್ಕಾಗಿ ಅರ್ಧಚಂದ್ರಾಕೃತಿಯ ಸ್ಥಳವನ್ನು ನಿರ್ಮಿಸಲಾಗಿತ್ತು. ಯಾರಿಗೆ ಬರೆಯಬೇಕಾಗುತ್ತಿತ್ತೋ ಅಂಥವರು ತೊಡೆಯ ಮೇಲೆ ಕಾಗದವನ್ನಿಟ್ಟು ಬರೆಯುತ್ತಿದ್ದರು. ಸಭಾಸದರ ಎದುರಿನಲ್ಲಿ ಒಂದು ಉಚ್ಚಾಸನವಿತ್ತು. ಅದರ ಹಿಂಬದಿಯಲ್ಲಿಯೇ ಅಧ್ಯಕ್ಷನ ಸ್ಥಳವು ವಿರಾಜಮಾನವಾಗಿತ್ತು.

ಈ ದಿವಾಣಖಾನೆಯಲ್ಲಿ ಅರ್ಧಚಂದ್ರಾಕೃತಿಯ ಬಾಕುಗಳ ೧೯ ಸಾಲು ಗಳಿದ್ದವು. ಅವು ಒಂದರ ಮೇಲೊಂದು ಎತ್ತರದಲ್ಲಿದ್ದವು ಈ ಉಚ್ಚಾಸನದ ಕೆಳಬದಿಯಲ್ಲಿ ಭಾಲದಾರ, ಚೋಪದಾರ ಮೊದಲಾದವರು ಕುಳಿತು ಕೊಳ್ಳುತ್ತಿದ್ದರು. ಅದರ ಒಂದು ಬದಿಯಲ್ಲಿ ಕರ್ರನ್ನ ಕಟ್ಟಿಗೆಯ ಚೌಕಟ್ಟು ಇದ್ದು, ಅದನ್ನು ಗೋಡೆಗೆ ತೂಗುಹಾಕಿ ಅದರ ಮೇಲೆ 'ಮಾನವನ ಹಕ್ಕಿನ ದಿಗ್ದರ್ಶನ' ಎಂದು ಬರೆಯಲಾಗಿತ್ತು. ವ್ಯಾಸಪೀಠದ ಮೇಲೆ ಮೂರುಬಣ್ಣದ ಬಾವುಟವು ಹಾರಾಡುತ್ತಿದ್ದು ಅದರ ಮೇಲೆ 'ಕಾನೂನು' ಎಂಬ ಅಕ್ಷರಗಳಿದ್ದವು. ಅಲ್ಲಲ್ಲಿ ಪ್ರಸಿದ್ಧ ಪುರುಷರ ಪುತ್ಥಳಿಗಳಿದ್ದವು. ಈ ಪುತ್ಥಳಿಗಳಿಗೆ ಹೂಮಾಲೆ ಹಾಕಲಾಗಿತ್ತು. ದಿವಾಣಖಾನೆಯಲ್ಲಿ ಎರಡು ಸಾವಿರ ಜನರು ಸಹಜವಾಗಿ ಕುಳಿತುಕೊಳ್ಳಬಹುದಾಗಿತ್ತು. ಮುಂಜಾನೆ ಮತ್ತು ಸಾಯಂಕಾಲ ಸಭೆಯು ನೆರೆಯುವದು. ಅಧ್ಯಕ್ಷರ ಆಸನವು ಬಹು ಸುಂದರವಾಗಿತ್ತು. ಆಸನದ ಮುಂದಿರುವ ಮೇಜಿನ ಬುಡದಲ್ಲಿ ಒಂದೇ ಕಾಲಮೇಲೆ ನಿಂತ ನಾಲ್ಕು ರಾಕ್ಷಸರ ಚಿತ್ರವಿತ್ತು. ಮೇಜಿನ ಮೇಲೆ

ದೇವಾಲಯುದಲ್ಲಿರುವಂಥ ದೊಡ್ಡ ಗಂಟೆಯಿತ್ತು. ತಾಂಬ್ರದ ದೊಡ್ಡ ದೌತಿಯೊಂದಿತ್ತು. ಸರಕಾರೀ ಕೆಲಸದ ಕೆಲವು ಪುಸ್ತಕಗಳಿದ್ದವು. ಇದೇ ಮೇಜಿನ ಮೇಲೆ ಎಷ್ಟು ಶಿರಚ್ಛೇದಗಳಾಗಿ ಎಷ್ಟೊಂದು ರಕ್ತವು ಬಿದ್ದಿತ್ತೋ ಏನೋ ಯಾರು ಬಲ್ಲರು ! ಉಚ್ಚಾಸನಕ್ಕೆ ಹೋಗಬೇಕಾದರೆ ಎಂಟು ಮೆಟ್ಟಲುಗಳನ್ನು ಏರಬೇಕಾಗುತ್ತಿತ್ತು. ಈ ಮೆಟ್ಟಲಗಳನ್ನೇರುವಾಗ ಭಾಷಣ ಮಾಡಲು ಹೋಗುವವರು ತಾವು ಸ್ವರ್ಗಸೋಪಾನಗಳನ್ನೇರು ತ್ತಿರುವೆವೋ ಎನ್ನುವ ಹಾಗೆ ಅವರಲ್ಲಿ ಭಾವನೆಗಳುಂಟಾಗುತ್ತಿದ್ದುವಂತೆ ! ಫ್ರಾನ್ಸದ ಜನಸಭೆಯು ಈ ಸ್ಥಳದಲ್ಲಿ ನೆರೆಯುತ್ತಲಿತ್ತು. ಆದರೆ ಗುಪ್ತ ಗೋಷ್ಠಿಗಳನ್ನು ಚರ್ಚಿಸಬೇಕಾದರೆ ಅದಕ್ಕೊಂದು ಪ್ರತ್ಯೇಕವಾದ ಸ್ಥಳದ ಏರ್ಪಾಟಿತ್ತು.

ರಾಜಕೀಯ ಭಾವನೆಗಳನ್ನು ಬದಿಗಿರಿಸಿದರೂ ಈ ದಿವಾಣಖಾನೆಯ ಬಾಹ್ಯಾಂಗವನ್ನೇ ನೋಡಿದರೆ ಮೈಮೇಲೆ ಮುಳ್ಳೇಳುವಂತಾಗುದದು. ಒಂದಾನೊಂದು ಕಾಲಕ್ಕೆ ಇದೇ ದಿವಾಣಖಾನೆಯೇ ವಿಲಾಸ ವಿಹಾರಗಳ ತೌರು ಮನೆಯಾಗಿತ್ತು. ಸುಖಾನಂದಗಳಿಗೆ ಇಲ್ಲಿ ಮಿತಿಯೇ ಇರಲಿಲ್ಲ. ಗಾಯನ, ನರ್ತನ, ವಾದನ ಮೊದಲಾದವುಗಳು ಪದೇ ಪದೇ ಜರುಗುತ್ತಿದ್ದವು. ಹಣದ ವೆಚ್ಚವಂತೂ ನೀರಿಗಿಂತಲೂ ಕಡೆಯಾಗಿತ್ತು. ಆದರೆ ರಾಜನ ರಾಜಠೀವಿಯು ಅಸ್ತಂಗತವಾಯಿತು. ಸುವಾಸಿತ ದ್ರವ್ಯಗಳ ಸಾರಣೆಯ ಬದಲು ರಕ್ತದ ಸಾರಣೆ ಹಾಕಲಾಗುತ್ತಿತ್ತು. ಸ್ತ್ರೀಯರ ಮೈಮೇಲಿನ ಮುತ್ತು, ಮಾಣಿಕ, ವಜ್ರವೈಡೂರ್ಯ, ಬಂಗಾರದ ಆಭರಣಗಳ ಬದಲಾಗಿ ಖಿನ್ನ ಮುದ್ರೆಯ ಕೈದಿಗಳ ಕೈಕಾಲುಗಳಿಗೆ ತೊಡಿಸಿದ ಕಬ್ಬಿಣದ ಬೇಡಿಗಳು ಕಾಣುತ್ತಿದ್ದವು. ರಾಜಕಾಲೀನದ ಗಾದಿ-ಗಿರ್ದೆ, ತಕ್ಕೆ-ಲೋಡುಗಳು ಮಾಯವಾಗಿ ಅಲ್ಲಿ ಮೃತ್ಯುಶಯ್ಯೆಯೋ ಸಿದ್ಧವಾಗಿತ್ತು. ಗಾಯನದ ಮಧುರ ಆಲಾಪ ಮತ್ತು ಸ್ತ್ರೀಯರ ಸುಖಕರವಾದ ಮೃದುಹಾಸ್ಯದ ಬದಲು ಗಲ್ಲಿಗೇರಿಸಲ್ಪಡುವ ಪುರುಷರ ಸಲುವಾಗಿ ಅವರ ರಮಣಿಯರು ವಿಲಾಪಿಸುವ ಕರ್ಣಕರ್ಕಶಧ್ವನಿಯು ಕೇಳಬರುತ್ತಲಿತ್ತು. ಈ ತೆರದ ಬದಲಾವಣೆಯು ಈ ದಿವಾಣಖಾನೆಯಲ್ಲಿ ಕಂಡುಬರುತ್ತಿತ್ತು.

ದೇವಾಲಯವು ಕಣ್ಣಿಗೆ ಬಿದ್ದರೆ ಅದು ರಮಣೀಯವಾಗಿ ತೋರುವದು. ಆದರೆ ಪ್ರತ್ಯಕ್ಷ ದೇವರ ಮೂರ್ತಿಯೇ ದೃಷ್ಟಿಗೆ ಬಿದ್ದರೆ, ಅದರ ಮುಂದೆ ಬಾಹ್ಯ ರಮಣೀಯತೆಯು ತುಚ್ಛವಾಗುತ್ತದೆ. ಅದರಂತೆ ಈ ದಿವಾಣಖಾನೆಯು ರಮಣೀಯತೆಯೇನೋ ಕಾಣುತ್ತಿದ್ದುದು ನಿಜ; ಆದರೆ ಒಳಗಿನ ಸಭಾಸದರನ್ನು ನೋಡಿದರೆ ಆ ರಮಣೀಯತೆಯು ಮಾಯವಾಗುತ್ತಿತ್ತು. ನಾಟಕದೊಳಗಿನ ಪಾತ್ರಗಳು ಎಲ್ಲಿಯವರೆಗೆ ರಂಗಭೂಮಿಯ ಮೇಲೆ ಬಂದಿರುವದಿಲ್ಲವೋ ಅಲ್ಲಿಯವರೆಗೆ ನಾಟ್ಯಗೃಹವು ನೋಡಲು ಚೆಂದ ಕಾಣುತ್ತದೆ. ಆದರೆ ಪಾತ್ರಗಳ ಆಗಮನವಾಯಿತೆಂದರೆ ನಮ್ಮ ದೃಷ್ಟಿಯು ಬದಲಾಗುತ್ತದೆ. ಪರಸ್ಪರ ವಿರುದ್ಧವಾದ ಗುಣಗಳ ಸಮ್ಮೇಲನವೇ ಈ ಸ್ಥಳದಲ್ಲಿ ನೆರೆದಂತಾಗಿತ್ತು. ಇಲ್ಲಿದ್ದ ಗೊಂದಲವನ್ನು ಹೇಳತೀರದು. ಗಂಭೀರತೆಯೆಂದರೆ ಇಲ್ಲಿಯಷ್ಟು ಗಂಭೀರತೆಯು ಇನ್ನೆಲ್ಲಿಯೂ ಕಾಣಸಿಗಲಾರದು. ವೀರಾಗ್ರಣಿಗಳು ಬೇಕಾದರೆ, ವೀರಾಗ್ರಣಿಗಳೂ ಇದ್ದರು; ಅಂಜುಬುರುಕರು ಬೇಕಾಗಿದ್ದರೆ ಅಂಜುಬುರುಕರಿಗೇನು ಕಡಮೆ ಇರಲಿಲ್ಲ. ಒಂದು ಕಡೆಗೆ ಮಲ್ಲವಿದ್ಯಾಪಟುಗಳಾದ ಹುದ್ದರಿಗಳಿದ್ದರೆ ಇನ್ನೊಂದೆಡೆಯಲ್ಲಿ ವಾಗ್ಯುದ್ಧದಲ್ಲಿ ಪ್ರವೀಣರಾದ ಭಾಷಣಪಟುಗಳ ತಂಡವಿರುತ್ತಿತ್ತು. ಇವರಲ್ಲಿ ಪ್ರತಿಯೊಬ್ಬರೂ ರಾಜ್ಯಕ್ರಾಂತಿಯಲ್ಲಿ ಒಂದಿಲ್ಲೊಂದು ತರದ ಮಹತ್ಕಾರ್ಯವನ್ನು ಜರುಗಿಸಿದವರೇ ಆಗಿದ್ದರು. ಯಾರು ಯಾರನ್ನೋ ಗಲ್ಲಿಗೇರಿಸಿದ್ದರು; ಯಾರ ಯಾರೋ ಬೆಂಕಿಯನ್ನು ಹಚ್ಚಿದ್ದರು. ಯಾರಿಗೆ ಯಾರೋ ಸೈನ್ಯಾಧಿಪತ್ಯವನ್ನು ದೊರಕಿಸಿಕೊಂಡಿದ್ದರು. ಯಾರಿಗಾರೋ ದ್ರವ್ಯಭಾಂಡಾರಿಗಳಾಗಿದ್ದರು. ಹಲವರು ಕಿಲ್ಲೆಯನ್ನು ವಶಪಡಿಸಿಕೊಂಡು ಕಿಲ್ಲೇದಾರರಾಗಿದ್ದರು. ಈ ಎಲ್ಲ ಸಭಾಸದರಲ್ಲಿ ಎರಡು ಪಂಗಡಗಳಾಗಿದ್ದವು. ಈ ಎರಡೂ ಪಂಗಡಗಳಮೇಲೆ ರಾಬೆಸ್ಪಿಯರನ ಏಕತಂತ್ರೀ ಸರ್ವಾಧಿಕಾರವು ಸುಸೂತ್ರವಾಗಿ ಸಾಗಿತ್ತು.

ಈ ಸಭೆಯು ದೊಡ್ಡ ದೊಡ್ಡ ಜನರದಾಗಿತ್ತು. ಇದಲ್ಲದೆ ಸಾಧಾರಣ ತರದ ಜನರದೊಂದು ಮಂಡಳವಿತ್ತು. ಆ ಮಂಡಳದ ಸಭಾಸದರು ಭಯಗ್ರಸ್ತರೂ, ಕಡಮೆ ಶೂರರೂ, ಕಡಮೆ ಕೋಪಿಷ್ಠರೂ ಆಗಿದ್ದರು.

ನೀರಿನ ಮೇಲೆ ತೇಲಾಡುವ ವಸ್ತುಗಳಿಗೆ ಸಮುದ್ರದ ಗರ್ಭದಲ್ಲಿ ಎಂಥ ಬೆಲೆಯುಳ್ಳ ಪದಾರ್ಥಗಳಿವೆ ಎಂಬದರ ತಿಳಿವಳಿಕೆ ಹೇಗೆ ಇರುವದಿಲ್ಲವೋ ಹಾಗೆ ಈ ಸಭಾಸದರ ಸ್ಥಿತಿಯಾಗಿತ್ತು. ಈ ಸಭಾಸದರೆಲ್ಲರೂ ಬಲು ಸಂಶಯವುಳ್ಳವರೂ, ಹಿಂದೆ ಉಳಿಯುವವರೂ, ಕಾಲಹರಣ ಮಾಡುವವರೂ, ಭಯಗ್ರಸ್ತರೂ ಆಗಿದ್ದರು. ಇವರೆಲ್ಲರಿಗೂ ಸೀಯೆ ಎಂಬವನು ನಾಯಕನಾಗಿದ್ದನು. ಇವನು ಜಾಣಾಕ್ಷನೇನೋ ಅಹುದು; ಆದರೆ ಅವನು ತನ್ನ ಶಕ್ತಿಯಾಚೆಗಿನ ಅವಸ್ಥೆಗೆಬರಲು ಶಕ್ತನಾಗಲಿಲ್ಲ. ಸೀಯೇ ರಾಬೆಸ್ಪಿಯರನಿಗೆ ಹುಲಿ ಎಂದು ಕರೆಯುತ್ತಿದ್ದನು; ರಾಬೆಸ್ಪಿಯರನು ಸೀಯೇನಿಗೆ ಚಿರ್ಚು ಎಂದು ಕರೆಯುತ್ತಿದ್ದನು. ಇವನು ಕ್ರಾಂತಿಕಾರಕರ ಸೇವಕನಾಗಿರದೆ ಸರದಾರನಾಗಿದ್ದನು. ಮುಂದೆ ನುಗ್ಗುವವರೊಂದಿಗೆ ಮುನ್ನುಗ್ಗುವನು; ದೊಡ್ಡ ದೊಡ್ಡ ಶೌರ್ಯದ ಸಂಗತಿಗಳನ್ನು ಹೇಳುವನು. ಆದರೆ ತನ್ನ ಶಕ್ತಿಯನ್ನರಿತುಕೊಂಡು ಮಾತ್ರ ಹೆಜ್ಜೆ ಹಾಕುತ್ತಿದ್ದನು. ಅನೇಕ ಜನರು ತಮ್ಮ ಜ್ಞಾನದ ಮತ್ತು ಮುತ್ಸದ್ದಿತನದ ಗೌರವವನ್ನು ಮಾಡಿಕೊಳ್ಳುತ್ತಿದ್ದಂತೆ ಇವನು ಆತ್ಮಸ್ತುತಿ ಮಾಡಿಕೊಳ್ಳದೆ ತನ್ನ ಜೀವವನ್ನು ರಕ್ಷಿಸಿಕೊಳ್ಳಬೇಕೆಂಬ ಸ್ವಭಾವದವನಾಗಿದ್ದನು. ಜೀವದ ಹಂಗು ತೊರೆದು ಸಂಕಟದಲ್ಲಿ ಬೀಳುವವರನ್ನು ಕಂಡರೆ ಇವನಿಗಾಗುತ್ತಿದ್ದಿಲ್ಲ.

ಈ ಮಂಡಳದಷ್ಟೆ ಅಥವಾ ಸ್ವಲ್ಪ ಹೆಚ್ಚು ಕಡಮೆಯಾದ ಇನ್ನೊಂದು ಮೂರನೆಯ ಸಭೆಯೊಂದಿತ್ತು. ಇದರಲ್ಲಿಯ ಎಲ್ಲ ಸದಸ್ಯರು ಸ್ವಾರ್ಥಲೋಲುಪರಾಗಿದ್ದರು. ಇದು ನಿರ್ಲಜ್ಜ ಜನರ ಗುಂಪೇ ಆಗಿತ್ತು. ಅವರ ಸಿಟ್ಟು ಒಳಗಿಂದೊಳಗೆ ಹೊತ್ತುತ್ತಲಿತ್ತು. ಅವರು ಯಾವಾಗಲೂ ಅಸಂತುಷ್ಟರಾಗಿರುತ್ತಿದ್ದು, ಪ್ರಸಂಗವು ಯಾವಾಗ ಬಂದೀತು, ಆಗ ಬಂಡೆಬ್ಬಿಸಿ ಗೊಂದಲ ಹಾಕಬೇಕೆಂಬದನ್ನೇ ದಾರಿ ಕಾಯುವವರಾಗಿದ್ದರು. ಎತ್ತ ಕಡೆಗೆ ಜಯವು ಕಾಣಿಸುವದೋ ಅತ್ತ ಕಡೆಗೇ ಹೋಗಿ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳಬೇಕೆಂದು ಅವರು ಹಂಚಿಕೆ ಹಾಕುತ್ತಿದ್ದರು. ಒಮ್ಮೆ ರಾಜಪಕ್ಷ, ಮತ್ತೊಮ್ಮೆ ಲೋಕಪಕ್ಷ ಎಂಬ ಅವರ ವರ್ತನವಿತ್ತು. ಈ ಪಕ್ಷವು ಓಡುತ್ತಿರುವ ಕುದುರೆಯ ಬೆನ್ನುಹತ್ತಿದ ನೊಣಗಳಂತಾಗಿತ್ತು.

ಅವರ ಸಂಖ್ಯೆಯು ಅಸಂಖ್ಯವಾಗಿತ್ತು. ಆ ದೃಷ್ಟಿಯಿಂದ ಈ ಮಂಡಳವು ಮಹತ್ವದ್ದಾಗಿತ್ತು. ಆದರೂ ಇವರೆಲ್ಲರೂ ಅಂಜುಬುರುಕರೂ ಕೆಲಸಕ್ಕೆ ಬಾರದವರೂ ಆಗಿದ್ದರು.

ಈ ಭಾವನಾಪ್ರಧಾನ ಮಂಡಳಿಯಲ್ಲಿ ಭವಿಷ್ಯಕಾಲದ ಚಿತ್ರವನ್ನು ಸ್ವೈರಸ್ಫೂರ್ತಿಯಿಂದ ಚಿತ್ರಿಸಬೇಕೆಂಬದೊಂದು ವರ್ಗವಿತ್ತು. ಮೂರ್ಖತನದ ಕೆಲಸಗಳು ಎಷ್ಟೆಷ್ಟೋ, ಅಷ್ಟಷ್ಟು ಕೆಲಸಗಳನ್ನು ಮಾಡುವ ಪ್ರವೃತ್ತಿಯು ಅವರಲ್ಲಿ ಕಾಣಬರುತ್ತಿತ್ತು. ಅವರ ಅಂತಃಕರಣದಲ್ಲಿ ರಣಾಂಗಣದ ಮೇಲೆ ವೀರಶ್ರೀಯ ಪ್ರದರ್ಶನ ಮಾಡಬೇಕೆಂಬ ಇಚ್ಛೆಯುಂಟಾದರೆ ಮರಣವು ಕಃಪದಾರ್ಥವೆಂದು ಭಾವಿಸುತ್ತಿದ್ದರು. ಆದರೆ ದಯೆ ತೋರಿಸಬೇಕೆಂಬ ಮನಸಾದರೆ ಗಲ್ಲಿನ ಶಿಕ್ಷೆಯನ್ನು ರದ್ದುಗೊಳಿಸುವ ಪ್ರವೃತ್ತಿಯು ಅವರಲ್ಲಿ ಕಂಡುಬರುತ್ತಿತ್ತು. ರಾಜಸಿಂಹಾಸನದ ಕಡೆಗೆ ಕಟಾಕ್ಷಬಿದ್ದರೆ ಅವರಲ್ಲಿ ಸೈತಾನೀವೃತ್ತಿಯು ಜಾಗೃತಗೊಳ್ಳುತ್ತಿತ್ತು. ಲೋಕಪಕ್ಷದ ಕಡೆಗೆ ದೃಷ್ಟಿ ತಾಕಿದರೆ ದೇವದೂತರಾಗುತ್ತಿದ್ದರು. ಇವರಲ್ಲಿ ಕೆಲವರು ಯುದ್ಧಕಲೆಯನ್ನರಿತವರಾಗಿದ್ದರು; ಕೆಲವರು ವಿಚಾರ ಮಾಡುವಂಥ ಕುಶಾಗ್ರ ಬುದ್ಧಿಯವರಾಗಿದ್ದರು; ಕೆಲವರು ಸುಮ್ಮನೆ ಬಾಯಿ ಬಡಾಯಿ ಮಾಡುವವರಾಗಿದ್ದರು. ಕೆಲವರು ಬಾಯಿ ಹೊಲಿದುಕೊಂಡವರಾಗಿದ್ದರು. ಆದರೂ ಯಾವಾಗಲೂ ಗಪ್ಪುಚಿಪ್ಪಾಗಿ ಕೂಡಬಲ್ಲವನೊಬ್ಬನು ರಾಷ್ಟ್ರೀಯ ಶಿಕ್ಷಣದ ವಿಚಾರವನ್ನು ಮಾಡುತ್ತಿದ್ದನು; ಮತ್ತೊಬ್ಬನು ಪ್ರಾಥಮಿಕ ಶಾಲೆಯನ್ನು ತೆರೆಯಬೇಕೆಂಬ ವಿಚಾರದಲ್ಲಿ ಮಗ್ನನಾಗಿರುತ್ತಿದ್ದನು. ಮೂರನೆಯವನೊಬ್ಬನು ತತ್ವಜ್ಞಾನವನ್ನು ಧಾರ್ಮಿಕ ಪದವಿಯ ಸ್ಥಾನದಲ್ಲಿ ಹೇಗೆ ಒಯ್ದು ಕುಳ್ಳಿರಿಸಬೇಕೆಂಬ ವಿಚಾರಗ್ರಸ್ತನಾಗಿರುತ್ತಿದ್ದನು. ನಾಲ್ಕನೆಯವನೊಬ್ಬನು ಆಸ್ಪತ್ರೆಗಳನ್ನು ಸ್ವಚ್ಛವಾಗಿ ಹೇಗೆ ಇಡಬೇಕೆಂಬ ವಿಚಾರ ಮಾಡುತ್ತಿದ್ದನು. ಐದನೆಯವನೊಬ್ಬನು ದಾಸ್ಯತ್ವವನ್ನು ಹೇಗೆ ಇಲ್ಲದಂತೆ ಮಾಡಬೇಕು, ಅದಕ್ಕೆ ಉಪಾಯಗಳಾವವು ಎಂಬ ವಿಚಾರವನ್ನು ತಲೆಯಲ್ಲಿ ತುಂಬಿಕೊಂಡವನಾಗಿರುತ್ತಿದ್ದನು. ಈ ಪ್ರಕಾರವಾಗಿ ಯಾರು ಶಿಲ್ಪಕಲೆ, ಯಾರು ವಕ್ತೃತ್ವ, ಯಾರು ಗಾಯನ ಇವೇ ಮೊದಲಾದವುಗಳ ಪ್ರಗತಿ ಹೇಗಾದೀ

ತೆಂಬ ವಿಚಾರಗಳಲ್ಲಿ ಮಗ್ನರಾಗಿರುತ್ತಿದ್ದರು. ಫ್ರಾನ್ಸದ ಜನಸಭೆಯೆಂದರೆ ಅಶಕ್ಯಕೋಟಿಯೊಳಗಿನ ಮಾತೆಂದು ಜನರು ಆಡಿಕೊಳ್ಳುತ್ತಿದ್ದ ಟೀಕೆಗೆ, ಅದನ್ನು ಪ್ರಮಾಣಪೂರ್ವಕವಾಗಿ ನೋಡಬಯಸುವವರಿಗೆ ಇದೊಂದು ಸ್ಥಳ ವಾಗಿತ್ತು. ಒಂದುಕಡೆಗೆ ಕಾನೂನೆಂದು ಬಡಬಡಿಸುತ್ತಿರುವ ರಾಬೆಸ್ಪಿಯು ರನೂ, ಇನ್ನೊಂದೆಡೆಗೆ ಕಾಂಡರಸೆಟ್‌ನು ಕರ್ತವ್ಯವೆಂದು ಕುಳಿತಿದ್ದನು. ಕಾಂಡಸೆಟ್‌ನು ಭಾವಿಕನೂ ಪಂಡಿತನೂ ಆಗಿದ್ದನು. ರಾಬೆಸ್ಪಿಯುರನು ಕರ್ಮ ವೀರನಾಗಿದ್ದನು. ಯಾವಾಗಲೂ ಕೆಲಸವೆಂದು ಕನಕರಿಸುತ್ತಿದ್ದನು. ರಾಜ್ಯ ಕ್ರಾಂತಿಗೆ ಎರಡು ಗತಿಗಳಿರುತ್ತವೆ. ಒಂದು ಏರಿಕೆಯ ಕಾಲ; ಇನ್ನೊಂದು ಇಳಿಯುವಕಾಲ. ಈ ಸ್ಥಳದಲ್ಲಿ ಒಂದು ಮೂಲೆಯನ್ನು ಯಾವಾಗಲೂ ಬೆರಳು ಮಾಡಿ ತೋರಿಸುವ ರೂಢಿಯಾಗಿತ್ತು. ಯಾಕೆಂದರೆ ಈ ಮೂಲೆ ಯಲ್ಲಿಯೇ ಏಳು ಪ್ರತಿನಿಧಿಗಳು ಲುಯೀಗೆ 'ಮರಣ, ಮರಣ' ವೆಂದು ಒಬ್ಬರಹಿಂದೊಬ್ಬರು ಕೂಗಿಕೊಂಡು ಶಿಕ್ಷೆಯನ್ನು ವಿಧಿಸಿದ್ದರು.

ಇಂಥ ಅಮರ ಧ್ವನಿಯಿಂದಲೇ ಇತಿಹಾಸವು ತುಂಬಿದೆ. ಈ ಅಮರ ಧ್ವನಿಯೇ ಜಗತ್ತಿನಲ್ಲಿ ನ್ಯಾಯವಾದ್ದರಿಂದ ಸ್ಮಶಾನಭೂಮಿಯಲ್ಲಿ ಉದ್ಭವ ವಾಗಿ ನ್ಯಾಯಮಂದಿರದ ಬಾಗಿಲಕ್ಕೆ ಬಂದು ಅಪ್ಪಳಿಸುತ್ತದೆ. ಯಾರ ಬಾಯಿಂದ ಇಂಥ ನಿಘೃಣ ಶಿಕ್ಷೆಯ ಉಚ್ಚಾರವಾಯಿತೋ ಅಂಥವರನ್ನು ಜನರು ಬೊಟ್ಟುಮಾಡಿ ತೋರಿಸುತ್ತಾರೆ. ಪ್ಯಾಗನೆಲ್‌ನು 'ಮೃತ್ಯು! ರಾಜನ ಮೃತ್ಯುವನ್ನು ಬಿಟ್ಟು ಉಪಯೋಗವೇನು?' ಎಂದೆನ್ನುತ್ತಾನೆ. ಮಿಲೋನು 'ಇಂದು ಮೃತ್ಯುವಿನ ಸುಳಿದಾಟವಿಲ್ಲದಿದ್ದರೆ ಹುಡುಕಿ ತೆಗೆ ಯಿರಿ' ಎಂದೂ, ಸೆಂಟ್‌ಥೋರನು 'ಮನುಷ್ಯರ ರಕ್ತವನ್ನು ನೋಡಿದರೆ ನನಗೆ ಭಯವಾಗುತ್ತದೆ; ಆದರೆ ರಾಜನು ಮಾತ್ರ ಮನುಷ್ಯನಲ್ಲ' ಎಂದೂ, ಸೆಂಟ್ ಆ್ಯಂಡ್ರೆಯು 'ಎಲ್ಲಿಯ ವರೆಗೆ ಒತ್ತಾಯಪಡಿಸುವ ರಾಜನ ಕೊಲೆ ಯಾಗುವದಿಲ್ಲವೋ ಅಲ್ಲಿಯವರೆಗೆ ಜನರಿಗೆ ಸ್ವಾತಂತ್ರ್ಯ ದೊರೆಯುವದು ಶಕ್ಯವೇ ಇಲ್ಲ' ಎಂದೂ, ಲೇವಿ ಕೋಮಟೇರಿ 'ಎಲ್ಲಿಯ ವರೆಗೆ ಒತ್ತಾಯ ಪಡಿಸುವ ರಾಜನು ಶ್ವಾಸೋಚ್ಛ್ವಾಸ ಮಾಡುತ್ತಾನೋ ಅಲ್ಲಿಯ ವರೆಗೆ ಸ್ವಾತಂತ್ರ್ಯೋದಯವಾಗುವದೇ ಇಲ್ಲ' ಎಂದೂ, ಟೇಲಿಯರ್‌ನು

‘ವೈರಿಗಳ ಮೇಲೆ ಯಾವ ತೋಫುಗಳನ್ನು ನಾವು ಹಾರಿಸುವವರಿರುತ್ತೇವೋ ಅವುಗಳನ್ನು ಮೊದಲಿಗೆ ಲುಯಿಯ ತಲೆಯ ಮೇಲೆ ಹಾಕಬೇಕು’ ಎಂದೂ ಅಭಿಪ್ರಾಯಪಟ್ಟಿದ್ದರು.

ಅವರ ಮುಖಗಳಿಂದ ಇಂಥ ಕಠೋರ ಶಿಕ್ಷೆಯು ಹೊರಡುತ್ತಿರುವಾಗ ಮತ್ತು ಐತಿಹಾಸಿಕ ಗ್ರಂಥಭಾಂಡಾರದಲ್ಲಿ ಇದು ಬರೆಯಲ್ಪಡುತ್ತಿರುವಾಗ ಅಮೌಲ್ಯಾಭರಣಗಳಿಂದಲಂಕೃತರಾದ ಕೆಲವು ಸ್ತ್ರೀಯರು ಸ್ತ್ರೀಯರಿಗಾಗಿರುವ ಸ್ಥಳದಲ್ಲಿ ಕುಳಿತುಕೊಂಡು ಈ ಉದ್ಗಾರಗಳನ್ನು ಎಣಿಸುತ್ತ, ಪ್ರತಿಯೊಂದು ಮತದ ಕಾಗದಕ್ಕೆ ಟಾಚನಿಯನ್ನು ಚುಚ್ಚುತ್ತಿದ್ದರು. ಯಾವಾಗ ಬೇಕಾದಾಗ ಈ ಭವ್ಯ ಭವನವನ್ನು ನೋಡಲು ಹೋದರೂ ಈ ಕಾಲದ ದೃಶ್ಯವು ಕಣ್ಮುಂದೆ ಕಟ್ಟಿದಿರುತ್ತಿರಲಿಲ್ಲ. ಆದರಿಂದ ನೆನಪಾಗಿ ಬುದ್ಧಿಯು ಜಾಗೃತವಾಗುತ್ತಿತ್ತು. ಜನವರಿ ೨೧ನೇ ತಾರೀಖಿನ ನೆನಪು ಪ್ರತಿಯೊಂದು ಕಲ್ಲಿನಲ್ಲಿಯೂ ಕಟ್ಟಿಗೆಯಲ್ಲಿಯೂ ಕೊರೆದಿರುವಂತೆ ಭಾಸವಾಗುತ್ತಿತ್ತು. ಆ ಕಾಲದ ಸಭೆಯು ಇಷ್ಟು ಪ್ರಚಂಡವಾಗಿತ್ತು. ಅಲ್ಲಿ ನೆರೆದ ಸದಸ್ಯರ ಬಾಯಿಯಿಂದ ಇಂಥ ಘೂತ್ಕಾರ ಹೊರಡುತ್ತಿತ್ತು. ಈ ಘೂತ್ಕಾರದಿಂದಲೇ ೧೪ ಶತಮಾನಗಳಿಂದ ಮೆರೆಯುತ್ತ ಬಂದ ರಾಜಸತ್ತೆಯು ಮಣ್ಣು ಮುಕ್ಕಿ ಹೋಯಿತು. ಲುಯಿಯ ಸ್ವರೂಪದಿಂದ ಜಗತ್ತಿನಲ್ಲಿಯ ಎಲ್ಲ ರಾಜರಿಗೆ ತಮ್ಮ ದೈವದ ಗತಿಯು ಈ ರೀತಿ ನಿರ್ಣಯಿಸಲ್ಪಡಬಹುದೆಂದು ಸಾರಿ ಹೇಳುವಂತಾಗಿತ್ತು. ಜನಸಭೆಯ ಯಾವುದೇ ಸಭೆ ಜರುಗಲಿ; ಆ ಸಭೆಯಲ್ಲಿ ೧೬ನೇ ಲುಯಿಯ ಮೃತ್ಯುವಿನ ಚಿತ್ರವು ತೂಗುಹಾಕಲ್ಪಟ್ಟಿದೆಯೆಂದು ಭಾಸವಾಗದೆ ಇರುತ್ತಿದ್ದಿಲ್ಲ. ಲುಯಿಯ ಮರಣದ ತರುವಾಯ ರಾಬೆಸ್ಪಿಯರ, ಮಾರೆ, ಡಾಂಟನ್ ಮೊದಲಾದವರ ಮರಣವು ವರುಷ ಅಥವಾ ಒಂದೂವರೆ ವರುಷದಲ್ಲಿ ಬರತಕ್ಕದ್ದೇ ಇತ್ತು. ಮೃತ್ಯುಮುಖದಿಂದ ಪಾರಾಗುವವರು ಯಾರಿರುತ್ತಾರೆ?

ಜನರು ಈ ಸಭೆಯ ಕಾರ್ಯಕಲಾಪಗಳನ್ನು ಬಹು ಆಸ್ಥೆಯಿಂದ ಜರುಗಿಸುತ್ತಿದ್ದರು. ಜನಸಮೂಹವೇ ನೆರೆದು ದೊಡ್ಡ ಗೊಂದಲವೇ ಏಳುತ್ತಿತ್ತು. ಇಂಥವೇಳೆಯಲ್ಲಿ ಅಧಿಕಾರಿಗಳ ಹಾಗೂ ಜನರ ಮಾತುಕತೆ

ಗಳು ನಡೆಯುತ್ತಿದ್ದವು. ಆದರಿಂದ ಸಭೆಯ ಶಾಂತತೆಯು ಭಂಗವಾಗು ತ್ತಿತ್ತು. ಅಧಿಕಾರಿಗಳು ಜನಮತವನ್ನು ಲೆಕ್ಕಿಸದೆ ವರ್ತಿಸಿದಾಗ ಜನರು ತಮ್ಮ ಅರ್ಜಿಗಳನ್ನೂ ಶಿಷ್ಟಮಂಡಳಗಳನ್ನೂ ತೆಗೆದುಕೊಂಡು ಜನಸಮು ದಾಯದ ಮುಂದೆ ನಿಲ್ಲುತ್ತಿದ್ದರು. ಕೆಲವು ಕಡೆಯ ಪ್ರತಿನಿಧಿಗಳು ತಮ್ಮೊಂದಿಗೆ ಬಂಗಾರ-ಬೆಳ್ಳಿಯ ತುಂಡುಗಳನ್ನೂ, ಬೆಳ್ಳಿ; ತಾಂಬ್ರದ ಪಾತ್ರೆಗಳನ್ನೂ ತೆಗೆದುಕೊಂಡು ಬಂದು ದೇಶದೊಳಗಿನ ಭಿಕ್ಷುಕರಿಗೆ ಬಹು ಮಾನವೆಂದು ಕೊಡುತ್ತಿದ್ದರು. ಕೆಲವು ಜನರು ದೇಶಭಕ್ತರ ಪ್ರತಿಮೆ ಗಳನ್ನು ತರುತ್ತಿದ್ದರು. ಹಲವಾರು ಹೆಂಗಸರು ಹೂಗಳನ್ನು ತಂದು ಪ್ರತಿ ನಿಧಿಗಳ ಮೈಮೇಲೆ ಮಳೆಗರೆಯುತ್ತಿದ್ದರು. ಹಳ್ಳಿವಾಡದ ಜನರು ಕುಣಿ ಯುತ್ತ, ಬಾರಿಸುತ್ತ ಅಲ್ಲಿಗೆ ಬಂದು ದೇಶಕ್ಕೆ ಒಳ್ಳೇ ಸ್ಥಿತಿಯನ್ನು ತಂದು ಕೊಟ್ಟವರೆಂದು ಅವರಿಗೆ ಧನ್ಯವಾದಗಳನ್ನು ಅರ್ಪಿಸುತ್ತಿದ್ದರು. ಕೆಲವು ಸ್ತ್ರೀಯರಂತೂ ಬೇಕಂತೆ ಬಂದು ತಾವು ಪ್ರಜಾಪಕ್ಷದ ಜನರೊಂದಿಗೆ ಮದುವೆ ಮಾಡಿಕೊಳ್ಳುತ್ತೇವೆಂದು ಪ್ರತಿಜ್ಞೆ ಮಾಡುತ್ತಿದ್ದರು. ಒಮ್ಮೊಮ್ಮೆ ಅಲ್ಲಿಯ ಕೆಲ ಸದಸ್ಯರು ಮುಂದೆ ಬಂದು 'ಜನರೇ, ನೀವು ಸತ್ಯವನ್ನು ಪುರಸ್ಕರಿಸುವಂಥವರು. ನೀವು ಶ್ರೇಷ್ಠ ತರಗತಿಯವರು' ಎಂದು ಸ್ತುತಿ ಮಾಡುತ್ತಿದ್ದರು. ಅದು ತಮಗೆ ಒಪ್ಪಿಗೆಯಾದುದೆಂಬದನ್ನು ತೋರಿಸು ವಂತೆ, ಆ ಜನಸಮುದಾಯವು ಅತ್ಯಾನಂದದಿಂದ ತಮ್ಮ ಮನೆಗಳಿಗೆ ತೆರಳುತ್ತಿದ್ದರು.

ರಾಜಕ್ರಾಂತಿಯಾದಮೇಲೆ ಸುಧಾರಣೆಗಳನ್ನು ಮಾಡಲು ಆರಂಭ ಮಾಡಿದರು. ಈ ಮಂಥನದಲ್ಲಿ ವಿಧಾಯಕ ಕಾರ್ಯಕ್ರಮಗಳೇ ಹೆಚ್ಚಾಗಿ ರುತ್ತಿದ್ದವು. ನ್ಯಾಯ, ಉದಾರತನ, ಸದಾಚಾರ, ಸತ್ಯ, ಪ್ರೇಮ ಮೊದ ಲಾದ ದಿವ್ಯ ರತ್ನಗಳೂ ಪ್ರಕಟವಾದವು. 'ಎಲ್ಲಿ ಒಬ್ಬನ ಸ್ವಾತಂತ್ರ್ಯವು ಹರಣವಾಯಿತೋ ಅಲ್ಲಿ ಮತ್ತೊಬ್ಬನ ಸ್ವಾತಂತ್ರ್ಯವು ಹುಟ್ಟುತ್ತದೆ' ಎಂಬ ಹೊಸ ಸಿದ್ಧಾಂತವನ್ನು ಅವರು ಪ್ರಸ್ತಾಪಿಸತೊಡಗಿದರು. ಈ ಒಂದೇ ತತ್ವದಲ್ಲಿ ಮಾನವ ಶಾಸ್ತ್ರದ ಎಲ್ಲ ತತ್ವಗಳು ಅಡಕವಾಗಿರುತ್ತವೆ. ಅವರು ಗುಲಾಮರ ವ್ಯಾಪಾರವನ್ನು ನಿಲ್ಲಿಸಿದರು. ಕಿವುಡರು—ಕುರುಡರು—

ಕುಂಟರಿಗೆ ಅಭಯದಾನ ಮಾಡಿದರು; ರಾಷ್ಟ್ರೀಯ ಶಿಕ್ಷಣವನ್ನಾರಂಭಿಸಿದರು. ಆರ್ಥಿಕ, ರಾಜಕೀಯ ಮೊದಲಾದ ವಿಷಯದಲ್ಲಿ ಅನೇಕಾನೇಕ ಸುಧಾರಣೆಗಳನ್ನು ಮಾಡಿದರು ಈ ಸುಧಾರಣೆಗಳು ವೆಂಡೀ ರೂಪಿನ ಸರ್ಪವು ಅವರ ಹೊಟ್ಟೆಯಲ್ಲಿ ಜೀವಂತವಾಗಿದ್ದರೂ ಮತ್ತು ರಾಜರೂಪೀ ಹುಲಿಯು ಅವರ ಮೈ ಮೇಲೆ ಥಕ ಥೈ ಎಂದು ಕುಣಿಯುತ್ತಿದ್ದರೂ ಮುಂದರಿಸಲ್ಪಟ್ಟವೆಂಬವನ್ನಷ್ಟು ಲಕ್ಷ್ಯದಲ್ಲಿಟ್ಟರೆ ಸಾಕು.

ಜನಸಭೆಯ ಪ್ರತಿನಿಧಿಗಳು ಕಚೇರಿಯಲ್ಲಿ ಬಿಚ್ಚು ಮನಸಿನಿಂದ ಮಾತಾಡಿ, ಹರಟೆಕೊಚ್ಚುತ್ತಿದ್ದರು.

'ರಾಬೆಸ್ಪಿಯರನೇ, ನೀನು ಬಹಳ ಉಬ್ಬಿಹೋಗಿರುವಿ. ಸ್ವಲ್ಪ ತಾಳದ ಮೇಲೆ ಬಾ' ಎಂದು ಪಿರನ್‌ಸು ಕೂಗಿದನು.

'ಓಹೋ, ನಿನ್ನ ಬಗ್ಗೆಯೇ ಮಾತಾಡುವವನಿದ್ದೆ; ಸ್ವಲ್ಪ ಸೈರಿಸು. ನಿನ್ನ ಕಡೆಗೆ ನಾನೇ ಬರುತ್ತೇನೆ' ಎಂದು ರಾಬೆಸ್ಪಿಯರನು ಉತ್ತರ ಕೊಡುವಷ್ಟರಲ್ಲಿಯೇ ಯಾರೋ ಒಬ್ಬರು 'ಮಾರೇ, ನಿನ್ನ ಅವತಾರವನ್ನು ಮುಗಿಯಿಸು' ಎಂದರು. ಅದನ್ನು ಕೇಳಿ ಮಾರೆಯು 'ಯಾವ ದಿನ ನನ್ನ ಅವತಾರ ಸಮಾಪ್ತವಾಗುತ್ತದೋ ಆ ದಿನವೇ ಪ್ಯಾರಿಸದ ಕಾರಭಾರವು ನಿಂತಿತೆಂದೇ ತಿಳಿ; ಪ್ಯಾರಿಸವು ಗೋವಿಂದವಾದೊಡನೆಯೇ ನಿಮ್ಮ ಲೋಕಸತ್ತೆಯ ಅಂತ್ಯಕಾಲವು ಬಂದಂತೆಯೇ' ಎಂದು ಹೇಳಿದನು. ಈ ಪ್ರಕಾರವಾಗಿ ಅವರ ಹರಟೆಯು ಸರಾಗವಾಗಿ ಸಾಗುತ್ತಿತ್ತು.

ಈ ಸಭೆಯ ಸದಸ್ಯನಾಗುವದೆಂದರೆ ಸಮುದ್ರದ ತೆರೆಯಾದಂತೆ. ಇದು ಒಳ್ಳೇ ಪ್ರಮುಖ ಪ್ರತಿಷ್ಠಿತರ ಹಣೆಬರಹವಾಗಿತ್ತು. ಈ ಸಭೆಯಲ್ಲಿ ಯಾವ ಕಲ್ಪನಾವಿಚಾರಗಳು ನಡೆಯುತ್ತಿದ್ದವೋ ಅವೆಲ್ಲವುಗಳ ಮೇಲೆ ಎಲ್ಲ ಜನರ ಅಧಿಕಾರವು ಅಷ್ಟೇ ನಡೆಯುತ್ತಿತ್ತು ಇಲ್ಲಿಯ ವಿಚಾರಲಹರಿಗಳು ಆಕಾಶದಿಂದ ಹೊರಟು ಪಾತಾಳಕ್ಕೆ ಹೋಗಿ ಅಡಗಿ ಬಿಡುತ್ತಿದ್ದವು. ಇದಕ್ಕೇ ನಾವು ಕ್ರಾಂತಿಯೆನ್ನುತ್ತೇವೆ. ಈ ಕಲ್ಪನೆಯಾಯಿತೆಂದರೆ ಒಬ್ಬರನ್ನು ಅಟ್ಟಕೇರಿಸುವದು; ಮತ್ತೊಬ್ಬರನ್ನು ರಸಾತಳಕ್ಕೆ ಮೆಟ್ಟುವದು. ಈ ಕಲ್ಪನೆಗೆ ತಾನು ಮಾಡುತ್ತಿರುವ ಘಟನಾಘಟಿತ ಕಾರ್ಯಗಳ

ಕಲ್ಪನೆಯಾದರೂ ಬರುವದು ಸಾಧ್ಯವೇ ? ಆದಕಾರಣ ಮನುಷ್ಯರ ಕೈಯಿಂದ ರಾಜ್ಯಕ್ರಾಂತಿಯಾಗುತ್ತದೆನ್ನುವದೆಂದರೆ ತೆರೆಗಳ ಯೋಗದಿಂದ ಸಮುದ್ರಕ್ಕೆ ಭರತಿಯುಂಟಾಗುವದು ಎಂದಹಾಗಾಗುತ್ತದೆ.

ರಾಜ್ಯಕ್ರಾಂತಿಯೆಂಬದು ಅಜ್ಞಾತ ಶಕ್ತಿಯೊಂದರ ಕಾರ್ಯವಾಗಿದೆ. ಅದಕ್ಕೆ ಒಳಿತೆನ್ನಿರಿ ಅಥವಾ ಕೆಡುಕೆನ್ನಿರಿ; ಆದರೆ ಆದನ್ನು ಅದಕ್ಕೆ ಜನ್ಮ ಕೊಟ್ಟ ವರ ವಶಕ್ಕೆ ಕೊಡಬೇಕು. ಮಹಾ ವ್ಯಕ್ತಿಗಳ ಹಾಗೂ ಸಂದರ್ಭಾನುಸಾರ ವಾದ ಕಾಲದ ಸಂಯೋಗದಿಂದ ಕ್ರಾಂತಿಯು ಸಂಭವಿಸುವದು ಎಂದು ಬೇಕಾದರೆ ಅನ್ನಿರಿ. ಆದರೆ ಕ್ರಾಂತಿಯು ಈ ದೊಡ್ಡ ಗೊಂದಲದಿಂದಾಗುತ್ತಿ ರುತ್ತದೆ. ಮನುಷ್ಯನಿಗಿಂತಲೂ ಕಾರಣಗಳಿಗೆ ಹೆಚ್ಚಿನ ಮಹತ್ವವಿದೆ ಕಾರಣಗಳ ಅಭಾವವಿದ್ದರೆ ಮನುಷ್ಯನೇನು ಮಾಡಬಲ್ಲನು ! ಇದರ ಸೂತ್ರಗಳೆಲ್ಲವೂ ಸರ್ವಶಕ್ತಿವಂತನಾದ ಪರಮೇಶ್ವರನಿಂದಲೇ ನಡೆಯು ಬಲ್ಲವಾಗಿವೆ.

ರಾಜ್ಯಕ್ರಾಂತಿಯು ಶಾಶ್ವತಕಾಲದಿಂದಲೂ ನಡೆಯುತ್ತ ಬಂದ ಚಮ ತ್ಕಾರದ ಒಂದು ಪ್ರಕಾರವಾಗಿದೆ. ಈ ಚಮತ್ಕಾರವು ನಮ್ಮ ಮೇಲೆ ಸುತ್ತೂ ಕಡೆಯಿಂದಲೂ ಮುತ್ತಿ ಬರುತ್ತದೆ. ಇದಕ್ಕೆಯೆ ನಾವು ಆವಶ್ಯಕತೆಯೆಂದು ಕರೆಯುತ್ತೇವೆ. ಸುಖದುಃಖಗಳ ಈ ರಹಸ್ಯಮಯವಾದ ಗೊಂದಲದಿಂದ ಇತಿಹಾಸವು ಇದೆಲ್ಲಾ ಏತಕ್ಕಾಗಿ ಎಂಬ ಪ್ರಶ್ನೆಯನ್ನು ಕೇಳುತ್ತದೆ. ಈ ಪ್ರಶ್ನೆಯ ಉತ್ತರವನ್ನು ಅಜ್ಞನು ಕೊಡುವಂತೆ ಸುಜ್ಞನೂ ಕೊಡು ತ್ತಾನೆ. ಯಾವ ಭೀಷಣ ಕೃತಿಗಳಿಂದ ಸುಧಾರಣೆಗಳು ರಸಾತಳವನ್ನು ಕಾಣುವವೋ ಮತ್ತು ಪುನರ್ಜನ್ಮವನ್ನು ಪಡೆಯುವವೋ ಅಂಥವುಗಳ ಸ್ತುತಿ ಮಾಡಲು ಮನುಷ್ಯನು ಹಿಂದೆ ಮುಂದೆ ನೋಡುತ್ತಾನೆ ಕಾರ್ಯ ನಿಷ್ಪತ್ತಿಯಾಯಿತೆಂದು ಮನುಷ್ಯನ ನಿಂದೆಯನ್ನಾಗಲಿ, ಸ್ತುತಿಯನ್ನಾಗಲಿ ಮಾಡ.ವದೆಂದರೆ ಉಳಿದುದರೊಳಗಿನ ಶೂನ್ಯದ ಸ್ತುತಿಯನ್ನಾಗಲಿ ನಿಂದೆ ಯನ್ನಾಗಲಿ ಮಾಡಿದಂತಾಗುತ್ತದೆ ಯಾವ ವಿಧಿಘಟಿತವಿದೆಯೋ ಅಂಥದು ಸಂಭವಿಸುತ್ತದೆ. ಗಾಳಿಯು ಎತ್ತಲ್ಲಿಂದ ಬೀಸತಕ್ಕದ್ದೋ ಅದೇ ದಿಕ್ಕಿ ನಿಂದ ಅದು ಬೀಸತಕ್ಕದ್ದೇ. ಇಂಥ ಗಾಳಿಯ ಯೋಗದಿಂದ ಶಾಶ್ವತ

ಶಾಂತಿಯ ಭಂಗವಾಗುವದಿಲ್ಲ. ಬಿರುಗಾಳಿಯ ಮೇಲೆ ನಕ್ಷತ್ರದಿಂದ ತುಂಬಿದ ಆಕಾಶವಿರುವಂತೆ ರಾಜ್ಯಕ್ರಾಂತಿಯ ಮೇಲೆ ನ್ಯಾಯವೂ ಸತ್ಯವೂ ಇರುತ್ತದೆ.

ಈ ಪ್ರಕಾರವಾಗಿ ಜನಸಭೆಯಿತ್ತು. ಮನುಷ್ಯ ಜಾತಿಯಿಂದ ವಿಭಕ್ತವಾದ ಜನಸಮುದಾಯವೇ ಈ ಸಭೆಯ ಸದಸ್ಯರಾಗಿದ್ದರು. ಇದ ರಂಥ ಎರಡನೆಯ ಯಾವ ವಸ್ತುವೂ ಇತಿಹಾಸದಲ್ಲಿ ದೊರೆಯಲಾರದು. ಈ ಸಭೆಯ ಮುಖವು ಯಾವಾಗಲೂ ಗಾಳಿಯ ಕಡೆಗೇ ಇರುತ್ತಿತ್ತು. ಆದರೆ ಈ ಗಾಳಿಯು ಜನತೆಯ ಮುಖದಿಂದ ಹೊರಡುವ ಈಶ್ವರನ ಉಸಿ ರಿನಂತಿತ್ತು. ಇಷ್ಟೊಂದು ಕಾಲವು ಗತಿಸಿ ಹೋಗಿದ್ದರೂ ಯಾರು ಯಾರು ಇದನ್ನು ಸ್ಮರಿಸುವರೋ ಅಂಥಂಥವರಿಗೆ ದೀರ್ಘಕಾಲ ವಿಚಾರ ಮಾಡದೆ ಹೊಳೆಯುವದು ದುಸ್ಸಾಧ್ಯವಾದ ಮಾತು.

ಜನಸಭೆಯ ಮುಂದೆ ಈ ವೆಂಡಿಯ ಪ್ರಶ್ನೆಯುಂಟಾಗಿತ್ತು. ಯಾರು ವೆಂಡಿಯ ಸಲುವಾಗಿ ಕೆಲಸ ಮಾಡುವರೋ ಅಂಥ ಅಪರಾಧಿಗಳಿಗೆ ಗಲ್ಲಿನ ಶಿಕ್ಷೆಯನ್ನು ಕೊಡಲಾಗುವದೆಂಬ ಆಜ್ಞೆಯು ಸುತ್ತಲೂ ಸಾರಲ್ಪಟ್ಟಿತ್ತು.

---

## ೧೦.

ಜುಲೈ ೧೭೯೩. ಸೂರ್ಯಾಸ್ತವಾಗುವ ಸಮಯದಲ್ಲಿ ಕುದುರೆ ಸವಾರ ನೊಬ್ಬನು ತನ್ನ ಕುದುರೆಯ ಲಗಾಮನ್ನು ಜಗ್ಗಿ ಬಿಗಿಹಿಡಿದು, ಬ್ರಿಟನಿ ಯೊಳಗಿನ ಒಂದು ಊಟದ ಮನೆಯ ಮುಂದೆ ಬಂದು ನಿಂತನು. ಈ ಪ್ರವಾಸಿಯು ಮೈಮೇಲೊಂದು ದೊಡ್ಡ ನಿಲುವಂಗಿಯಿದ್ದುದರಿಂದ ಕುದು ರೆಯ ಬೆನ್ನೂ ಕೂಡ ಮುಚ್ಚಿಹೋಗಿತ್ತು. ಅವನ ತಲೆಯ ಮೇಲೆ ಮೂರು ಬಣ್ಣದ ಟೊಪ್ಪಿಗೆಯಿತ್ತು. ಈ ಚಿನ್ಹವನ್ನು ತಲೆಯಲ್ಲಿ ಧರಿಸಿಕೊಂಡು ಹಳ್ಳಿಯ ಜನರಲ್ಲಿ ತಿರುಗಾಡುವದೆಂದರೆ ಬಹಳ ಧೈರ್ಯದ ಮಾತಾಗಿತ್ತು. ಯಾಕೆಂದರೆ ಈ ಚಿನ್ಹವು ಪ್ರಜಾಪಕ್ಷದ ದ್ಯೋತಕವಾದ್ದರಿಂದ ಹಳ್ಳಿಯ

ಜನರು ಈ ಚಿನ್ಹ ಧಾರಣ ಮಾಡಿದವರು ಸಿಕ್ಕರೆಂದರೆ ಅವರನ್ನು ಯಮಸದ ನಕ್ಕೆ ಅಟ್ಟದೆ ಬಿಡುತ್ತಿದ್ದಿಲ್ಲ ಆ ನಿಲುವಂಗಿಯನ್ನು ಅವನು ಕೊರಳಿಗೆ ಸುತ್ತಿಕೊಂಡು ಬೆನ್ನು ಮೇಲೆ ಇಳಿಬಿಟ್ಟಿದ್ದನಾದ್ದರಿಂದ ಅವನ ಕೈಗಳು ಹೊರಗೇ ಇದ್ದವು. ಅವನ ಸಡುಪಟ್ಟಿಯೂ ಮೂರು ಬಣ್ಣದ್ದಿದ್ದು ಅದ ರಲ್ಲಿ ತುಂಬಿದ ಎರಡು ಪಿಸ್ತೂಲುಗಳು ಕಾಣಿಸುತ್ತಿದ್ದವು. ಅಲ್ಲದೆ ಒಂದು ಸಣ್ಣ ಕೈಗತ್ತಿಯೂ ಜೋತಾಡುತ್ತಿತ್ತು. ಕುದುರೆಯ ಖುರಪುಟ ಧ್ವನಿ ಯನ್ನು ಕೇಳಿ ಆ ಊಟದ ಮನೆಯ ಯಜಮಾನನು ಕೈಯಲ್ಲಿ ಕಂದೀ ಲನ್ನು ತೆಗೆದುಕೊಂಡು ಬಾಗಿಲಿಗೆ ಬಂದನು. ಇನ್ನೂ ಬೀದಿಯಲ್ಲಿ ಬೆಳಕಿ ತ್ತಾದರೂ ಮನೆಯೊಳಗೆ ಕತ್ತಲುಗವಿದಿತ್ತು. ಆ ಯಜಮಾನನು ಅವನನ್ನು ನೋಡಿ "ಏನು ಮಹಾರಾಜರೇ, ಇಲ್ಲಿ ತಂಗುವಿರೇನು." ಎಂದು ವಿಚಾರಿಸಿದನು.

"ಇಲ್ಲ; ಡೋಲಕ್ಕೆ ಹೋಗಬೇಕಾಗಿದೆ."

"ಹಾಗಾದರೆ ಹಿಂದಿನ ಊರಿಗೆ ಹೋಗಿರಿ, ಇಲ್ಲವಾದರೆ ರಾತ್ರಿಯನ್ನು ಇಲ್ಲಿಯೇ ಕಳೆಯಿರಿ."

"ಯಾಕೆ ಹೀಗೆ ಹೇಳುತ್ತಿರುವಿ ?"

"ಯಾಕೆಂದರೆ ಡೋಲದಲ್ಲಿ ಯುದ್ಧ ನಡೆದಿದೆ."

"ಓಹೋ! ಹಾಗಿದ್ದರೆ ಒಳ್ಳೆಯದೆ ಆಯಿತು. ಕುದುರೆಗೆ ಕಾಳು ಕೊಡು."

ಅವನು ಒಳಗಿನಿಂದ 'ದಾಣಿ' ತಂದುಕೊಟ್ಟನು. ತೋಬರಿಯಲ್ಲಿ ಹಾಕಿ ಕುದುರೆಯ ಮುಖಕ್ಕೆ ಕಟ್ಟಿದನು. ಅದು ಕುಟುಂ ಕುಟುಂ ಎಂದು ತಿನ್ನತೊಡಗಿತು. ಆ ಮೇಲೆ ಮಾತಿಗೆ ಆರಂಭವಾಯಿತು.

"ಈ ಕುದುರೆಯು ತಮ್ಮದ್ದೋ ಅಥವಾ ಸರಕಾರದ್ದೋ ?"

"ನನ್ನದು. ನಾನೇ ಕೊಂಡುಕೊಂಡಿದ್ದೇನೆ."

"ತಾವು ಎಲ್ಲಿಯವರು ?"

"ಪ್ಯಾರಿಸದವನು."

"ಪ್ಯಾರಿಸ್ ಪಟ್ಟಣವೇ ?"

“ ಅಲ್ಲ. ”

“ ನನಗೆ ಹಾಗೆ ಅನಿಸಿಯೇ ಅನಿಸಿತು. ದಾರಿಗಳೆಲ್ಲ ಕಟ್ಟಾಗಿವೆ. ಆದರೆ ಅಂಚೆ ಮಾತ್ರ ಹೋಗುತ್ತಿದೆ; ಬೇಗನೆ ಅದೂ ಬಂದಾಗಬಹುದು. ಕುದುರೆ ದೊರೆಯುವದೂ ಅಸಾಧ್ಯವಾಗಿದೆ. ಕುದುರೆಯ ಬೆಲೆಯೂ, ದಾಣಿಯ ಬೆಲೆಯೂ ಮಿತಿಮೀರಿ ಏರಿದೆ. ನಾನೊಬ್ಬ ಪೋಸ್ಟಮಾಸ್ತರ ನಾಗಿದ್ದೆ; ಆದರೆ ಈಗ ಈ ಊಟದ ಮನೆ ಹಾಕುವ ಹೊತ್ತು ಬಂದಿದೆ. ತಾವು ಪ್ರವಾಸ ಕೈಕೊಂಡು ಎಷ್ಟು ದಿನಗಳಾದವು ? ”

“ ಮೊನ್ನಿನಿಂದಲೂ. ”

“ ಹಾಗಾದರೆ ನನ್ನ ಮಾತನ್ನಷ್ಟು ಕೇಳಿರಿ. ನೀವೂ, ನಿಮ್ಮ ಕುದುರೆಯೂ ದಣಿದಂತೆ ಕಾಣುತ್ತದೆ. ಈ ರಾತ್ರಿ ನೀವು ವಿಶ್ರಾಂತಿ ತೆಗೆದು ಕೊಳ್ಳಿರಿ. ”

“ ಕುದುರೆ ದಣಿಯಲು ಹಕ್ಕಿದೆ; ಆದರೆ ಮನುಷ್ಯನಿಗಿಲ್ಲ. ”

ಅವನು ಆ ಸ್ವಾರನ ಕಡೆಗೆ ಎವೆ ಪಿಳುಕಿಸದೆ ನೋಡತೊಡಗಿದನು. ಅವನ ಮುಖಚರ್ಯೆಯು ಗಂಭೀರವೂ ಉಗ್ರವೂ ಕಾಣುತ್ತಿದ್ದರೂ ವ್ಯಗ್ರ ವಾಗಿರಲಿಲ್ಲ. ಆ ಸ್ವಾರನನ್ನೂ ಅವನು ಬಂದಂಥ ದಾರಿಯ ನಿಟ್ಟನ್ನೂ ನೋಡಿ ಆ ಊಟದ ಮನೆಯ ಯಜಮಾನನು ‘ ನೀವೊಬ್ಬರೇ ಪ್ರವಾಸ ಮಾಡುತ್ತ ಬಂದಿರಾ ? ’ ಎಂದು ವಿಚಾರಿಸಿದನು.

‘ ಇಲ್ಲ; ನನ್ನೊಂದಿಗೆ ಜೊತೆ ಇತ್ತು.’

‘ ಅವರೆಲ್ಲಿರುವರು ? ’

‘ ನೋಡಿರಿ, ಆ ಜೊತೆಯೆಂದರೆ ಈ ಪಿಸ್ತೂಲುಗಳು ಮತ್ತು ಈ ಕತ್ತಿಯು.’

ಅವನು ಗಂಗಾಳದ ತುಂಬ ನೀರು ತಂದು ಕುದುರೆಯ ಮುಂದಿಟ್ಟು ಸ್ವಾರನನ್ನು ಚನ್ನಾಗಿ ನಿರೀಕ್ಷಿಸತೊಡಗಿದನು. ಈ ಸ್ವಾರನು ಕಾಣುವಂತೆ ಅವನು ನಿಜವಾಗಿಯೇ ಸ್ವಾರನಿರುವದಿಲ್ಲೆಂದು ಅವನಿಗೆ ನಂಬಿಗೆಯಾಯಿತು. ‘ ಇವನು ಭಿಕ್ಷುಕನಿರಬಹುದು ’ ಎಂದು ತನ್ನಷ್ಟಕ್ಕೆ ಅವನಂದು ಕೊಂಡನು.

‘ ಡೋಲಲದಲ್ಲಿ ಯುದ್ಧವು ನಡೆದಿದೆಯೇ ! ’

‘ ಅಹುದು. ’

‘ ಯಾರು ಯಾರು ಯುದ್ಧ ಮಾಡುತ್ತಿದ್ದಾರೆ ? ’

‘ ರಾಜಪಕ್ಷೀಯ ಸರದಾರರೂ, ಪಜಾಪಕ್ಷೀಯ ಸರದಾರರೂ ಯುದ್ಧ ಮಾಡುತ್ತಿದ್ದಾರೆ. ’

‘ ಆದರೆ ಈಗೇನು ರಾಜನಂತೂ ಇಲ್ಲವೇ ಇಲ್ಲ ’

‘ ರಾಜನಿಲ್ಲದಿದ್ದರೇನು ? ಅವನ ಮಗನಿರುವದಿಲ್ಲವೋ ಏನು ! ಈ ಇಬ್ಬರೂ ಸರದಾರರು ಆಪ್ತರಿದ್ದುದು ಇನ್ನೊಂದು ವಿಶೇಷವಾಗಿದೆ. ಅವರಲ್ಲಿ ಒಬ್ಬನು ತರುಣನು; ಇನ್ನೊಬ್ಬನು ಮುದುಕನು. ಕಕ್ಕ-ಮಕ್ಕಳ ನಡುವೆ ಈ ಯುದ್ಧವು ಸಾಗಿದೆ. ಕಕ್ಕನು ರಾಜಕೀಯ ಪಕ್ಷದವನು; ಮಗನು ಲೋಕಪಕ್ಷದವನು. ಇವರಿಬ್ಬರಲ್ಲಿಯ ವಿರೋಧವು ಬಹಳ ತೀವ್ರವಾಗಿದೆ. ಇವರಿಬ್ಬರಲ್ಲಿ ಒಬ್ಬರ ತಲೆ ಬೀಳದ ಹೊರತು ಈ ಯುದ್ಧವೇನು ನಿಲ್ಲುವಂತೆ ಕಾಣುವದಿಲ್ಲ. ’

‘ ಏನು ತಲೆ ಬೀಳದ ಹೊರತೇ ? ’

‘ ಅಹುದು. ಅವರಿಬ್ಬರಲ್ಲಿಯ ವೈರತ್ವದ ನಿದರ್ಶನವಾಗಲೇಬೇಕಾಗಿದ್ದರೆ ಈ ಜಾಹೀರಾತು ಬೇಕಾದರೆ ನೋಡಿರಿ. ಆ ಮುದುಕನು ಎಂಥ ಜಾಹೀರಾತು ಪ್ರಕಟಿಸಿದ್ದಾನೆ ! ಪ್ರತಿಯೊಂದು ಮನೆಗೂ, ಪ್ರತಿಯೊಂದು ಬೀದಿಗೂ, ಗಿಡಕ್ಕೂ ಈ ಜಾಹಿರಾತನ್ನು ಅಂಟಿಸಲಾಗಿದೆ. ’ ಎಂದು ಆ ಯಜಮಾನನು ಕಂದೀಲನ್ನು ಮೇಲೆ ಎತ್ತಿ ಬಾಗಿಲಿಗೆ ಅಂಟಿಸಿದ ಜಾಹೀರಾತನ್ನು ಅವನಿಗೆ ತೋರಿಸಿದನು. ದೂರದಿಂದಲೇ ಓದಲು ಬರುವಷ್ಟು ಅಕ್ಷರಗಳು ದೊಡ್ಡವಾಗಿದ್ದವು. ಅದರಲ್ಲಿ “ ಮಾರ್ಕ್ವಿಸ್ ಲ್ಯಾಂಟನೆಕ್‌ನು ತನ್ನ ಮಗನಿಗೆ ಮಮತೆಯಿಂದ ‘ ನೀನು ಜೀವಂತ ಸಿಕ್ಕದ್ದೇ ಆದರೆ ನಿನ್ನನ್ನು ಬಹು ಸಂಭ್ರಮದಿಂದ ಕೊಂದಹಾಕಲಾಗುವದು ’ ಎಂದು ಸೂಚಿಸಿದ್ದಾನೆ. ” ಎಂದಿತ್ತು

ಇದು ಅದಕ್ಕೆ ಉತ್ತರ ದೊರೆತ ಜಾಹೀರಾತು ಎಂದು ಮತ್ತೊಂದನ್ನು ತೋರಿಸಿ “ ಗಾವೆನ್‌ನು ತನ್ನ ಕಕ್ಕನಿಗೆ ಆಜ್ಞಾಪಿಸುವದೇನೆಂದರೆ

‘ ಅವನನ್ನು ಕೊಂದು ಹಾಕಲಾಗುವದು ” ಎಂದು ಓದಿ ತೋರಿಸಿ ‘ ನಿನ್ನೆ ಆ ಜಾಹೀರಾತು ಹತ್ತಿತು. ಇಂದೇ ಮುಂಜಾನೆ ಈ ಜಾಹೀರಾತು ’ ಎಂದು ಹೇಳಿದನು. ಸ್ವಾರನು ಅದನ್ನು ಕೇಳಿಕೊಂಡು ಮನಸಿನಲ್ಲಿಯೇ ಏನೋ ಒಟಗುಟ್ಟಿಕೊಂಡನು.

‘ ಇದು ದೇಶದ ಯುದ್ಧವಾಗಿರದೆ ಕೌಟುಂಬಿಕ ಯುದ್ಧವಾಗಿದೆ. ಅದು ಅವಶ್ಯವಾಗಿದೆ; ನಡೆದುದೇ ಒಳ್ಳೆಯದಾಯಿತು ’ ಎಂದು ಅವನು ಟೊಪ್ಪಿಗೆಯನ್ನು ತೆಗೆದು ೨ ನೆಯ ಜಾಹೀರಾತಿಗೆ ವಂದಿಸಿದನು. ಯಜಮಾನನು ‘ ನಿಮಗೆ ವಸ್ತುಸ್ಥಿತಿಯು ಕಲ್ಪನೆಯಾಯಿತು. ಪಟ್ಟಣ ಮತ್ತು ದೊಡ್ಡ ಹಳ್ಳಿಗಳ ಜನರು ಕ್ರಾಂತಿಗೆ ಸಾನುಕೂಲರಾಗಿದ್ದಾರೆ. ಆದರೆ ಚಿಕ್ಕ ಚಿಕ್ಕ ಹಳ್ಳಿಯವರು ಅದಕ್ಕೆ ವಿರುದ್ಧವಾಗಿದ್ದಾರೆ. ಯಾಕೆಂದರೆ ಪಟ್ಟಣದ ನಿವಾಸಿಗಳು ಫ್ರೆಂಚ್‌ರಿದ್ದಾರೆ; ಹಳ್ಳಿಯವರು ಬ್ರಿಟನಿಗಳಾಗಿದ್ದಾರೆ. ಪಟ್ಟಣದಲ್ಲಿಯೂ ಹಳ್ಳಿಯಲ್ಲಿಯೂ ಈ ಯುದ್ಧವು ನಡೆದಿದೆ. ಅವರು ನಮಗೆ ‘ ಸೈತಾನ ’ ವೆನ್ನುತ್ತಾರೆ. ನಾವು ಅವರಿಗೆ ನೀಚರು ಎಂದೆನ್ನುತ್ತೇವೆ. ಅವರೊಂದಿಗೆ ಪಾದ್ರಿಯವರೂ ಸರದಾರರೂ ಸೇರಿಕೊಂಡಿದ್ದಾರೆ ’ ಎಂದು ವಿವರವಾಗಿ ಹೇಳಿದನು.

“ ಎಲ್ಲರೂ ಹಾಗೇನಿರಲಿಕ್ಕಿಲ್ಲ ? ”

“ ಇಲ್ಲ. ಒಬ್ಬ ಸರದಾರನು ಇನ್ನೊಬ್ಬ ಸರದಾರನೊಡನೆ ಯುದ್ಧ ಮಾಡುತ್ತಿದ್ದಾನೆ. ”

“ ಇಬ್ಬರಲ್ಲಿ ಯಾರು ಗೆದೆಯುಬಹುದು ? ”

“ ಇಲ್ಲಿಯವರೆಗೆ ತರುಣರ ಕೈ ಮೇಲಾಗಿದೆ. ಇದಕ್ಕೂ ಇನ್ನೂ ಹೆಚ್ಚಿಗೆ ಅವರು ಶ್ರಮಪಡಬೇಕು. ಮುದುಕನೂ ಬಲು ಗಟ್ಟಿಗನಾಗಿದ್ದಾನೆ. ಅವನೂ ಗಾವೆನ್ ಕುಟುಂಬದವನೇ. ಈ ಮನೆತನದಲ್ಲಿ ಎರಡು ಬಣಗಳಿವೆ. ದೊಡ್ಡ ಬಣಕ್ಕೆ ಲ್ಯಾಂಟ್‌ನೆಕ್‌ನು ಮುಖ್ಯಸ್ಥನಾಗಿದ್ದಾನೆ ಚಿಕ್ಕ ಬಣಕ್ಕೆ ವ್ಹಾಯ್‌ಕೌಂಟ ಗಾವೆನ್‌ನು ಮುಖ್ಯಸ್ಥನಾಗಿದ್ದಾನೆ. ಈ ಎರಡೂ ಬಣಗಳು ಒಂದಕ್ಕೊಂದು ಬಡದಾಡುತ್ತಿವೆ. ಈ ಲ್ಯಾಂಟ್‌ನೆಕ್‌ನು ಬ್ರಿಟನಿಯಲ್ಲಿ ಸರ್ವ ಸತ್ತಾಧೀಶನಾಗಿದ್ದಾನೆ. ಒಕ್ಕಲಿಗರು ಅವನೇ ತಮ್ಮ

ರಾಜನೆಂದು ಮನ್ನಿಸುತ್ತಾರೆ. ಅವನು ಯಾವ ದಿನ ದಂಡೆಯಲ್ಲಿಳಿದನೋ ಅಂದೇ ಎಂಟು ಸಾವಿರ ಜನರು ಅವನಿಗೆ ಬಂದು ಕೂಡಿದರು. ಒಂದೇ ವಾರದಲ್ಲಿ ೩೦೦ ಹಳ್ಳಿಗಳು ಬಂಡಾಯದ ಬಾವುಟವನ್ನೇರಿಸಿ ಯುದ್ಧದ ಸಿದ್ಧತೆಯಲ್ಲಿ ತೊಡಗಿದವು. ತೀರ ಪ್ರದೇಶದಲ್ಲಿ ಅವನ ಪ್ರಭಾವವು ಸಾಕಷ್ಟು ಬಲಿಷ್ಠವಾಗಿದ್ದರೆ ಇಂಗ್ಲಿಷರು ಅಲ್ಲಿಗೆ ಬರಬಹುದಾಗಿತ್ತು. ಆದರೆ ಗಾವೆನ್‌ನು ಸಮೀಪದಲ್ಲಿಯೇ ಇದ್ದನು. ಅವನು ಪ್ರಜಾಪಕ್ಷದ ಸೇನಾಪತಿ ಆದ್ದರಿಂದ ಅವನು ಮುದುಕನ ಹಂಚಿಕೆಗಳಿಗೆ ಕಲ್ಲು ಹಾಕಿದನು. ತೀರ ಪ್ರದೇಶದಲ್ಲಿ ಳಿದ ದಿನವೇ ಆ ಮುದುಕನು ಎಲ್ಲ ಕೈದಿಗಳ ರುಂಡುಗಳನ್ನು ಹಾರಿಸಿದನು. ಆ ಕಗ್ಗೊಲೆಯಲ್ಲಿಯೇ ಹೆಂಗಸರಿಬ್ಬರು ಕೊಲ್ಲಲ್ಪಟ್ಟರು. ಅವಳಲ್ಲೊಬ್ಬಳಿಗೆ ಮೂರು ಮಕ್ಕಳಿದ್ದವು. ಆ ಮೂರೂ ಮಕ್ಕಳನ್ನು ಪ್ಯಾರಿಸ್‌ಪಟ್ಟಣದ ತಂಡವೊಂದು ದತ್ತುತೆಗೆದುಕೊಂಡಿತು. ಆ ತಂಡದಲ್ಲಿಯ ಪುಂಡರು ಬಹು ಶೂರರಿದ್ದರು. ಅವರಲ್ಲಿ ಸ್ವಲ್ಪೇ ಜನರು ಜೀವಂತ ಉಳಿದಿದ್ದಾರೆ. ಆದರೆ ಉಳಿದವರು ಆ ಹೆಂಗಸರ ಕೊಲೆಯ ಸೇಡು ತೀರಿಸಿಕೊಂಡು ಆ ಹುಡುಗರನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಬೇಕೆಂದು ಭೀಷ್ಮಪ್ರತಿಜ್ಞೆಯನ್ನೇ ಮಾಡಿದ್ದಾರೆ. ಆ ಮಗುಗಳ ಸ್ಥಿತಿಯೇನಾಗಿದೆಯೋ ಯಾರಿಗೆ ಗೊತ್ತು ! ಈ ಯುದ್ಧದಲ್ಲಿ ಈ ಮಗುಗಳು ಸಿಗದೆ ಇದ್ದರೆ ಈ ಯುದ್ಧವು ಇಷ್ಟು ಉಗ್ರ ಸ್ವರೂಪವನ್ನು ತಾಳುತ್ತಿದ್ದಿಲ್ಲ. ಈ ಯುದ್ಧವು ದೇವದಾನವರ ಯುದ್ಧದಂತಾಗಿದೆ. ವ್ಹಾಯ್‌ಕೌಂಟನ ಪಕ್ಷವೇ ಸತ್ಯಪಕ್ಷವೆಂದು ಸಾರಲು ಹಲವರು ಹಿಂದೆಮುಂದೆ ನೋಡುವದಿಲ್ಲ.' ಎಂದು ಸಾದ್ಯಂತವಾದ ಸಂಗತಿಯನ್ನರುಹಿದನು.

'ಡೋಲದಲ್ಲಿ ಈಗೇನು ನಡೆದಿರಬಹುದು ?'

'ಗಾವೆನ್‌ನು ಸಮುದ್ರತೀರವನ್ನು ಸಂರಕ್ಷಿಸುತ್ತಿದ್ದಾನೆ. ಸುತ್ತೂ ಕಡೆಗೆ ಬಂಡಾಯವನ್ನು ಹೂಡಿ, ಸಮುದ್ರತೀರವನ್ನು ವಶಪಡಿಸಿಕೊಂಡು ಇಂಗ್ಲಿಷರನ್ನು ಒಳಗೆ ಬರಮಾಡಿಕೊಂಡು ವೆಂಡಿಯ ಸೈನಿಕರಿಗೆ ಮಾರ್ಗವನ್ನು ಮಾಡಿಕೊಡಬೇಕೆಂದು ಲ್ಯಾಂಟ್‌ನೆಕ್‌ನ ಹಂಚಿಕೆಯಾಗಿತ್ತು. ಆದರೆ ಗಾವೆನ್‌ನು ಇದನ್ನು ನಿಷ್ಫಲಗೊಳಿಸಿದನು. ಅವನು ಉಭಯ ಸೈನ್ಯದ

ಮಧ್ಯದಲ್ಲಿ ತಳವೂರಿದ್ದರಿಂದ ಇಂಗ್ಲಿಷರನ್ನು ಸಮುದ್ರಕ್ಕೆ ನೂಕಿದನು. ಲ್ಯಾಂಟ್‌ನೆಕ್‌ನನ್ನು ಅಡವೀಪಾಲು ಮಾಡಿದನು. ಆದರೂ ಮುದುಕನು ಬಲು ಗಟ್ಟಿಗನಾದ್ದರಿಂದ ಒಮ್ಮಿಂದೊಮ್ಮೆಲೆ ಇಂದು ಡೋಲದ ಮೇಲೆ ಬಿದ್ದಿರುವನೆಂದು ಸುದ್ದಿ ಬಂದಿದೆ. ಈ ಡೋಲವು ಅವನಿಗೆ ವಶವಾದರೆ ಸಹಜವಾಗಿ ಇಂಗ್ಲಿಷರನ್ನು ಒಳಗೆ ತಂದುಕೊಳ್ಳುವನು. ಅಲ್ಲಿಳಿಯಲು ಅನುಕೂಲವಾದ ಸ್ಥಳವಿದೆ. ಮುದುಕನ ಈ ಗುಟ್ಟನ್ನರಿತುಕೊಂಡು ಒಂದು ಚಣವನ್ನೂ ಕಳೆಯದೆ, ಹಿಂದುಮುಂದು ವಿಚಾರ ಮಾಡದೆ ಗಾವೆನ್‌ನು ಅವನನ್ನು ಮುತ್ತಿಯೇ ಬಿಟ್ಟಿರುವನು. ಅಲ್ಲಿ ಇಬ್ಬರಲ್ಲಿಯೂ ನಿಕರದ ಹೋರಾಟವು ನಡೆದಿದೆ. ಇಲ್ಲಿಯೇ ಕೊನೆಯ ನಿರ್ಣಯ ಆಗುವ ಸಂಭವವಿದೆ. '

' ಇಲ್ಲಿಂದ ಡೋಲವು ಎಷ್ಟು ದೂರವಿದೆ ? '

' ತೋಫುಖಾನೆಯ ಮೇಲಿಂದ ಹೋದರೆ ಮೂರು ತಾಸು ಬೇಕಾಗಬಹುದು. '

' ಕೇಳಿರಿ, ಕೇಳಿರಿ. ತೋಫಿನ ಗರ್ಜನೆಯು ಕೇಳಬರುತ್ತಿದೆ. '

' ಅಹುದಹುದು. ನಾವು ಬೇಗನೆ ಒಳಗೆ ಹೋಗುವದೇ ಲೇಸು. ರಾತ್ರಿಯನ್ನು ಇಲ್ಲಿಯೇ ಕಳೆಯಿರಿ.

' ಛೇ, ನಾನಿಲ್ಲಿ ತಂಗಲಾರೆ. ನಾನು ಹೊರಡಲೇಬೇಕು.

' ಸ್ವಲ್ಪ ತಡೆಯಿರಿ. ನೀವು ಏತಕ್ಕಾಗಿ ಹೋಗುತ್ತಿರುವಿರೆಂಬದು ತಿಳಿಯಲೇ ಇಲ್ಲ. ಬಹಳ ಸಂಕಟವಿದೆ. ನಿಮಗೆ ಅತ್ಯಂತ ನಿಕಟ ಸಂಬಂಧವುಳ್ಳ ಸೂಕ್ಷ್ಮ ಪ್ರಸಂಗ ಮಾತ್ರ ಇದ್ದರೆ—'

' ಅಹುದು. ಹಾಗೆಯೇ ಇದೆ. '

' ತಮ್ಮ ಮಗನೋ—'

' ಅಹುದು. ಮಗನಿದ್ದಂತೆಯೇ '

' ಇವನು ನನಗೆ ಪಾದ್ರಿಯಂತೆ ಕಾಣುತ್ತಾನೆ. ಇಂಥವನಿಗೆ ಮಗನೇ? ಆದರೂ ಪಾದ್ರಿಗಳಿಗೂ ಮಕ್ಕಳಿರುತ್ತಾರೆ ' ಎಂದು ಊಟದ ಮನೆಯ ಯಜಮಾನನು ತನ್ನಷ್ಟಕ್ಕೆ ತಾನೇ ಪಿಸುಗುಟ್ಟಿಕೊಂಡನು.

‘ ಕುದುರೆಯು ( ಥಡಿಯು ) ಲಗಾಮು ಸಿದ್ಧವಾಗಲಿ ನಿಮ್ಮ ಹಣವೆಷ್ಟು ? ’

ಅವನು ಹಣವನ್ನು ಕೊಟ್ಟನು. ಹಣವನ್ನೂ ಗಂಗಾಳವನ್ನೂ ಒಳಗಿಟ್ಟು ಅವನು ‘ ನೀವು ಹೋಗುವದೇ ಆದರೆ ನನ್ನ ಮಾತನ್ನಷ್ಟು ಕೇಳಿರಿ. ಡೋಲಿಗೆ ಹೋಗಲು ಇಲ್ಲಿಂದ ಎರಡು ದಾರಿಗಳಿವೆ. ಈ ಎದುರು ಕಾಣುವ ಬೈಲನ್ನು ದಾಟಿ ತುಸು ಮುಂದೆ ಹೋದರೆ ಬಲಗಡೆಗೊಂದು, ಎಡಗಡೆಗೊಂದು ಹೀಗೆ ಎರಡು ದಾರಿ ಒಡೆಯುತ್ತವೆ. ನೀವು ಎಡಗಡೆಯ ದಾರಿಯನ್ನು ಹಿಡಿಯದೆ ಬಲಗಡೆಯ ದಾರಿಯಿಂದ ಹೋಗಿರಿ. ಅಂದರೆ ನೀವು ಯುದ್ಧದ ಧುಮುಶ್ಚಕ್ರದಲ್ಲಿ ಬೀಳಲಾರಿರಿ ’ ಎಂದು ಹೇಳಿದನು.

‘ ಆಯಿತು, ಉಪಕಾರವಾಯಿತು. ಇನ್ನು ನಾನು ಬರುತ್ತೇನೆ. ” ಎಂದು ಅವನು ಕುದುರೆಯನ್ನು ಓಡಿಸಿದನು. ರಾತ್ರಿ; ವಿಪರೀತ ಕತ್ತಲುಗವಿದಿತ್ತು. ದಾರಿ ಒಡೆಯುವ ಸ್ಥಳ ಹಾಂ ಹಾಂ ಅನ್ನುವದರಲ್ಲಿ ಬಂತು. ಆ ಯಜಮಾನನು ಕಾಣಿಸುತ್ತಿರಲಿಲ್ಲ. ‘ ಬಲಬದಿಯಿಂದ ಹೋಗಿರಿ ’ ಎಂಬ ಶಬ್ದ ಮಾತ್ರ ಅವನಿಗೆ ಕೇಳಿಸಿತು ಆದರೆ ಅವನು ಎಡಬದಿಗೆ ಹೊರಳಿದನು.

ಡೋಲೆಂಬದು ಊರೇ ಅಲ್ಲ. ಅದೊಂದು ಬೀದಿಯಾಗಿತ್ತು. ಎರಡೂ ಬದಿಗೂ ಮನೆಗಳಿದ್ದವು. ಉಳಿದ ಭಾಗದಲ್ಲಿ ಚಿಕ್ಕಚಿಕ್ಕ ಓಣಿಗಳಿದ್ದವು. ಇದಕ್ಕೆ ಕೋಟೆಕೊತ್ತಳಗಳಿರದಿದ್ದರೂ ಪ್ರತಿಯೊಂದು ಮನೆಯೂ ಕಿಲ್ಲೆಯಂತೇ ಇದ್ದವು. ಹಳಿಪೇಟೆಯು ಪಟ್ಟಣದ ಮಧ್ಯಭಾಗಕ್ಕೆ ಹೊಂದಿಕೊಂಡಿತ್ತು.

ಊಟದ ಮನೆಯ ಯಜಮಾನನು ಗಡಿಬಿಡಿಯಿಂದಾದರೂ ಯಥಾವತ್ತಾಗಿ ವರ್ಣಿಸಿದ್ದನು. ರಾತ್ರಿಯಾದರೂ ರಣಸಂಗ್ರಾಮವು ಸಾಗಿಯೇ ಇತ್ತು. ಉಭಯ ಸೈನ್ಯಗಳ ಸಂಖ್ಯೆ ವಿಷಮವಾಗಿತ್ತು. ಲ್ಯಾಂಟ್‌ನೇರ್‌ನು ೬೦೦೦ ಸೈನಿಕರೊಂದಿಗೆ ಮುಂಜಾನೆಯೇ ಬಂದಿದ್ದನು. ಗಾವೆನ್‌ನು ೧೫೦೦ ಸೈನಿಕರೊಂದಿಗೆ ಅಲ್ಲಿಗೆ ಸಾಯಂಕಾಲ ತಲುಪಿದ್ದನು. ಪ್ರಜಾಪಕ್ಷದ

ಸೈನ್ಯಬಲವು ಕಡಮೆ ಇದ್ದರೂ ರಾಜಪಕ್ಷದ ಸೈನ್ಯದ ಮೇಲೆ ದಾಳಿಯನ್ನು ಮಾಡದೆ ಬಿಡಲಿಲ್ಲ.

ಒಂದೆಡೆಗೆ ಜನಜಂಗುಳಿಯ ಸಮುದಾಯ; ಇನ್ನೊಂದೆಡೆಗೆ ಸಂಘಟಿತ ಸಜ್ಜಾದ ಸೈನ್ಯಸಮೂಹ. ೬೦೦೦ ಒಕ್ಕಲಿಗ ಸೈನಿಕರಲ್ಲಿ ಅವರ ಕುಡು ಗೋಲಿನ ಹೊರತು ಬೇರೆ ಆಯುಧಗಳಿರಲಿಲ್ಲ. ಮೈಯಲ್ಲಿ ಚಿಂದಿಚಿಂದಿ ಯಾದ ಬಟ್ಟೆ. ಅವರು ತೋಫುಗಳನ್ನು ಹಗ್ಗದಿಂದ ಜಗ್ಗುತ್ತಿದ್ದರು. ಆದರೂ ಅವರು ಜೀವದ ಹಂಗುದೊರೆದು ಹೋರಾಡುತ್ತಿದ್ದರೆಂಬಲ್ಲಿ ಸಂಶಯವಿರಲಿಲ್ಲ. ಪ್ರಜಾಪಕ್ಷದ ೧೫೦೦ ಸೈನಿಕರಲ್ಲಿ ಕೆಲವರು ಟೊಪ್ಪಿಗೆ ಧರಿಸಿಕೊಂಡಿದ್ದಾರೆ; ನಡವಲ್ಲಿ ಕತ್ತಿಗಳನ್ನು ಕಟ್ಟಿಕೊಂಡಿದ್ದಾರೆ. ಅಲ್ಲದೆ ಅವರ ಹತ್ತಿರ ತೋಫುಗಳೂ, ಬರ್ಚಿಗಳೂ ಇವೆ. ಅವರಿಗೆ ಸೈನ್ಯಶಿಕ್ಷಣವು ದೊರೆತಿದ್ದು ಅವರೆಲ್ಲರೂ ತಮ್ಮ ತಮ್ಮ ಕರ್ತವ್ಯವನ್ನು ದಕ್ಷತೆಯಿಂದ ಪರಿಪಾಲಿಸುವವರಾಗಿದ್ದರು. ತಮ್ಮ ಮೇಲಧಿಕಾರಿಗಳ ಆಜ್ಞೆಯನ್ನು ಹೇಗೆ ಪಾಲಿಸಬೇಕೆಂಬದು ಅವರಿಗೆ ಚನ್ನಾಗಿ ಗೊತ್ತಿತ್ತು. ಅವರು ದೇಶದ ಸ್ವಾತಂತ್ರ್ಯರಕ್ಷಣೆಗಾಗಿ ಹೋರಾಡುವ ಸ್ವಯಂಸೇವಕರಾಗಿದ್ದರು. ಹೀಗೆ ಎರಡೂ ಸೈನ್ಯಗಳಲ್ಲಿ ಭೇದವು ಒಡೆದು ಕಾಣುತ್ತಿತ್ತು.

ಗಾವೆನ್‌ನ ವಯಸು ೩೦. ಅಗಲವಾದ ಎದೆ, ಹೊಳಪುಳ್ಳಕಣ್ಣು ಗಳಿದ್ದು ಮುಖದಲ್ಲಿ ಮೃದುಹಾಸವು ಲಾಸ್ಯವಾಡುತ್ತಿತ್ತು. ಅವನಿಗೆ ಯಾವ ವ್ಯಸನವೂ ಇರಲಿಲ್ಲ. ಅವನು ಮಧ್ಯ ರಣಾಂಗಣದಲ್ಲಿ ಧುಮುಕಿದರೂ ಅವನಿಗೆ ಗಾಯಗಳಾಗಿರಲಿಲ್ಲ. ಅವನ ಧ್ವನಿಯಲ್ಲಿ ಇಂಪಿದ್ದರೂ ಅಧಿಕಾರದ ಕಠೋರತನವೂ ಇತ್ತು. ಅವನು ಬಿಸಿಲು, ಮಳೆ, ಚಳಿಯೆನ್ನದೆ ಕಲ್ಲನ್ನು ತಲೆದಿಂಬಾಗಿ ಮಾಡಿಕೊಂಡು ನೆಲದ ಮೇಲೆ ಮಲಗುವನು. ಅವನು ಶೂರನಾಗಿದ್ದರೂ ನಿರುಪದ್ರವಿ ಯಾಗಿದ್ದನು. ಅವನ ವಿಚಾರಗಳು ತತ್ವ ಜ್ಞಾನಿಯ ವಿಚಾರಗಳಂತಿದ್ದವು. ಫ್ರಾನ್ಸದ ರಾಜ್ಯಕ್ರಾಂತಿಯಲ್ಲಿ ಅವನು ಮುಖಂಡನಾದನು. ಅವನೇ ತನ್ನ ಸೈನ್ಯವನ್ನು ಸಿದ್ಧಮಾಡಿಕೊಂಡಿದ್ದನು. ಅವನ ಸೈನ್ಯದಲ್ಲಿ ಪರಾಕ್ರಮಿಗಳಾದ ಸೈನಿಕರು ಬಹಳ ಜನರಿದ್ದರು.

ಲ್ಯಾಂಟ್‌ನೆಕ್‌ನಾದರೂ ನುರಿತ ಸೈನಿಕನಾಗಿದ್ದನು. ಗಾವೆನ್‌ನ ಗಿಂತಲೂ ಒಂದು ತೂಕ ಹೆಚ್ಚೇ ಎನಬಹುದು ಹಳಬ ಸೈನಿಕರಲ್ಲಿ ಧೈರ್ಯವೂ ಶೌರ್ಯವೂ ಅಸಾಧಾರಣವಾಗಿರುತ್ತದೆ. ಯಾಕೆಂದರೆ ಅವರು ಮೃತ್ಯುಮುಖದಲ್ಲಿಯೇ ಇರುತ್ತಾರೆ. ಆಯುಷ್ಯದ ಉಪಭೋಗವನ್ನು ಭೋಗಿಸಿಯೇ ಬಿಟ್ಟಿರುವದರಿಂದ ಅವರಿಗೆ ಮರಣವೆಂದರೆ ಕಃಪದಾರ್ಥ ವೆನಿಸುತ್ತದೆ. ಲ್ಯಾಂಟ್‌ನೆಕ್‌ನ ಚಟುವಟಿಕೆಗಳು ಕುಶಲತೆಯಿಂದ ಸಾಗಿ ದ್ದರೂ ಅವಿಚಾರದ ಸುಳಿಯಿಂದ ಪಾರಾಗಿರುತ್ತಿದ್ದಿಲ್ಲ. ಆದುದರಿಂದಲೇ ಗಡಿಬಿಡಿಯಿಂದ ಸಾಗಿದ ಯುದ್ಧದಲ್ಲಿ ಗಾವೆನ್‌ನು ಯಶಸ್ವಿಯಾದನು. ವಿಜಯಶ್ರೀಯು ಯಾವಾಗಲೂ ತಾರುಣ್ಯಕ್ಕೇ ಮಾಲೆಯನ್ನು ಹಾಕುತ್ತಿರು ತ್ತಾಳೆ. ಅವಳೇನು ಮುದುಕನಿಗೆ ಮಾಲೆ ಹಾಕಬೇಕೆ ? ಲ್ಯಾಂಟ್‌ನೆಕ್‌ನು ಗೊಂದಲಗೆಟ್ಟು 'ಈ ಗಾವೆನ್ ! ಈ ನಾಯಿ ! ನನ್ನ ಕೈಗೊಂದು ಸಿಗಲಿ. ಇವನನ್ನು ಸೀಳಿಬಿಡುತ್ತೇನೆ' ಎಂದು ಮಾತಾಡುತ್ತಿದ್ದನು.

ಆದ್ದರಿಂದ ರಾಜ್ಯಕ್ರಾಂತಿಯೆಂದರೆ ಲ್ಯಾಂಟ್‌ನೆಕ್‌ನ ತಲೆ ತಿರುಗಿ ಸುವ ಮಾತಾಗಿಬಿಟ್ಟಿತು. ಅವನು ಸಮುದ್ರತೀರದಲ್ಲಿ ಕಾಲಿಟ್ಟಾಗಲೇ ಭೂಕಂಪವಾಯಿತು. ಅವನ ಹೆಸರು ಹಾಹಾ ಅನ್ನುವದರಲ್ಲಿಯೇ ವೆಂಡಿಯ ಅರಣ್ಯದಲ್ಲಿ ಹಬ್ಬಿತು. ಜನರು ಅವನ ಸುತ್ತು ನೆರೆದರು. ಆ ಅರಣ್ಯದಲ್ಲಿದ್ದ ಸಣ್ಣಪುಟ್ಟ ಸರದಾರರೂ ಅವನಿಗೆ ಬಂದು ಕೂಡಿ ಕೊಂಡರು. ಅವರಲ್ಲಿ ಗವಾರ್ಡನೆಂಬವನೊಬ್ಬ ಮಾತ್ರ ಇವನೆಡೆಗೆ ಬರಲಿಲ್ಲ. ಈ ಮನುಷ್ಯನ ಮೇಲೆಯೇ ಲ್ಯಾಂಟ್‌ನೆಕ್‌ನ ವಿಶ್ವಾಸವಿತ್ತು. ಅವನಿಗೇ ಈ ಅರಣ್ಯದಲ್ಲಿಯ ಎಲ್ಲ ಗುಪ್ತಸ್ಥಳಗಳು ಗೊತ್ತಿದ್ದುವಲ್ಲದೆ ಯುದ್ಧದ ರೀತಿಗಳನ್ನು ಬಲ್ಲವರಲ್ಲಿ ನಿಪುಣನಾಗಿದ್ದನು. ಲ್ಯಾಂಟ್‌ನೆಕ್‌ನ ಬರುವಿಕೆಯಿಂದ ತಾನು ಯಾತಕ್ಕೂ ಬಾರದವನಾಗುವೆನೆಂಬ ಭಾವನೆ ಯಿಂದ ಗವಾರ್ಡನು ಅಲ್ಲಿಂದ ಕಾಲು ಕಿತ್ತಿದನು.

ಲ್ಯಾಂಟ್‌ನೆಕ್ ಯುದ್ಧಕಲೆಯಲ್ಲಿ ನುರಿತವನಾದ್ದರಿಂದ ಸ್ವಲ್ಪ ಸೈನ್ಯದಿಂದಲೇ ದೊಡ್ಡ ಯುದ್ಧವನ್ನು ಹೇಗೆ ಮಾಡಬೇಕೆಂಬದು ಅವನಿಗೆ ಗೊತ್ತಿತ್ತು. ಆದರೂ ಈ ಬ್ರಿಟನಿಯ ಯುದ್ಧದ ಕಲ್ಪನೆ ಅವನಿಗಿರಲಿಲ್ಲ.

ಈ ಹಳ್ಳಿಗರ ಸೈನ್ಯದ ಉಪಯೋಗವೆಷ್ಟಾದೀತೆಂಬ ಕಲ್ಪನೆಯನ್ನು ಅವನು ಮಾಡಿಕೊಂಡಿದ್ದನು. ಇಂಥ ಸೈನ್ಯದ ದೋಷದ ಅರಿವೂ ಅವನಿಗಿರದೇ ಇರಲಿಲ್ಲ. ಈ ಸೈನಿಕ ಸಮೂಹವನ್ನು ಇಂಗ್ಲಂಡದ ಸಿಪಾಯಿರೊಂದಿಗೆ ಕೂಡಿಸಿಕೊಂಡು ಶತ್ರುವಿನ ಪರಾಭವ ಮಾಡಬೇಕೆಂದು ಮಾಡಿದ ಅವನ ಹಂಚಿಕೆಯು ಕಾರ್ಯರಂಗಕ್ಕಿಳಿಯಲೇ ಇಲ್ಲ. ಈ ಎರಡೂ ಸೈನ್ಯ ಒಂದೆಡೆ ಕೂಡಿಕೊಳ್ಳಲು ಒಂದು ಸ್ಥಳವು ಬೇಕಾಗಿತ್ತು. ಆದ್ದರಿಂದ ಲ್ಯಾಂಟ್‌ನೆಕ್‌ನು ಡೋಲದ ಕಡೆಗೆ ತನ್ನ ಮುಖವನ್ನು ತಿರುಗಿಸಿದನು. ಡೋಲವು ಸುಸಂರಕ್ಷಿತ ಸ್ಥಳವಾಗಿರದ್ದರಿಂದ ಅವನ ಯೋಜನೆ ಹೆಸರಿಗೆ ಮಾತ್ರ ಆಯಿತು ಈ ಯೋಜನೆಯು ಯಶಸ್ವಿಯಾಗಲೆಂದೇ ಅವನು ೬೦೦೦ ಸೈನ್ಯ ದೊಂದಿಗೆ ಬಂದಿದ್ದನು ಇವರಲ್ಲಿಯ ಸೈನಿಕರು ಆರಿಸಲ್ಪಟ್ಟವರಾಗಿದ್ದರು. ಹತ್ತು ತೋಫುಗಳೂ ಇದ್ದವು. ಡೋಲನ್ನು ಗೆದ್ದು ಗುಡ್ಡವನ್ನೇರಿ ತೋಫು ಹಾರಿಸಿ ಶತ್ರುಗಳನ್ನು ಸಮೀಪಕ್ಕೆ ಬರಗೊಡದೆ ಇಂಗ್ಲಿಷರನ್ನು ಒಳಗೆ ಕರೆದುಕೊಳ್ಳಬೇಕೆಂದು ಅವನ ಹಂಚಿಕೆಯಾಗಿತ್ತು. ಗಾವೆರ್ನ್‌ನ ಹತ್ತಿರ ೧೫೦೦ ಸೈನಿಕರು ಮಾತ್ರ ಇದ್ದರು ಅವನ ಇನ್ನೊಂದು ೨೫೦೦೦ ಸೈನಿಕರ ತಂಡವು ೬೦ ಮೈಲುಗಳಾಚೆ ಇತ್ತು. ಅದರಿಂದ ಹೆದರುವ ಕಾರಣವೇ ಇರಲಿಲ್ಲ ೬೦ ಮೈಲುಗಳನ್ನು ಕ್ರಮಿಸಿ ಆ ಸೈನ್ಯವು ಬರುವದರೊಳಗಾಗಿ ಈ ಕಾರ್ಯವನ್ನು ತೀರಿಸಿಕೊಳ್ಳಬೇಕೆಂದು ಲ್ಯಾಂಟ್‌ನೆಕ್‌ನು ಮಾಡಿದ್ದ ರಿಂದ ಅವನಿಗೆ ಜಯವು ದೊರೆತೇ ತೀರುವದೆಂಬ ನಂಬಿಗೆಯಿತ್ತು.

ಅವನು ಒಮ್ಮಿಂದೊಮ್ಮೆಲೆ ಡೋಲದಲ್ಲಿ ನುಗ್ಗಿದನು. ಅವನ ನಿಷ್ಠುರತೆಯ ಪರಿಚಯವು ಎಲ್ಲರಿಗೂ ಗೊತ್ತಾಗಿತ್ತು. ಅವನು ನಿರ್ದಯನೂ ಕ್ರೂರನೂ ಆಗಿದ್ದನು. ಆದ್ದರಿಂದ ಅವನಿಗೆ ಅಡ್ಡವಾಗಿ ಯಾರೂ ಬರಲಿಲ್ಲ. ಆ ಪಟ್ಟಣದ ನಿವಾಸಿಗಳು ಗಾಬರಿಗೊಂಡು ಬಾಗಿಲ ಇಕ್ಕಿಕೊಂಡು ಒಳಗೆ ಸೇರಿಕೊಂಡರು. ಈ ಆರು ಸಾವಿರ ಸೈನಿಕರು ಪಟ್ಟಣ ದೊಳಗೆ ನುಗ್ಗಿ ಗೊಂದಲ ಹಾಕತೊಡಗಿದರು. ಈ ಸೈನ್ಯದ ಆಧಿಪತ್ಯವನ್ನು ಬೇರೊಬ್ಬ ಅಧಿಕಾರಿಗೆ ವಹಿಸಿ ಲ್ಯಾಂಟ್‌ನೆಕ್‌ನು ಗುಡ್ಡವನ್ನೇರಿದನು. ಈ ಅಧಿಕಾರಿಗೆ ಎರಡು ಹೆಸರುಗಳಿದ್ದವು. ಅವನು ಜನರನ್ನು ಅಮಾನುಷ

ರೀತಿಯಿಂದ ಕೊಲೆಮಾಡುತ್ತಿದ್ದುದರಿಂದ ಒಂದು ಹೆಸರು ಬಿದ್ದಿತ್ತು. ಅವನು ಭಯಂಕರ ಮನುಷ್ಯನೇ ಇದ್ದುದರಿಂದ ಎರಡನೆಯ ಹೆಸರು ಇಮಾನಸ್ ಎಂಬುದಾಗಿತ್ತು. ಅವನು ರಾಕ್ಷಸರಷ್ಟು ಕ್ರೂರನೂ ದುಷ್ಟನೂ ಆಗಿದ್ದನು. ನೋಡಲು ಅತರಾಳವಿಕರಾಳನಾಗಿದ್ದನು. ಯುದ್ಧ ದಲ್ಲಿ ದೈತ್ಯನಂತೆ ಹೋರಾಡುತ್ತಿದ್ದನು. ಯುದ್ಧವು ನಿಂತಮೇಲೆ ಅವನು ಕೈಗೆ ಸಿಕ್ಕವರನ್ನು ಕೈಗೆ ಬಂದಂತೆ ಕೊಂದು ಹಾಕುತ್ತಿದ್ದನು. ದುಷ್ಕೃ ತ್ಯವನ್ನು ಮಾಡಲು ಅವನು ಎಂದೂ ಹಿಂದೆಮುಂದೆ ನೋಡುತ್ತಿರಲಿಲ್ಲ.

ಲ್ಯಾಂಟ್‌ನೆಕ್‌ನು ಇವನನ್ನು ನಿಯಮಿಸಿ ಒಂದು ತಪ್ಪನ್ನು ಮಾಡಿ ದ್ದನು. ಇಮಾನಸ್‌ನಿಗೆ ಯುದ್ಧಪ್ರಸಂಗಗಳನ್ನು ಯಾವ ರೀತಿಯಿಂದ ಯೋಜಿಸಬೇಕು, ಎಂಬ ಬುದ್ಧಿಯೇ ಇರಲಿಲ್ಲ. ಅದರಿಂದ ಪಟ್ಟಣವನ್ನು ರಕ್ಷಿಸಿಕೊಳ್ಳುವ ಕೆಲಸವನ್ನು ಅವನಿಗೆ ವಹಿಸಿಕೊಟ್ಟುದು ಹುಚ್ಚುತನ ವಾಗಿತ್ತು. ಇಳಿಹೊತ್ತಿನ ಸಮಯಕ್ಕೆ ಲ್ಯಾಂಟ್‌ನೆಕ್‌ನು ಗುಡ್ಡದಿಂದಿಳಿದು ಬಂದನು. ತೋಪುಗಳ ಗರ್ಜನೆ ಆರಂಭವಾಗಿತ್ತು. ಅಲ್ಲಲ್ಲಿ ಬೆಂಕಿ ಕಾಣು ಬರುತ್ತಿತ್ತು ಪಟ್ಟಣದ ಮೇಲೆ ದಾಳಿಯಾಗಿ ಯುದ್ಧವು ಆರಂಭವಾ ಗಿಯೇ ಬಿಟ್ಟಿತ್ತು. ಈ ಪ್ರಕಾರವನ್ನು ಕಂಡು ಲ್ಯಾಂಟ್‌ನೆಕ್‌ನು ಸ್ತಂಭಿತ ನಾದನು. ಯುದ್ಧದ ಸಿದ್ಧತೆಯು ಅಷ್ಟೊಂದಿರಲಿಲ್ಲ. ಆದರೂ ದಾಳಿ ಮಾಡಿದವರು ಯಾರೆಂಬದು ಅವನಿಗೆ ಗೊತ್ತಾಗಲಿಲ್ಲ. ಭಯಭೀತರಾಗಿ ಮೈ ಮೇಲೆ ಎಚ್ಚರವಿಲ್ಲದೆ ಓಡುತ್ತಿರುವ ಜನರನ್ನು ದಾಳಿಮಾಡಿದವರು ಯಾರು ಎಂದು ವಿಚಾರಿಸಿದನು. 'ಬ್ಲ್ಯೂಜ, ಬ್ಲ್ಯೂಜ (ಪ್ರಜಾಪಕ್ಷ)' ಎಂದು ಅವರು ಕೂಗುತ್ತ ಓಡುತ್ತಿದ್ದರು. ಪಟ್ಟಣದೊಳಗೆ ಅವನು ಬಂದು ನೋಡುವಷ್ಟರಲ್ಲಿ ಎಲ್ಲವೂ ವಿಪರೀತವಾಗಿತ್ತು.

* * * * *

ವೆಂಡಿಯೊಳಗಿನ ಒಕ್ಕಲಿಗರ ಸೈನ್ಯವು ಡೋಲಿಗೆ ಬರುವಷ್ಟರಲ್ಲಿ ದಣಿದು ಹೋಗಿತ್ತು. ಅವರು ತಮ್ಮ ತೋಪುಗಳನ್ನು ದೂರ ಒಯ್ದಿಟ್ಟಿ ದ್ದರು. ಅವರು ಊಟಉಡಿಗೆ ತೀರಿಸಿಕೊಂಡು ದೇವರ ಭಜನ ಮಾಡುತ್ತ

ಬೀದಿಯಲ್ಲಿಯೆ ಅಡ್ಡಾದರು. ರಾತ್ರಿಯಂತೂ ಎಲ್ಲ ಸೈನಿಕರು ಗಾಢ ನಿದ್ರೆಯನ್ನು ಹೊಡೆಯುತ್ತಿದ್ದರು. ಸೈನಿಕರ ಹೆಂಡಂದಿರು ಅವರ ಸಮೀಪದಲ್ಲಿಯೇ ಮಲಗಿದ್ದರು. ಒಕ್ಕಲಿಗರ ಹೆಂಗಸರು ಯಾವಾಗಲೂ ಗಂಡಸರನ್ನು ಹಿಂಬಾಲಿಸಿಯೇ ಇರುತ್ತಿದ್ದರು. ತಿಂಗಳಿನ ಬಿಳಿ ಬೆಳಕು ಸುತ್ತಲೂ ಪಸರಿಸಿತ್ತು. ಅಲ್ಲಂದಿಲ್ಲೊಂದು ನಕ್ಷತ್ರಗಳು ಹೊಳೆಯುತಿದ್ದವು. ಇಂಥ ವೇಳೆಯಲ್ಲಿ ಅಲ್ಲಿ ಮಲಗಿಕೊಂಡವರಲ್ಲಿ ಕೆಲವರಿಗೆ ಪಟ್ಟಣದ ಬಾಗಿಲದ ಕಡೆಗೆ ಸಜ್ಜಾದ ನೂರು ತೋಫುಗಳು ಕಂಡವು.

ಆ ತೋಫುಗಳು ಗಾವೆರ್‌ನ ಪಕ್ಷದವಾಗಿದ್ದವು. ಈ ಸೈನ್ಯದ ಮೇಲೆ ಅವನು ದಾಳಿಮಾಡಬೇಕೆಂದಿದ್ದನು. ಅತ್ತಕಡೆಯಿಂದ ಯಾರೋ ಬರುವದನ್ನು ಕಂಡು ಒಬ್ಬ ಸಿಪಾಯಿಯು 'ಅತ್ತ ಹೋಗುವವರಾರು?' ಎಂದು ಕೂಗಿ ಗುಂಡು ಹಾಕಿದನು. ಆ ಗುಂಡಿಗೆ ಪ್ರತಿಯಾಗಿ ಉತ್ತರವೂ ಆಗಿಂದಾಗಲೇ ದೊರೆಯಿತು. ಈ ಸದ್ದನ್ನು ಕೇಳಿ ಮಲಗಿದ್ದ ಸೈನ್ಯವೆಲ್ಲವೂ ಎಚ್ಚರವಾಯಿತು. ಸುತ್ತೂ ಕಡೆಗೆ ಬೆಂಕಿಯು ಧಗಧಗಿಸುತ್ತಿರುವದನ್ನು ಕಂಡು ಅವರು ಭಯಭೀತರಾಗಿ ದಾರಿ ಸಿಕ್ಕತ್ತ ಓಡತೊಡಗಿದರು. ಬಂದೂಕುಗಳನ್ನೂ ಹಾರಿಸತೊಡಗಿದರು. ಈ ಗದ್ದಲದಲ್ಲಿ ಅನೇಕರು ನೆಲಕ್ಕುರುಳಿದರು. ಈ ಜನಸಮುದಾಯಕ್ಕೆ ತಾವೇನು ಮಾಡುತ್ತಿರುವೆವು? ಯಾರ ಮೇಲೆ ಗುಂಡು ಹೊಡೆಯುತ್ತಿರುವೆವು ಎಂಬದೇ ತಿಳಿಯದಾಗಿತ್ತು. ಊರೊಳಗಿನ ಜನರು ಹೌಹಾರಿ ಒಂದೇ ಸವನೆ ಚೀರಿಕೊಳ್ಳುತ್ತ ನೆರೆಹೊರೆಯವರನ್ನು ಕರೆಯತೊಡಗಿದರು. ಈ ಗೊಂದಲದಲ್ಲಿ ಹುಡುಗರೂ ಹೆಣ್ಣುಮಕ್ಕಳೂ ಸೇರಿಕೊಂಡರು. ಬಂದೂಕು ಹಾರಿದೊಡನೆಯೆ ಬಿದ್ದ ಪ್ರಕಾಶದ ಸಹಾಯದಿಂದ ಜನರು ಅತಿತ್ತ ತಿರುಗಾಡುತ್ತಿದ್ದರು. ಸುತ್ತುಮುತ್ತಲೆಲ್ಲ ಅಗ್ನಿವರ್ಷಾವವೇ ನಡೆದಿತ್ತು. ಹೊಗೆ ಮುಸುಕಿಬಿಟ್ಟಿತು. ಕುದುರೆಗಳು ಸಿಕ್ಕಹಾಗೆ ಓಡುತ್ತಿದ್ದವು. ಸಾಮಾನುಗಳ ಅವಸ್ಥೆಯನ್ನು ಕೇಳುವವರೇ ಇರಲಿಲ್ಲ. ಗಾಯಾಳುಗಳಾದ ಸೈನಿಕರು ಸಿಕ್ಕಸಿಕ್ಕಲ್ಲೆ ಬಿದ್ದಿದ್ದರು. ತುಳಿದಾಟದಲ್ಲಿ ಅವರು ಜಿಬ್ಬಿಜಿಬ್ಬಿಯಾಗುತ್ತಿದ್ದರು. ಅವರು ಚೀರಿಕೊಳ್ಳುತ್ತಿರುವ ಹೃದಯವಿದಾರಕ ಧ್ವನಿಯಿಂದ ಭಯಕಂರ ವಾತಾವರಣವುಂಟಾ

ಗಿತ್ತು. ಸೈನಿಕರ ಹಾಗೂ ಅಧಿಕಾರಿಗಳ ತಪ್ಪುಗಂಟಾದ್ದರಿಂದ ಅವರು ಒಬ್ಬರಿಗೊಬ್ಬರು ಶೋಧಮಾಡುತ್ತಿದ್ದರು.

ಇಷ್ಟೆಲ್ಲ ಪ್ರತಾಪವು ಗಾವೆನ್‌ನಿಂದಾಗಿತ್ತು ಅವನು ಅಡಮಗ್ಗಲು ನಿಂತು ಹಲ್ಲೆಯನ್ನು ಮಾಡುತ್ತಿದ್ದುದರಿಂದ ಅವನ ಸೈನ್ಯದಲ್ಲಿ ವಿಶೇಷ ಅನಾಹುತವಾಗಿರಲಿಲ್ಲ. ಆ ಹಳ್ಳಿಗರು ಗಟ್ಟಿಗರಾದ್ದರಿಂದ ಈ ಅಕಸ್ಮಿಕ ಪ್ರಸಂಗಕ್ಕೆ ಹೆದರಲಿಲ್ಲ. ಅವರು ತಮ್ಮ ಸಂರಕ್ಷಣೆಯನ್ನು ಮಾಡಿಕೊಳ್ಳುವವಕ್ಕೆಂದು ಪೇಟೆಯ ಬೀದಿಯ ಕಡೆಗೆ ಸಾಗಿದರು. ಈ ಸ್ಥಳವು ಶತ್ರುವಿನನ್ನು ಎದುರಿಸಲು ಅನುಕೂಲವಾಗಿತ್ತು. ಲ್ಯಾಂಟ್‌ನೆಕ್‌ನು ತೋಫು ಹಾರಿಸುವವರನ್ನು ಗುಡ್ಡದ ಮರಡಿಯ ಸ್ಥಳವನ್ನು ವ್ಯವಸ್ಥೆಗೊಳಿಸಲು ಒಯ್ದಿದ್ದ ಕಾರಣ ತೋಫು ಇದ್ದರೂ ಹಾರಿಸುವವರಿಲ್ಲದ್ದರಿಂದ ಬಂದೂಕುಗಳನ್ನು ಹಾರಿಸುತ್ತಿದ್ದರು. ಪೇಟೆಯಲ್ಲಿ ಸಿಕ್ಕ ಸಾಮಾನುಗಳನ್ನೆಲ್ಲ ತೆಗೆದುಕೊಂಡು ಒಂದು ಭದ್ರವಾದ ಕೋಟೆಯನ್ನೇ ಲಗುಬಗೆಯಿಂದ ಮಾಡಿಕೊಂಡರು.

ಗಾವೆನ್‌ನಿಗೆ ಇದೊಂದು ದೊಡ್ಡ ಚಿಂತೆಯೇ ಆಯಿತು. ಯಾಕೆಂದರೆ ಒಕ್ಕಲಿಗರ ಸೈನ್ಯವು ಸಂರಕ್ಷಿತ ಸ್ಥಳದಲ್ಲಿದ್ದುಕೊಂಡು ಅವನ ಸೈನ್ಯದ ಮೇಲೆ ಬಂದೂಕುಗಳನ್ನು ಹಾರಿಸುತ್ತಿದ್ದರು. ಗಾವೆನ್‌ನು ಒಮ್ಮೆಂದೊಮ್ಮೆಲೆ ಹಲ್ಲೆಯನ್ನು ಹೂಡಿ ಮೊದಲಿಗೆ ವಿಜಯ ಸಂಪಾದಿಸಿದ್ದರೂ ಈಗ ಸೋಲುವ ಪ್ರಸಂಗವೇ ಬಂದಿತು. ಇದನ್ನು ಲಕ್ಷಿಸಿ ಅವನು ಕುದುರೆಯಿಂದ ಚಟಕ್ಕನೆ ಇಳಿದನು. ಆ ಕತ್ತಲಲ್ಲಿಯೇ ಸುತ್ತೂ ಕಡೆಗೆ ನಿರೀಕ್ಷಿಸಿದನು. ಕೈಯಲ್ಲಿ ಕತ್ತಿಯನ್ನು ತೆಗೆದುಕೊಂಡನು. ತನ್ನ ತೋಫುಖಾನೆಯು ಶತ್ರುವಿನಗಿಂತ ಬಲಿಷ್ಠವಿದ್ದುದರಿಂದ ಪರಾಭವವಾಗುವದು ಶಕ್ಯವಿಲ್ಲೆಂದು ವಿಚಾರ ಮಾಡುತ್ತಿರುವಾಗ ಧಡಲ್ಲೆಂದು ಒಂದು ಗುಂಡು ಗಾವೆನ್‌ನ ತಲೆಯ ಮೇಲಿಂದ ಹಾರಿಹೋಯಿತು. ಮತ್ತೊಂದು ಗುಂಡು ಹಾರಿತು. ಆದರೆ ಅದು ಗೋಡೆಗೆ ತಾಕಿತು. ಮೂರನೆಯ ಗುಂಡು ಹಾರಿತು. ಅದಕ್ಕೆ ಗಾವೆನ್‌ನ ಟೊಪ್ಪಿಗೆಯೇ ಹಾರಿತು.

'ಸೇನಾಪತಿಗಳೇ, ಗುಂಡುಗಳು ನಿಮಗೆ ಗುರಿಯಿಟ್ಟೇ ಬರುತ್ತಿವೆ' ಎಂದೊಬ್ಬನು ಹೇಳಿದನು ಸೇನಾಪತಿಯು ಸಾವಧನಾಗಿ ತನ್ನ ಟೊಪ್ಪಿಗೆಯನ್ನು ತೆಗೆದುಕೊಳ್ಳಬೇಕೆಂದನು. ಅಷ್ಟರಲ್ಲಿ ಲ್ಯಾಂಟ್‌ನೆಕ್‌ನು ಬಂದೂಕು ಗುರಿಯಿಟ್ಟು ಗಾವೆನ್‌ನಿಗೆ ಹೊಡೆಯಬೇಕೆಂದು ಹವಣಿಸುತ್ತಿದ್ದನು. ಲ್ಯಾಂಟ್‌ನೆಕ್‌ನು ಅದೇ ಗುಡ್ಡದಿಂದಿಳಿದು ಬರುತ್ತಿದ್ದನು. ಇಮಾನಸನು ಅವನನ್ನು ಕಾಣಬೇಕೆಂದು ಗೊಂದಲದೊಳಗಿಂದ ಧಾವಿಸಿದನು. 'ಮಹಾರಾಜ, ಶತ್ರುಗಳು ಒಮ್ಮೆಲೆ ಹಲ್ಲೆ ಮಾಡಿದರು' ಎಂದು ಹೇಳಿದನು.

"ಯಾರು?"

"ಯಾರೆಂಬದು ಹೇಳಲಿಕ್ಕೆ ಬಾರದು."

"ದಿನಾನದ ಮಾರ್ಗವು ತೆರೆವಿರುವವೇ?"

"ಇರಬೇಕೆಂದಿನಿಸುತ್ತದೆ."

"ನಾವು ಹಿಂದೆ ಸರಿಯಲೇಬೇಕು."

"ನಾವು ಈಗಾಗಲೇ ಹಾಗೆ ಮಾಡಿದ್ದೇವೆ. ನಮಲ್ಲಿಯುವರೆಷ್ಟೋ ಜನರು ಓಡಿ ಹೋಗಿದ್ದಾರೆ."

"ಛೀ, ನಾವು ಓಡಿಹೋಗಬೇಕಾದ್ದಿಲ್ಲ. ನಾವು ಹಿಂದೆ ಸರಿದು, ಒಳ್ಳೇ ರೀತಿಯಿಂದ ಪ್ರತಿದಾಳಿಯನ್ನು ಹೊಡಬೇಕು. ನೀನು ತೋಫುಗಳನ್ನೇಕೆ ಹಾರಿಸಲಿಲ್ಲ?"

"ತೋಫು ಹಾರಿಸುವವರು ಯಾರೂ ಇಲ್ಲದ್ದರಿಂದ."

"ನೋಡು, ಇಲ್ಲಿ ನಾನಿದ್ದೇನೆ."

"ಮಹಾರಾಜ, ಎಲ್ಲ ಸಾಮಾನು, ಹೆಂಗಸರು, ಹುಡುಗರು, ಮತ್ತು ನಿರುಪಯೋಗಿಯಾದ ಯಾವತ್ತು ವಸ್ತುಗಳನ್ನು ಸಾಗಹಾಕಿದ್ದೇನೆ. ಈ ಸಣ್ಣ ಪುಟ್ಟ ಕೈದಿಗಳ ವ್ಯವಸ್ಥೆಯನ್ನು ಏನು ಮಾಡಬೇಕು?"

"ಓಹೋ! ಆ ಮೂರು ಮಗುಗಳಲ್ಲವೇ?"

"ಅಹುದು."

"ಅವು ನಮ್ಮ ಪಾಲಿಗೇ ಇವೆ. ಅವುಗಳನ್ನು ಲಾಟೂರಿಗೆ ಕಳಿಸಿಬಿಡು" ಎಂದೆನ್ನುತ್ತ ಅವನು ತೋಫುಖಾನೆಯ ಕಡೆಗೆ ಧಾವಿಸಿದನು. ಅವನ ಬರುವಿಕೆಯಿಂದ ಅಲ್ಲಿಯ ವಾತಾವರಣವು ಬದಲಾಯಿತು.

ತೋಫುಖಾನೆಯು ಅಸ್ತವ್ಯಸ್ತವಾಗಿತ್ತು. ಅವನು ಯೋಗ್ಯವ್ಯವಸ್ಥೆ ಯನ್ನು ಮಾಡಿಕೊಂಡನು. ಅವನು ಅದನ್ನು ರಚಿಸುತ್ತಿರುವಾಗ ತೋಫು ಖಾನೆಯ ಬಿರಿಕಿನೊಳಗಿಂದ ಗಾವೆನ್‌ನ ಮುಖವು ಅವನಿಗೆ ಕಾಣಿಸಿತು. ಅದರಿಂದ ಅವನು ಆನಂದಿತನಾಗಿ ಅವನ ಮೈಮೇಲೆ ಮೂರು ಗುಂಡು ಗಳನ್ನು ಹಾರಿಸಿದನು. ಮೂರನೇ ಗುಂಡಿಗೆ ಅವನ ಟೊಪ್ಪಿಗೆ ಮಾತ್ರ ಹಾರಿತು. ಅದನ್ನು ನೋಡಿ ಲ್ಯಾಂಟ್‌ನೆಕ್‌ನು 'ಹಾ! ದೇವರೇ, ಸ್ವಲ್ಪ ಕೆಳಗೆ ಗುಂಡು ತಾಕಿದ್ದರೆ—' ಎಂದಂದುಕೊಂಡನು. ಲ್ಯಾಂಟನೆಕ್‌ನು ತನ್ನ ಹಳ್ಳಿಯ ತೋಫುಖಾನೆಯ ಜನರ ಕಡೆಗೆ ಹೊರಳಿ 'ಇನ್ನು ಅವರು ಬೇಕಾದ ಹಾಗೆ ಬರಲಿ' ಎಂದಂದು ಅವರಿಗೆ ಧೈರ್ಯಕೊಟ್ಟನು.

ಗಾವೆನ್‌ನೂ ದೊಡ್ಡ ಸಂಕಟಕ್ಕೀಡಾಗಿದ್ದನು. ಯುದ್ಧವು ಹೊಸ ಸ್ವರೂಪವನ್ನು ತಾಳಿತು. ಶತ್ರುಗಳ ತೋಫುಗಳು ಗರ್ಜಿಸತೊಡಗಿದವು. ಹಲ್ಲೆಯನ್ನು ಬಿಟ್ಟುಕೊಟ್ಟು ಸಂರಕ್ಷಣೆಯನ್ನು ಹೇಗೆ ಮಾಡಿಕೊಳ್ಳ ಬಹುದು ಎಂಬ ವಿಚಾರವು ಅವನನ್ನು ಬಾಧಿಸತೊಡಗಿತ್ತು. ಶತ್ರುವಿನ ಸೈನ್ಯ ೫೦೦೦ ವಿತ್ತು. ಗಾವೆನ್‌ನ ಕಡೆಗೆ ೧೨೦೦ ಸೈನ್ಯ ಮಾತ್ರ ಇತ್ತು. ಶತ್ರುವಿನ ತೋಫುಗಳ ಹೊಡೆತಕ್ಕೆ ತನ್ನ ಸೈನ್ಯವು ಈಡಾಗವೆಂದು ಅವನು ಭಾವಿಸಿಕೊಂಡನು. ಇಂಥ ಪರಿಸ್ಥಿತಿಯಲ್ಲಿ ಶತ್ರುವಿನೊಡನೆ ಹೋರಾಡು ವದು ಮೂರ್ಖತನವಾಗದಿರದೆಂದು ಅವನ ಕಲ್ಪನೆಯಾಯಿತು. ಅವನಿಗೆ ಹಲ್ಲೆಯನ್ನು ಮಾಡಲೂ ಆಗಲಿಲ್ಲ; ವೇಳೆಯನ್ನು ಹಾಕುವದೂ ಆಗಲಿಲ್ಲ. ಏನಾದರೊಂದನ್ನು ಅವನು ನಿರ್ಧರಿಸಲೇ ಬೇಕಾಗಿತ್ತು. ಏನು ಮಾಡಬೇ ಕೆಂಬದು ಬಗೆ ಹರಿಯದಾಯಿತು. ಗಾವೆನ್‌ನಿಗೆ ಈ ಸ್ಥಳದ ಪರಿಚಯವು ಚೆನ್ನಾಗಿಯೇ ಇದ್ದುದರಿಂದ ತನ್ನ ಕೈಕೆಳಗಿನ ಅಧಿಕಾರಿಯ ಕಡೆಗೆ ಹೊರಳಿ 'ನೀನೇ ಈಗ ಸೇನಾಪತಿಯಾಗು. ತೋಫು ಹಾರಿಸುವಂತಿದ್ದರೆ ಹಾರಿಸು. ವೇಳೆ ಕಳೆಯಬೇಡ. ಎಲ್ಲ ಸೈನ್ಯವನ್ನು ಏಕತ್ರ ಮಾಡಿಕೋ. ನಿಕರದ ಹೋರಾಟ ಸಾಗುವ ಸಿದ್ಧತೆ ಇರಲಿ' ಎಂದು ಹೇಳಿ, ಅವನ ಕಿವಿಯಲ್ಲಿ ಮತ್ತೂ ಏನನ್ನೊ ಹೇಳಿದನು."

" ಹಾಗೆಯೇ ಆಗಲಿ " ಎಂದವನು ಉತ್ತರಿಸಲಾಗಿ, ಅದನ್ನು ಕೇಳಿ ಕೊಂಡು ಗಾವೆನ್‌ನು " ನಮ್ಮ ನಗಾರಖಾನೆಯಲ್ಲಿ ಒಂಬತ್ತು ಜನರಿದ್ದಾರೆ. ಅದರಲ್ಲಿ ಏಳು ಜನರನ್ನು ನನ್ನ ಕಡೆಗೆ ಕೊಡು. ಉಳಿದಿಬ್ಬರು ನಿನ್ನ ಕಡೆಗಿರಲಿ " ಎಂದು ಆಜ್ಞಾಪಿಸಿದನು. ಆಜ್ಞೆಯಾಗುವದೇ ತಡ; ಆ ಏಳು ಜನರು ಗಾವೆನ್‌ನ ಮುಂದೆ ಧುತ್ತೆಂದು ಬಂದು ನಿಂತರು.

ಗಾವೆನ್‌ನು " ರುಜ್‌ನ ತಂಡವೆಲ್ಲಿದೆ ? " ಎಂದು ಕೇಳಲಾಗಿ ಒಬ್ಬ ನಾಯಕನು ತನ್ನ ೧೨ ಜನರೊಂದಿಗೆ ಬಂದು ಅವನ ಮುಂದೆ ನಿಂತನು. " ನೀವು ಉಳಿದವರು ಹನ್ನೆರಡೇ ಜನರೆ? ಎಲ್ಲರೂ ನನಗೆ ಬೇಕು " ಎಂದು ಗಾವೆನ್‌ನು ಹೇಳಲಾಗಿ 'ಸಿದ್ಧರಾಗಿದ್ದೇವೆ' ಎಂದು ಅವರು ಬಿನ್ನವಿಸಿಕೊಂಡರು.

ಈ ತಂಡದ ನಾಯಕನ ಹೆಸರು ರೇಡೋ. ಅವನೇ ಆ ಮೂರೂ ಮಗುಗಳನ್ನು ದತ್ತಕ ತೆಗೆದುಕೊಂಡಿದ್ದವನು. ಈ ಮಗುಗಳು ಅವನಿಗೆ ಸಾಂದ್ರದ ಅರಣ್ಯದಲ್ಲಿ ದೊರಕಿದ್ದವು. ಅವರ ಹತ್ತಿರ ಹುಲ್ಲಿನ ಹೆಂಡಿಯೊಂದು ಸಿದ್ಧವಾಗಿ ನಿಂತಿತ್ತು. ಗಾವೆನ್‌ನು ಅದರ ಕಡೆಗೆ ಬೊಟ್ಟು ಮಾಡಿ 'ನಾಯಕನೇ, ನಿನ್ನ ಸಿಪಾಯರಿಗೆ ಈ ಹುಲ್ಲಿನಿಂದ ಹಗ್ಗವನ್ನು ಹೊಸೆಸಿ ಬಂದೂಕಗಳಿಗೆ ಸುತ್ತಲು ಹೇಳು. ಅಂದರೆ ಅವು ಒಂದಕ್ಕೊಂದು ತಾಕಲಾಡದೆ ಸಪ್ಪಳವಾಗುವದಿಲ್ಲ' ಎಂದು ಹೇಳಿದನು.

'ತಮ್ಮ ಅಪ್ಪಣೆಯಂತೆ ಕೆಲಸವಾಗಿದೆ.'

'ಸಿಪಾಯರೇ, ಬೂಟುಗಳನ್ನು ತೆಗೆಯಿರಿ.'

'ನಮಗೆ ಬೂಟುಗಳೇ ಇರುವದಿಲ್ಲ.' ಎಂಬುದನ್ನು ಕೇಳಿ ಎಲ್ಲರನ್ನೂ ಎಣಿಸಿಕೊಂಡನು.

'ಇನ್ನು ನನ್ನನ್ನು ಹಿಂಬಾಲಿಸಿ ನಡೆಯಿರಿ.' ಎಂದೆನ್ನುತ ಆ ಇಪ್ಪತ್ತು ಜನರ ತಂಡವ ಮುಂದೆ ಗಾವೆನ್‌ನು ಪಟ್ಟಣದ ಓಣಿಗಳೊಳಗೆ ನುಗ್ಗಿದನು. ಇಡಿ ಪಟ್ಟಣವೆಲ್ಲ ಸ್ಮಶಾನದಂತೆ ಭಾಸವಾಗುತ್ತಿತ್ತು. ಪ್ರತಿಯೊಂದು ಮನೆಯ ಬಾಗಿಲಗಳು ಇಕ್ಕಲ್ಪಟ್ಟಿದ್ದವು. ಎಲ್ಲಿಯೂ ದೀಪವು ಕಾಣುತ್ತಿರಲಿಲ್ಲ. ತೋಫುಗಳ ಗರ್ಜನೆ ಸಾಗಿಯೇ ಇತ್ತು. ಇಪ್ಪತ್ತು ನಿಮಿ.

ಷಗಳಲ್ಲಿ ಅವನು ಪೇಟೆಯ ಇನ್ನೊಂದು ಬದಿಯ ಬೀದಿಯ ಹತ್ತಿರವಿರುವ ಬೈಲು ಸ್ಥಳಕ್ಕೆ ಬಂದನು. ವೆಂಡಿಯ ೫೦೦೦ ಸೈನಿಕರನ್ನು ಎದುರಿಸಲು ಗಾವೆನ್‌ನು ೨೦ ಜನರೊಂದಿಗೆ ಸಿದ್ಧವಾಗಿದ್ದನು. ಆ ಶತ್ರುಗಳು ಅತ್ತ ಕಡೆಗೆ ಮುಖ ಮಾಡಿದ್ದರು.

ಗಾವೆನ್‌ನು ನಾಯಕನ ಕಿವಿಯಲ್ಲಿ ಏನನ್ನೊ ಹೇಳಿದನು. ಸಿಪಾಯರು ಬಂದೂಕುಗಳಿಗೆ ಸುತ್ತಿದ ಹುಲ್ಲಿನ ಹಗ್ಗವನ್ನು ಬಿಚ್ಚಿದರು. ಹನ್ನೆರಡು ಜನರು ಬಂದೂಕು ಗುರಿಯಿಟ್ಟುಕೊಂಡು ನಿಂತರು. ಏಳು ಜನರು ನಗಾರಿಯನ್ನು ಬಾರಿಸುವದಕ್ಕೆಂದು ಕೈಯಲ್ಲಿ ಕಟ್ಟಿಗೆಯನ್ನು ಹಿಡಿದು ಸಿದ್ಧವಾಗಿದ್ದರು. ತೋಫಿನ ಗರ್ಜನೆಯು ಇಲ್ಲದ ಹೊತ್ತನ್ನು ಸಾಧಿಸಿ ಗಾವೆನ್‌ನು ತನ್ನ ಕತ್ತಿಯನ್ನು ಹಿರಿದು ಆವೇಶಯುಕ್ತನಾಗಿ ' ಸಿಪಾಯರೇ, ಎರಡುನೂರು ಬಲಗಡೆಗೆ, ಎರಡುನೂರು ಎಡಗಡೆಗೆ ಸರಿಯಿರಿ. ಉಳಿದವರು ಮಧ್ಯದಲ್ಲಿರಲಿ ' ಎಂದು ಅಪ್ಪಣೆಯನ್ನು ವಿಧಿಸಿದನು. ಕೂಡಲೆ ನಗಾರೆಯ ಸಪ್ಪಳವು ಹೊರಟಿತು. ಅದರೊಡನೆಯೆ ಗುಂಡಿನ ಸುರಿಮಳೆ ಆರಂಭವಾಯಿತು.

ತಮ್ಮ ಬೆನ್ನುಹಿಂದೆ ಸೈನ್ಯ ಬರುತ್ತಿದೆ ಎಂಬದು ಗೊತ್ತಾದ್ದರಿಂದ ಆ ಹಳ್ಳಿಯ ಸೈನಿಕರ ಮೇಲೆ ವಿಪರೀತ ಪರಿಣಾಮವುಂಟಾಯಿತು. ಅತ್ತ ಗಾವೆನ್‌ನ ಸೈನ್ಯವು ಎದುರುಬದಿಯಿಂದ ಹಲ್ಲೆ ಮಾಡಿ ತೋಫುಖಾನೆಯ ಮೇಲೆ ಬಿದ್ದಿತು. ಲ್ಯಾಂಟ್‌ನೆಕ್‌ನ ಸೈನ್ಯವು ಮಧ್ಯದಲ್ಲಿ ಸಿಕ್ಕಿಕೊಂಡಿತು. ನಮಗೆ ದೊಡ್ಡ ಸಂಕಟ ಪ್ರಾಪ್ತವಾಯಿತೆಂದು ಆ ಸೈನ್ಯವು ಚದುರಿ ಓಡಲಾರಂಭಿಸಿತು. ತುಸು ಹೊತ್ತಿನಲ್ಲಿಯೇ ಪೇಟೆಯ ಭಾಗವೆಲ್ಲ ಬರಿದಾಯಿತು. ' ಜೀವವನ್ನು ರಕ್ಷಿಸಿರಿ ' ಎಂದು ಚೀರಿಕೊಳ್ಳುತ್ತ ಆ ಸೈನ್ಯವು ಅಸ್ತವ್ಯಸ್ತವಾಯಿತು. ಬಹುತರವಾಗಿ ಸೈನ್ಯವೆಲ್ಲ ದಿಕ್ಕಾಪಾಲಾಯಿತು. ಲ್ಯಾಂಟ್‌ನೆಕ್‌ನು ಇವೆಲ್ಲವನ್ನು ಕಣ್ಣಾರೆಕಂಡು ತಾನೂ ಅವರ ಹಿಂದಿಂದೆ ಹೊರಟು ಬಿಟ್ಟನು.

ರುಜ್‌ನ ತಂಡದ ಕಡೆಗೆ ಹೊರಳಿ ಗಾವೆನ್‌ನು ' ನೀವು ೧೨ ಜನರಿದ್ದರೂ ೧೨೦೦ ಕ್ಕೂ ಮಿಗಿಲಾದವರಿರುತ್ತೀರಿ ' ಎಂದು ಹೊಗಳಿದನು. ತಮ್ಮ ಸೇನಾಪತಿಗಳಿಂದ ಧನ್ಯೋದ್ಗಾರಗಳು ಹೊರಡುವದೆಂದರೆ ವಿಜಯ

ಮಾಲೆಯು ತಮಗೆ ದೊರೆತಂತೆಯೋ ಎಂದು ಆವರ ಭಾವನೆಯಾಯಿತು. ಲ್ಯಾಂಟ್‌ನೆಕ್‌ನ ಓಡಿಹೋಗುತ್ತಿರುವ ಸೈನಿಕರನ್ನೂ ಅಧಿಕಾರಿಗಳನ್ನೂ ಹಿಡಿದು ತಂದರು. ಹಿಲಾಲಗಳನ್ನು ಹಿಡಿದುಕೊಂಡು ಹುಡುಕಾಡಿ ಎಷ್ಟೋ ಜನರನ್ನು ಒಂದೆಡೆಗೆ ತಂದುಹಾಕಿದರು. ಓಡಿಹೋಗಲು ಆಗದಿದ್ದವರು ಶರಣುಬಂದರು ಮುಖ್ಯ ಮುಖ್ಯ ಬೀದಿಗಳೆಲ್ಲ ಹೆಣಗಳಿಂದ ಮುಚ್ಚಿ ಹೋಗಿದ್ದವು. ಇನ್ನೂ ಎಷ್ಟೋ ಜನರು ವಿರೋಧ ಮಾಡುತ್ತಿದ್ದರು. ಅವ ರನ್ನು ಹಿಡಿದು ಅವರ ಶಸ್ತ್ರಾಸ್ತ್ರಗಳನ್ನು ಕಸಿದುಕೊಳ್ಳಲಾಯಿತು.

ಈ ಗಡಿಬಿಡಿಯಲ್ಲಿ ಒಬ್ಬ ಮನುಷ್ಯನು ಒಂದು ಕೈಯಲ್ಲಿ ಪಿಸ್ತೂಲು, ಇನ್ನೊಂದು ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು ಆರ್ಭಟಿಸುತ್ತಿರುವ ದೃಶ್ಯವು ಗಾವೆನ್‌ನ ಕಣ್ಣಿಗೆ ಬಿದ್ದಿತು. ಅವನ ಸಮೀಪಕ್ಕೆ ಯಾರಿಗೂ ಹೋಗುವ ಧೈರ್ಯವಾಗಿರಲಿಲ್ಲ. ಅಷ್ಟರಲ್ಲಿ ಅವನು ಎಚ್ಚರದಪ್ಪಿ ನೆಲಕ್ಕುರುಳಿದ್ದನ್ನೂ ಕಂಡು ಗಾವೆನ್‌ನು ಹಿರಿದ ಕತ್ತಿ ಸಮೇತನಾಗಿ ಅತ್ತ ಧಾವಿಸಿದನು.

'ಶರಣು ಬಾ' ಎಂದು ಗಾವೆನ್‌ನು ಅವನಿಗೆ ಆಜ್ಞೆ ಮಾಡಿದನು. ಅವನು ಶಾಂತರೀತಿಯಿಂದ ನೋಡುತ್ತಿದ್ದನು. ಅವನ ಮೈಯೊಳಗಿಂದ ನೆತ್ತರವು ಸುರಿಯುತ್ತಿತ್ತು. 'ನೀನು ನನ್ನ ಸೆರೆಯಾಳಾಗಿರುವಿ' ಎಂದು ಗಾವೆನ್‌ನು ಕೂಗಿದನು. ಆ ಮನುಷ್ಯನು ಸುಮ್ಮನೇ ಇದ್ದನು.

'ನಿನ್ನ ಹೆಸರೇನು ?'

'ನನ್ನ ಹೆಸರು ಪಿಶಾಚಿ.'

'ನೀನು ಬಹಳ ಶೂರನಿದ್ದಂತೆ ತೋರುತ್ತದೆ.'

'ರಾಜನಿಗೆ ಜಯಜಯಕಾರ!' ವೆಂದು ಆವೇಶದಿಂದ ಆ ಮನು ಷ್ಯನು ಕೂಗಿ, ತನ್ನೆಲ್ಲ ಸಾಮರ್ಥ್ಯವನ್ನು ಒಟ್ಟುಗೂಡಿಸಿಕೊಂಡು ಕೈಯಲ್ಲಿದ್ದ ಪಿಸ್ತೂಲಿನಿಂದ ಗಾವೆನ್‌ನಿಗೆ ಹೊಡೆಯಲು ಹೆಣಗಿದನು. ಕತ್ತಿ ಯಿಂದ ತಲೆಗೆ ಇರಿಯಲೆಳಸಿದನು. ಇಷ್ಟೆಲ್ಲ ಕಣ್ಮುಚ್ಚಿ ಕಣ್ಣು ತೆರೆಯು ವದರಲ್ಲಾಯಿತು. ಆದರೂ ಇವನಿಗಿಂತ ಹೆಚ್ಚು ದಕ್ಷನಾದವನು ಇನ್ನೊ ಬ್ಬನಿದ್ದನು. ಅವನು ಅದೇ ಹೊತ್ತಿಗೆ ಕುದುರೆಯ ಮೇಲಿಂದ ಅಲ್ಲಿಗೆ ಬಂದಿ

ದ್ದನು. ಪಿಸ್ತೂಲನ್ನೂ ಕತ್ತಿಯನ್ನೂ ಪ್ರಯೋಗಿಸುವ ಆ ಮನುಷ್ಯನನ್ನು ಕಂಡು ಈ ಮನುಷ್ಯನು ತನ್ನ ಕುದುರೆಯನ್ನು ನಡುವೆ ಹಾಕಿದನು. ಈ ಸ್ವಾರನು ನಡುವೆ ಬರದಿದ್ದರೆ ಗಾವೆನ್‌ನ ನೂರು ವರುಷಗಳು ತುಂಬುತ್ತಿದ್ದವು. ಕುದುರೆಗೆ ಗುಂಡು ತಗುಲಿತು. ಕತ್ತಿಯ ಹೊಡೆತವು ಆ ಸ್ವಾರನಿಗೂ ಬಿದ್ದಿತು. ಕುದುರೆಯು ಸತ್ತೇಬಿದ್ದಿತು. ಸ್ವಾರನೂ ಎಚ್ಚರದಪ್ಪಿ ಬಿದ್ದುಕೊಂಡನು. ಗಾವೆನ್‌ನು ಅವನ ಸಮೀಪಕ್ಕೆ ಹೋಗಿ 'ನೀನಾರು?' ಎಂದು ಕೇಳುತ್ತ ಅವನನ್ನೇ ನೆಟ್ಟ ನೋಟದಿಂದ ನೋಡತೊಡಗಿದನು. ಮುಖಕ್ಕೆ ಗಾಯವಾಗಿದ್ದರಿಂದ ನೆತ್ತರವು ಸುರಿಯುತ್ತಿತ್ತು. ಆದ್ದರಿಂದ ಅವನ ಗುರುತು ಗಾವೆನ್‌ನಿಗೆ ಬೇಗನೆ ಹತ್ತಲಿಲ್ಲ.

'ಈ ಮನುಷ್ಯನು ನನ್ನ ಪ್ರಾಣವನ್ನುಳಿಸಿದ್ದಾನೆ. ಇವನು ಯಾರೆಂಬದನ್ನು ಯಾರಾದರೂ ಗುರುತು ಹಿಡಿಯುವಿರಾ?' ಎಂದು ದೊಡ್ಡ ಧ್ವನಿಯಿಂದ ಕೂಗಿದನು.

'ಸೇನಾಪತಿಗಳೇ, ಈ ಮನುಷ್ಯನು ಕೆಲ ನಿಮಿಷಗಳಿಂದ ಪಟ್ಟಣದೊಳಗಿಂದ ಬರುವದನ್ನು ನಾನು ಕಂಡೆನು' ಎಂದು ಒಬ್ಬ ಸಿಪಾಯಿಯು ಹೇಳಿದನು.

ಅಷ್ಟರಲ್ಲಿ ಶಸ್ತ್ರವೈದ್ಯನು ತನ್ನ ಸಾಮಾನುಗಳೊಂದಿಗೆ ಅಲ್ಲಿ ಬಂದನು. ಆ ಮನುಷ್ಯನಿಗೆ ಎಚ್ಚರವೇ ಇರಲಿಲ್ಲ.

ವೈದ್ಯನು ಅವನನ್ನು ಪರೀಕ್ಷಿಸಿ "ಈ ಗಾಯ ಕಿರುಕುಳವಾಗಿದೆ. ಅಷ್ಟೇನು ಮಹತ್ವ ಕೊಡಬೇಕಾಗಿಲ್ಲ. ಎಂಟು ದಿನಗಳಲ್ಲಿ ಗುಣವಾಗುವದು" ಎಂದು ತನ್ನ ಅಭಿಪ್ರಾಯವನ್ನು ಹೇಳಿದನು.

ಆ ಗಾಯಾಳುವನ್ನು ಹೊರಸಿನ ಮೇಲೆ ಮಲಗಿಸಿದರು. ಅವನ ಬಟ್ಟೆಯನ್ನು ಬದಲಾಯಿಸಲಾಯಿತು. ನೀರನ್ನು ತರಿಸಿ ಅವನ ಗಾಯವನ್ನು ತೊಳೆದರು. ಮುಖವು ನಿಚ್ಚಳಾಗಿ ಕಾಣುವಂತಾಯಿತು. ಗಾವೆನ್‌ನು ಅವನನ್ನು ಲಕ್ಷ್ಯಪೂರ್ವಕವಾಗಿ ದಿಟ್ಟಿಸಿ ನೋಡಿದನು. 'ಅವನ ಹತ್ತಿರ ಕಾಗದಪತ್ರಗಳೇನಾದರೂ ಇವೆಯೋ ಹೇಗೆ ನೋಡಿರಿ' ಎಂದು ಗಾವೆನ್‌ನು ಆಜ್ಞೆಮಾಡಿದನು.

ವೈದ್ಯನು ಶೋಧಿಸಿ ಒಂದು ಚಿಕ್ಕ ಸಿವುಡನ್ನು ತೆಗೆದು ಗಾವೆನ್‌ನ ಕೈಗೆ ಕೊಟ್ಟನು. ಮುಖವನ್ನು ತೊಳೆಯುವಾಗ ನೀರು ತಗುಲಿದ್ದರಿಂದ ಅವನಿಗೆ ಸ್ವಲ್ಪ ಎಚ್ಚರವುಂಟಾಯಿತು. ಅವನು ಕಣ್ಣು ತೆರೆಯುವ ಪ್ರಯತ್ನ ಮಾಡಿದನು. ಗಾವೆನ್‌ನು ಕಾಗದದ-ಸಿವುಡನ್ನು ಬಿಚ್ಚಿದನು. ಅದರಲ್ಲಿ ಮಡಿಕೆ ಬಿದ್ದಿದ್ದ ಕಾಗದವೊಂದಿತ್ತು. ಆ ಕಾಗದವನ್ನು ಅತ್ತಿತ್ತ ಹೊರಳಾಡಿಸಿ ನೋಡಲಾಗಿ ಅದರಲ್ಲಿ 'ಸಿಮೋರೆಡಿನ್' ಎಂಬ ಹೆಸರು ಸಿಕ್ಕಿತು. ಆ ಹೆಸರನ್ನು ನೋಡಿದೊಡನೆಯೆ 'ಯಾರು ಈ ಸಿಮೋರೆಡಿನ್?' ಎಂದು ಗಾವೆನ್‌ನು ಉದ್ಗಾರ ತೆಗೆದನು.

ಗಾಯಾಳುವು ಈ ಸಪ್ಪಳವನ್ನು ಕೇಳಿ ನಿಚ್ಚಳಾಗಿ ಎಚ್ಚರಾದನು. 'ಸಿಮೋರೆಡಿನ್! ನೀನೋ! ನೀನೇ ನನ್ನ ಪ್ರಾಣವನ್ನು ಎರಡನೆಯ ಸಲ ಉಳಿಸಿದೆಯಲ್ಲ?' ಎಂದು ಗಾವೆನ್‌ನು ಆಶ್ಚರ್ಯಚಕಿತನಾದನು. ಸಿಮೋರೆಡಿನ್‌ನು ಅವನ ಕಡೆಗೆ ದೃಷ್ಟಿಯನ್ನು ಬೀರಿದನು. ಅವನ ಮುಖದಲ್ಲಿ ಆನಂದದ ಕುರುಹುಗಳು ಮಿನುಗತೊಡಗಿದವು. ಗಾವೆನ್‌ನು ಅವನೆದುರಿಗೆ ಮಂಡಿಯನ್ನೂರಿ 'ಗುರುಮಹಾರಾಜ!' ಎಂದು ಘೋಷಿಸಿಸಿದನು.

ಸಿಮೋರೆಡಿನ್‌ನು "ಗಾವೆನ್‌ನೇ, ದೇವರು ನಿನ್ನನ್ನು ವಿಜಯಶಾಲಿಯನ್ನಾಗಿ ಮಾಡಲಿ" ಎಂದು ಆಶೀರ್ವದಿಸಿದನು.

---

## ೧೧.

ಗುರು-ಶಿಷ್ಯರ ಭೆಟ್ಟಿಯು ಬಹಳ ದಿನಗಳಿಂದಾಗಿರಲಿಲ್ಲ. ಆದರೂ ಅವರ ಅಂತಃಕರಣವು ದೂರವಿರಲಿಲ್ಲ. ಇಬ್ಬರ ಪರಿಚಯವಾಗಲು ಹೊತ್ತೇ ಹಿಡಿಯಲಿಲ್ಲ. ಸಿಮೋರೆಡಿನ್‌ನನ್ನು ಊರೊಳಗಿನ ಒಂದು ಕಟ್ಟಡದ ಒಂದು ಕೋಣೆಯಲ್ಲಿ ಮಲಗಿಸಲಾಯಿತು. ವೈದ್ಯನು ಗಾಯವನ್ನು ಕಟ್ಟಿ 'ಅವ

ನಿಗೆ ಏಕಾಂತ ತೀರ ಅಗತ್ಯ ' ವೆಂದು ಗಾವೆನ್‌ನಿಗೆ ಹೇಳಿದನು. ಗಾವೆನ್‌ನ ದಾರಿಯನ್ನು ಹೊರಗೆ ನೂರಾರು ಜನರು ಕಾಯುತ್ತಲಿದ್ದರು. ಅವನಿಗಾಗಿ ಅನೇಕ ಕೆಲಸಗಳು ಬಾಯ್ತೆರೆದು ಕುಳಿತಿದ್ದವು. ಸಿವೋರೆಡಿನ್‌ನು ಒಬ್ಬನೇ ಬಿದ್ದುಕೊಂಡನು; ಆದರೆ ಅವನಿಗೆ ನಿದ್ದೆ ಬರಲೊಲ್ಲದು. ಅವನಿಗೆ ಗಾಯದ ತಾಪವೊಂದು ಬಹಳಾಗಿತ್ತು. ಆನಂದವೂ ಅಷ್ಟೇ ಆಗಿತ್ತು. ಈ ಆನಂದದ ಪ್ರಸಂಗ ಬಂದೀತೆಂದು ಅವನಿಗೆ ಕಲ್ಪನೆಯಾಗಿರಲಿಲ್ಲ. ಅವನು ಗಾವೆನ್‌ನಿಗೆ ಪುನರ್ಜನ್ಮವನ್ನು ಕೊಟ್ಟಿದ್ದನು. ಗಾವೆನ್‌ನು ಚಿಕ್ಕವನಿದ್ದಾಗ ಅವನನ್ನು ಬಿಟ್ಟು ಹೋಗಿದ್ದನು. ಈಗ ಅವನು ದೊಡ್ಡವನಾಗಿ ಉಚ್ಚಪದವಿಗೇರಿದ್ದನು. ವೆಂಡಿಯ ಯುದ್ಧದ ಹೊಣೆಗಾರಿಕೆಯೆಲ್ಲ ಗಾವೆನ್‌ನ ತಲೆಯ ಮೇಲಿತ್ತು. ಸಿವೋರೆಡಿನ್‌ನು ಪ್ರಜಾಪಕ್ಷಕ್ಕೆ ತನ್ನ ಸರ್ವಸ್ವವನ್ನೇ ಧಾರೆಯೆರೆದಿದ್ದನು. ಅಂಥವನ ಶಿಷ್ಯನಾದ ಈ ಗಾವೆನ್‌ನು ಯುದ್ಧವನ್ನು ಗೆದ್ದಿದ್ದನು. ಗಾವೆನ್‌ನು ಸಿವೋರೆಡಿನ್‌ನ ಪ್ರತಿಬಿಂಬವೇ ಆಗಿದ್ದನು.

ವೆಂಡಿಯ ಸೈನ್ಯದ ಆಧಿಪತ್ಯವನ್ನು ಯಾರ ಕಡೆಗೆ ಕೊಡಬೇಕೆಂಬ ಬಗ್ಗೆ ಪ್ರಜಾಪಕ್ಷದಲ್ಲಿ ಒಮ್ಮತವಿರಲಿಲ್ಲ. ಯಾರು ಯಾರೋ ತಮ್ಮವನಿಗಾಗಬೇಕೆಂದು ಪ್ರಯತ್ನಿಸುತ್ತಿದ್ದರು. ಸಿವೋರೆಡಿನ್‌ನು ' ಈ ಯುದ್ಧದ ಪರಿಣಾಮದ ಮೇಲಿಂದ ಗಾವೆನ್‌ನನ್ನು ಸರ್ವಾಧಿಕಾರಿಯನ್ನಾಗಿ ಯಾಕೆ ಮಾಡಬಾರದೆಂಬುದೇ ತಿಳಿಯದಾಗಿದೆ ಅವನಲ್ಲಿ ಸೇನಾಧಿಪಪತಿಯಲ್ಲಿರತಕ್ಕ ಎಲ್ಲ ಗುಣಗಳೂ ಇವೆ ' ಎಂದೆನ್ನುತ್ತ ಅವನು ಗಾವೆನ್‌ನ ಭವಿಷ್ಯಕಾಲದ ಉಜ್ವಲ ಚಿತ್ರವನ್ನು ಕಲ್ಪನಾರಾಜ್ಯದಲ್ಲಿ ಮೂಡಿಸಿಕೊಳ್ಳುತ್ತ ಮಲಗಿಕೊಂಡಿದ್ದನು.

ಸಿವೋರೆಡಿನ್‌ನಲ್ಲಿ ಎರಡು ಗುಣಧರ್ಮಗಳು ಅವಿತುಕೊಂಡಿದ್ದವು ಅವನು ದಯಾವಂತನಿದ್ದಷ್ಟೇ ಕ್ರೂರಿಯೂ ಆಗಿದ್ದನು. ಈ ದೃಷ್ಟಿಯಿಂದ ಅವನು ಗಾವೆನ್‌ನನ್ನು ನೋಡತೊಡಗಿದ್ದನು. ಒಮ್ಮೊಮ್ಮೆ ಗಾವೆನ್‌ನು ಮೂರ್ತಿಮಂತ ದಯೆಯೇ ವ್ಯಕ್ತವಾದಂತೆ ಕಾಣುತ್ತಿದ್ದನು. ಮತ್ತೊಮ್ಮೆ ಕರ್ದನ ಕಾಳನಂತೆ ಭಾಸವಾಗುತ್ತಿದ್ದನು. ಆದರೂ ಈ ಕಾಲವು ವಿಧ್ವಂಸಕ

ಕಾರ್ಯಮಾಡಬೇಕಾದ್ದರಿಂದ ಅವನು ಈ ಕೆಲಸಕ್ಕೆ ಬಲು ಉಪಯೋಗ ಬೀಳಬಹುದೆಂದು ಅವನ ಅಭಿಪ್ರಾಯವಾಗಿತ್ತು. ಈ ರೀತಿಯಾಗಿ ಸಿಮೋರೆಡಿನ್‌ನ ವಿಚಾರ ಹೊರಟಿರುವಾಗ ಬದಿಯ ಕೋಣೆಯಲ್ಲಿ ಗಾವೆನ್‌ನು ಯಾರೊಡನೆಯೋ ಮಾತಾಡುತ್ತ ಕುಳಿತಿರುವನೆಂದು ಅವನಿಗೆ ಕಂಡು ಬಂದಿತು. ಗಾವೆನ್‌ನ ದನಿಯೇ ಎಂಬದು ಸ್ಪಷ್ಟವಾಗಿ ಕೇಳಿಸುತ್ತಿತ್ತು. ಸಿಮೋರೆಡಿನ್‌ನು ಅತ್ತ ಕಡೆಗೆ ಕಿವಿಗೊಟ್ಟು ಕೇಳತೊಡಗಿದನು. ಅವರ ಶ್ಲೊಬ್ಬನು 'ಸೇನಾಪತಿ ಸಾಹೇಬರೇ, ಆ ಮನುಷ್ಯನೇ ತಮಗೆ ಗುಂಡು ಹೊಡೆದನು. ಯಾರೂ ರಕ್ಷಕರಿಲ್ಲೆಂಬದನ್ನು ಕಂಡು ಇವನು ಒಳನುಗ್ಗಿ ಬಂದನು' ಎಂದಂದನು.

'ನಿನಗೆ ಗಾಯವಾಗಿದೆಯೆ?'

'ಗುಂಡುಗಳನ್ನು ತೆಗೆಯಿಸಿಕೊಳ್ಳುವಷ್ಟು ನಾನು ನೆಟ್ಟಗಿದ್ದೇನೆ.'

'ಅವನನ್ನು ಹೊರಸಿನ ಮೇಲೆ ಮಲಗಿಸಿ, ಗಾಯಗಳನ್ನು ತೊಳೆದು, ಔಷಧ ಹಾಕಿ ಕಟ್ಟಿರಿ. ಕಾಳಜಿಪೂರ್ವಕವಾಗಿ ನೋಡಿಕೊಂಡು ಅವನನ್ನು ನೆಟ್ಟಗೆ ಮಾಡಿರಿ.'

'ಛೀ, ನನಗೆ ಗುಣವಾಗುವದು ಬೇಡವಾಗಿದೆ; ಸಾಯಬೇಕೆನ್ನುವೆನು.'

'ಇಲ್ಲ, ಇಲ್ಲ. ನೀನು ಬದುಕಲೇಬೇಕು. ನೀನು ರಾಜನ ಹೆಸರು ತೆಗೆದುಕೊಂಡು ನನ್ನನ್ನು ಹೊಡೆಯಬೇಕೆಂದು ಮಾಡಿದ್ದಿ; ನಾನು ಪ್ರಜರ ಹೆಸರನ್ನು ತೆಗೆದುಕೊಂಡು ನಿನಗೆ ದಯೆ ತೋರಿಸಬೇಕೆಂದಿದ್ದೇನೆ. ಕಾರಣ ನೀನು ಬದುಕಬೇಕು.' ಎಂದು ನಾನನ್ನುತ್ತೇನೆ. ಗಾವೆನ್ ಮತ್ತು ಗಾಯಾಳುವಾದ ಸಿಪಾಯಿಯೊಡನೆ ನಡೆದ ಸಂಭಾಷಣವನ್ನು ಕೇಳಿ, ಸಿಮೋರೆಡಿನ್‌ನ ಮುಖಚರ್ಯೆಗಳು ಬದಲಾದವು. ಅವನು ಸ್ವಲ್ಪ ಖೇದ ಪಟ್ಟುಕೊಂಡು 'ಓಟ್ಟಿನ ಮೇಲೆ ಇವನು ದಯಾವಂತನೇ ಇರುತ್ತಾನೆ' ಎಂದಂದುಕೊಂಡನು.

   

ಟೇಲ್‌ಮಾರ್ಚನು ರಕ್ತದ ಮಡುವಿನೊಳಗಿಂದ ಒಬ್ಬ ಹೆಣ್ಣು ಮಗಳನ್ನು ಹೊರಿಸಿಕೊಂಡು ಬಂದುದರ ನೆನಪು ಮಾಡಿಕೊಳ್ಳಿರಿ. ಅವಳ ಅವಸ್ಥೆ ಬಹಳ ಕಠಿಣವಾಗಿತ್ತು. ಅವಳಿಗೆ ಬಗಲಲ್ಲಿ ಮತ್ತು ಎದೆಯಲ್ಲಿ ಹೀಗೆ ಎರಡು ಗಾಯುಗಳಾಗಿದ್ದವು. ಟೇಲ್‌ಮಾರ್ಚನು ದೊಡ್ಡ ಜ್ಞಾನಿಯೆಂದು ಸುತ್ತು ಕಡೆಗೆ ಹೆಸರುವಾಸಿಯಾಗಿದ್ದನು. ಅವನಿಗೆ ವೈದ್ಯಕಿಯ ಜ್ಞಾನವಿತ್ತು; ಶಸ್ತ್ರಕ್ರಿಯೆಯ ಉಪಯೋಗವೂ ಗೊತ್ತಿತ್ತು. ಅವನು ಅವಳನ್ನು ತಾನಿರುವ ಅರಣ್ಯದ ಗುಡಿಸಲಕ್ಕೊಯ್ದು, ಔಷಧೋಪಚಾರ ಮಾಡಿದನು. ಸುದೈವದಿಂದ ಅವಳಿಗೆ ಗುಣಮುಖವಾಗುತ್ತ ನಡೆಯಿತು. ಗಾಯುಗಳು ಮಾದವು. ಅವಳಿಗೆ ಕೂತೇಳಲು ಬರುವಷ್ಟು ತ್ರಾಣವು ಬಂದಿತು. ಟೇಲಮಾರ್ಚನಿಗೆ ಅವಳ ಬಗ್ಗೆ ಏನೂ ಗೊತ್ತಿರಲಿಲ್ಲ. ಇಂಥ ಗಾಯುಗಳಾದಾಗ ಮಾತಾಡಲೇ ಬಾರದು. ಅವಳೂ ಮಾತಾಡುತ್ತಿರಲೇ ಇಲ್ಲ. ಅವಳು ಒಂದು ವೇಳೆ ಮಾತನಾಡುವ ಪ್ರಯತ್ನ ಮಾಡಿದರೆ ಟೇಲಮಾರ್ಚನು ಅವಳನ್ನು ಮಾತನಾಡಗೊಡಿಸುತ್ತಿರಲಿಲ್ಲ. ಆದರೂ ಅವಳ ಅಂತಃಕರಣದಲ್ಲಿ ಆಗುತ್ತಿರುವ ಕಳವಳದ ಚಿನ್ಹಗಳು ಅವಳ ಮುಖದಲ್ಲಿ ಒಡೆದುಕಾಣುತ್ತಿರುವ ಕಲ್ಪನೆ ಬರುವಂತಿತ್ತು. ಆದರೆ ಇಂದು ಮುಂಜಾನೆಯಿಂದ ಅವಳಿಗೆ ವಿಶೇಷವಾಗಿ ನೆಟ್ಟಗೆನಿಸತೊಡಗಿತ್ತು. ಅದನ್ನು ಕಂಡು ಮುದುಕ ಟೇಲಮಾರ್ಚನು ನಗುನಗುತ್ತ ' ಈಗ ನಿನ್ನ ಗಾಯುಗಳು ಮಾಯ್ದಿರುತ್ತವೆ ನಿನಗೆ ಕಾಲೂರಿ ನಿಲ್ಲಲು ಬಂದುದನ್ನು ನೋಡಿ ನನಗೆ ಆನಂದವಾಗುತ್ತಿದೆ ' ಎಂದನು.

' ಆದರೆ ಹೃದಯುದಲ್ಲಿರುವ ಗಾಯುದ ಗತಿಯೇನು ? ಅವು ಎಲ್ಲಿವೆ ಎಂಬುದು ನಿಮಗೆ ಗೊತ್ತಿರಲಿಕ್ಕಿಲ್ಲ. ”

' ಅವು ಎಂದರೆ ಯಾರು ? ಏನು? ”

' ನನ್ನ ಮಗುಗಳು! '

ಅವಳು ಬೇನೆಯಿಂದ ಬಳಲುತ್ತಿರುವಾಗ ತನ್ನ ಮಗುಗಳ ಹೆಸರು ತೆಗೆದುಕೊಂಡು ಚೀರುತ್ತಿದ್ದಳು. ಅದಕ್ಕೆ ಮುದಕನಿಂದ ಉತ್ತರವೇ ಬರುತ್ತಿದ್ದಿಲ್ಲವೆಂದು ಅವಳಿಗೆ ಹೊಳೆದಿತ್ತು. ಟೇಲ್‌ಮಾರ್ಚನಿಗೆ ನಿಜವಾ

ಗಿಯೆ ಆಬಗ್ಗೆ ಏನು ಹೇಳಬೇಕೆಂಬುದೇ ತಿಳಿಯದಾಗಿತ್ತು. ಯಾವುದೇ ತಾಯಿಗೆ ನಿನ್ನ ಮಕ್ಕಳು ತೀರಿದವು ಎಂದು ಹೇಳುವದು ಸುಲಭವಾದುದಲ್ಲ. ಮೇಲಾಗಿ ಅವನಿಗಾದರೂ ಅದೆಲ್ಲಿ ಗೊತ್ತಿತ್ತು? ಅವಳು ಗಾಯ ಹೊಂದಿ ಭೂಮಿಯ ಮೇಲೆ ಹೆಣದಂತೆ ಬಿದ್ದಿದ್ದಳು. ಹಾಗೆಯೇ ಅವನು ಅವಳನ್ನು ಮನೆಗೆಹೊರಿಸಿ ತಂದಿದ್ದನು. ಲ್ಯಾಂಟ್‌ನೆಕ್‌ನು ಆ ಮಗುಗಳನ್ನು ಒಯ್ದನು ಎಂಬದರಾಚೆಗೆ ಅವನಿಗೇನೂ ಗೊತ್ತೂ ಇರಲಿಲ್ಲ. ಮಗುಗಳು ಜೀವಂತ ಉಳಿದಿರುವವೋ ಇಲ್ಲವೋ ಎಂಬದೂ ಅವನಿಗೆ ತಿಳಿದಿರಲಿಲ್ಲ. ಸುತ್ತುಮುತ್ತಲಿನ ಜನರು ಲ್ಯಾಂಟ್‌ನೆಕ್‌ನಿಗೆ ಹೆದರುತ್ತಿದ್ದರು. ಅದರಿಂದ ಅವರು ಹೆಚ್ಚಿನ ಸಂಗತಿಯನ್ನು ಹೇಳಲು ಹಿಂಜರಿಯುತ್ತಿದ್ದರು. ಅದರಂತೆ ಟೆಲ್‌ಮಾರ್ಚನಿಗೂ ಹೇಳಲು ಅವರು ಅಷ್ಟೊಂದು ಮನಸು ಮಾಡುತ್ತಿರಲಿಲ್ಲ. ಒಕ್ಕಲಿಗರ ಹೆದರಿಕೆಯು ಬಹು ಚಮತ್ಕಾರವಾಗಿರುತ್ತದೆ. ಅವರು ಟೇಲ್‌ಮಾರ್ಚನನ್ನು ದ್ವೇಷಿಸುತ್ತಿದ್ದರು. ಅವನು ಆಕಾಶದತ್ತ ಯಾಕೆ ನೋಡುತ್ತಾನೆ? ಏಕಾಂತವಾಸದಲ್ಲಿದ್ದುಕೊಂಡು ಏನು ಮಾಡುತ್ತಾನೆ? ಎಂಥ ವಿಚಾರ ಮಾಡುತ್ತಾನೆ? ನಿಜವಾಗಿಯೆ ಅವನೊಬ್ಬ ವಿಚಿತ್ರ ಮನುಷ್ಯನೆಂದು ಅವರನ್ನುತ್ತಿದ್ದರು. ಯುದ್ಧ ನಡೆದಿದೆ ಏನು, ಅಗ್ನಿನಾರಾಯಣನು ಉರಿಯುತ್ತಿರುತ್ತಾನೇನು. ಚಂಡುಗಳು ಹಾರಿಸಲ್ಪಡುತ್ತಿವೆ ಏನು, ಒಬ್ಬರನ್ನೊಬ್ಬರ ಸಂಹಾರಕ್ಕಾಗಿ ಹೊಂಚು ಹಾಕಿ ಕುಳಿತಿರುವರೇನು, ಅಂಥಲ್ಲಿ ಈ ಮನುಷ್ಯನು ಕಟ್ಟಿಗೆಗಿಟ್ಟಿಗೆಯನ್ನೇನು ಕೂಡಿಹಾಕುತ್ತಾನೆ, ಪಕ್ಷಿ, ನಕ್ಷತ್ರ, ಹೂಗಳ ಕಡೆಗೆ ನೋಡುತ್ತಾನೇನು ಎಂಬದರ ಅರ್ಥವೇ ಅವರಿಗಾಗಿರಲಿಲ್ಲ. ಅವನೊಬ್ಬ ಭಯಂಕರ ಮನುಷ್ಯನೆಂದು ಅವರ ಕಲ್ಪನೆಯಾಗಿತ್ತು. ಅವನು ಎಂದೂ ಯಾರನ್ನೂ ಹೊಡೆಯುತ್ತಿದ್ದಿಲ್ಲ; ಯಾರಿಗೂ ಹಾನಿಯನ್ನು ಮಾಡುತ್ತಿದ್ದಿಲ್ಲ. ಆದ್ದರಿಂದಲೇ ಜನರು ಅವನಿಗೆ ಹೆದರುತ್ತಿದ್ದರು. 'ಅವನೊಬ್ಬ ಹುಚ್ಚನು' ಎಂದು ಬರಹೋಗುವವರು ಅನ್ನುತ್ತಿದ್ದರು. ಅವನೊಂದು ವಿಕ್ಷಿಪ್ತಪ್ರಾಣಿಯೆಂದು ಜನರ ಅಭಿಪ್ರಾಯವಾಗಿದ್ದರಿಂದ ಅವನೊಡನೆ ಅವರು ಮಾತನಾಡುತ್ತಿರಲಿಲ್ಲ. ಹೀಗಾಗಿ ಅವನಿಗೆ ಜನರ ಸಂಪರ್ಕವೇ

ಅವನಿಗೆ ಹೆಚ್ಚಾಗಿರಲಿಲ್ಲ. ಯಾವ ಸಂಗತಿಗಳೂ ಗೊತ್ತಾಗಲು ಅವಕಾಶವೇ ಇರಲಿಲ್ಲ.

'ನನ್ನ ಮಗುಗಳು' ಎಂಬ ಹೃದಯಭೇದಕವಾದ ಶಬ್ದಗಳನ್ನು ಕೇಳಿ ಅವನ ನಗೆಯು ಎತ್ತ್ತೋ ಮಾಯವಾಯಿತು. ಅವಳು ಪುನಃ 'ನನ್ನ ಮಕ್ಕಳು' ಎಂದು ಸಿಟ್ಟಿನಿಂದ ಚೀರಿಕೊಂಡು ಟೇಲ್‌ಮಾರ್ಚನನ್ನು ದುರಗುಟ್ಟಿ ನೋಡಿದಳು.

ಟೇಲ್‌ಮಾರ್ಚನು ಅಪರಾಧಿಯಂತೆ ಗೋಣು ಕೆಳಗೆ ಹಾಕಿ ನಿಂತ್ಕೊಂಡನು. ಅವನ ತಲೆಯಲ್ಲಿ ಲ್ಯಾಂಟ್‌ನೆಕ್‌ನ ವಿಚಾರ ಸುಳಿದಾಡುತ್ತಿದ್ದಿತು ಆದರೆ ಲ್ಯಾಂಟ್‌ನೆಕ್‌ನಿಗೆ ಇವನ ನೆನಪಿರಬಹುದೇ? ಟೇಲ್‌ಮಾರ್ಚನು ಜೀವಂತ ಇರುವನೋ ಇಲ್ಲವೋ ಎಂಬ ಬಗ್ಗೆ ಲ್ಯಾಂಟ್‌ನೆಕ್‌ನು ಎಂದಾದರೂ ವಿಚಾರ ಮಾಡಿರಬಹುದೇ? ಇಷ್ಟೆಲ್ಲ ಅನರ್ಥಕ್ಕೆ ತಾನೇ ಕಾರಣೀಭೂತನೆಂದು ಟೇಲ್‌ಮಾರ್ಚನು ಅಂದುಕೊಳ್ಳುತ್ತಿದ್ದನು. 'ನಾನೇಕೆ ಅವನನ್ನು ಬದುಕಿಸಿದೆ?' ಎಂಬ ಪ್ರಶ್ನೆಯನ್ನು ಹಾಕಿಕೊಂಡು 'ಅವನೊಬ್ಬ ಮನುಷ್ಯ' ಎಂಬ ಉತ್ತರವನ್ನು ಕೊಟ್ಟುಕೊಂಡು 'ಇದೆಲ್ಲಾ ನನಗೆ ಮೊದಲಿಗೇ ಗೊತ್ತಾಗಿದ್ದರೆ—?' ಎಂದು ಟೇಲ್‌ಮಾರ್ಚನು ಚಡಪಡಿಸುತ್ತಿದ್ದನು. ಅವನನ್ನು ಬದುಕಿಸಿದ್ದೇಕೆ ಎಂಬ ಪ್ರಶ್ನೆಗೆ ಅವನಿಗೆ ಸರಿಯಾದ ಉತ್ತರ ದೊರೆಯಲಿಲ್ಲ. ಸತ್ಕೃತ್ಯವು ಒಮ್ಮೊಮ್ಮೆ ದುಷ್ಕೃತ್ಯವಾಗುತ್ತದೆಂಬುದು ಹೀಗೆಯೇ ಎಂದು ಅವನ ಭಾವನೆಯಾಯಿತು. ಅವನನ್ನು ಬದುಕಿಸಿದುದು ಮಹಾ ಅಪರಾಧವಾಯಿತೆಂದು ಅವನು ದೃಢವಾಗಿ ನಂಬಿದನು. 'ಹಾಗಾದರೆ ಮಕ್ಕಳು ಏನಾದವು' ಎಂಬ ವಿಚಾರವು ಬಂದು ಅವನು ಕೋಪಾವಿಷ್ಟನಾಗುತ್ತಿದ್ದನು.

'ಹೀಗೆ ಅದು ನಡೆಯಲಾರದು'

'ಹೂಂ, ಗಪ್ ಚಿಪ್' ಎಂದು ಟೇಲ್‌ಮಾರ್ಚನು ಅವಳನ್ನು ಬೆದರಿಸಿದನು.

'ನೀನು ನನ್ನನ್ನೇಕೆ ಬದುಕಿಸಿದಿ? ನಿನ್ನ ಬಗ್ಗೆ ನನಗೆ ವಿಪರೀತ ಸಿಟ್ಟು ಬರುತ್ತದೆ. ನಾನು ಸತ್ತಿದ್ದರೆ ನನ್ನ ಮತ್ತು ನನ್ನ ಮಗುಗಳ

ಭೆಟ್ಟಿ ಸ್ವರ್ಗದಲ್ಲಾದರೂ ಆಗುತ್ತಿತ್ತು. ಅವು ಎಲ್ಲಿವೆ ? ನನಗೆ ಕಾಣಿಸ ಲೊಲ್ಲವು.'

ಅವನು ಅವಳ ಕೈಹಿಡಿದು ನಾಡೀ ಪರೀಕ್ಷೆ ಮಾಡಿ 'ಈ ವಿಚಾರ ಪನ್ನು ನಿಲ್ಲಿಸಿಬಿಡು; ನಿನಗೆ ಜ್ವರ ಏರುತ್ತಲಿವೆ.' ಎಂದನು.

ಅವಳು ಸಿಟ್ಟಿನಿಂದ 'ನಾನಿಲ್ಲಿಂದ ಎಂದು ಹೊರಟು ಹೋಗಲಿ?' ಎಂದು ಸಿಡುಕಿನಿಂದ ಅವನನ್ನು ವಿಚಾರಿಸಿದಳು.

'ಇಲ್ಲಿಂದ ಹೋಗುವದೇ? ಇಂಥ ಹುಚ್ಚು ವಿಚಾರ ಮಾಡಿದಿಯಾ ದರೆ ನಿನ್ನನ್ನು ಇಲ್ಲಿಂದ ಹೋಗಗೊಡಿಸಲಿಕ್ಕಿಲ್ಲ. ಜಾಣೆಯಂತೆ ಮಾತನಾ ಡಿದರೆ ನಾಳೆ ಬೇಕಾದರೆ ಹೋಗುವಿಯಂತೆ.'

'ಜಾಣೆಯಂತೆ ಅಂದರೇನು ?'

'ದೇವರಲ್ಲಿ ಶ್ರದ್ಧೆಯನ್ನಿಟ್ಟು, ಅವನ ಮೇಲೆ ಭಾರಹಾಕುವದು.'

'ದೇವರೇ, ನನ್ನ ಮಕ್ಕಳ ಗತಿ ಏನಾಗಿದೆಯೋ?' ಎಂದು ಅವಳ ತಲೆ ತಿರುಗಲಾರಂಭಿಸಿತು. ಅವಳ ಸ್ವರವು ಮಂದವಾಯಿತು. 'ನಾನು ಹೀಗೆ ಜೀವಿಸಲಾರೆ. ನಿನಗೆ ಮಕ್ಕಳಾಗಿಲ್ಲ. ನನಗೆ ಮಕ್ಕಳಾಗಿವೆ. ನಿನಗೆ ಮಕ್ಕಳ ಕಲ್ಪನೆ ಹೇಗೆ ಬರಬೇಕು? ನಿನಗೆ ಮಕ್ಕಳಿದ್ದುವೇನು ಮತ್ತೆ ?

'ಇಲ್ಲ'

'ಮಕ್ಕಳನ್ನು ಬಿಟ್ಟರೆ ನನಗೆ ಮತ್ತಾರೂ ದಿಕ್ಕೇ ಇರಲಿಲ್ಲ. ಮಕ್ಕಳಿ ಲ್ಲದೆ ನಾನು ಬದುಕೇನು ಫಲ? ನನ್ನ ಮಕ್ಕಳು ಎಲ್ಲಿವೆ ಎಂಬದನ್ನು ಯಾರಾದರೂ ಹೇಳಬಾರದೇ?'

'ಹಾಂ! ನಿನಗೆ ಜ್ವರ ಬಹಳ ಏರಿದವು. ಇನ್ನು ಮಾತನಾಡಬೇಡ' ಎಂದು ಟಿಲ್‌ಮಾರ್ಚನು ಹೇಳಿದನು. ಅವಳು ಅವನನ್ನು ನೋಡಿ, ಬಾಯಿ, ಹೊಲಿದುಕೊಂಡಳು. ಅಂದಿನಿಂದ ಅವಳು ಮಾತನಾಡುವದನ್ನೇ ಬಿಟ್ಟು, ಒಂದು ಮುದಿ ಮರದ ಬುಡದಲ್ಲಿ ಕುಳಿತು ಕಾಲ ನೂಕ ತೊಡಗಿದಳು. ಯಾರಿಗೆ ಸಂಕಟವಾಗಿದೆಯೋ ಅಂಥವರಿಗೆ ಏಕಾಂತವಾಸವು ಒಂದು ತರದ ಶಾಂತಿಯನ್ನು ಕೊಡುತ್ತದೆ. ಹಾಗೆ ಅವಳಿಗೆ ಆದಂತಾಯಿತು.

ಟೇಲ್‌ಮಾರ್ಚನು ಅವಳನ್ನು ನೋಡಿ ಆಳವಾದ ವಿಚಾರದಲ್ಲಿ ಮುಳು ಗುವನು. ಆಗ ಅವನು ಹೆಂಗುಸಿನಂತೆ ಚಿಂತಾ ಕ್ರಾಂತನಾಗುತ್ತಿದ್ದನು. ' ಅವಳ ತುಟಿಗಳು ಮಾತನಾಡದೆ ಕಣ್ಣುಗಳು ಮಾತನಾಡುತ್ತಿವೆ. ಅವಳಿಗೆ ಒಂದೇ ಒಂದು ಕಲ್ಪನೆ ಇದೆ. ಅದು ನನಗೆ ಗೊತ್ತಾಗಿದೆ. ಅವಳು ತಾಯಿಯಾಗಿದ್ದಳು; ಈಗ ನಾನು ತಾಯಿಯಾಗಿಲ್ಲ ಎಂಬ ಕಲ್ಪನೆ ಅವಳಿಗೆ ಕಟಿಯುತ್ತಿತ್ತು. ಮೂಲೆಗೂಸಿನ ವಿಚಾರ ಅವಳಿಗೆ ಬರುತ್ತಿತ್ತು.' ಹೀಗೆ ಅವಳು ವಿಚಾರಗ್ರಸ್ತ ಅವಸ್ಥೆಯಲ್ಲಿದ್ದಾಗ ಟೇಲ್‌ಮಾರ್ಚನಿಗೆ ಮಾತಾಡುವ ಧೈರ್ಯವೇ ಆಗುತ್ತಿದ್ದಿಲ್ಲ. ತಾಯಿಯಾದವಳೊಬ್ಬಳಿಗೆ ನೀನಿಂಥ ವಿಚಾರ ವನ್ನು ಮಾಡಬೇಡೆಂದು ಹೇಗೆ ಹೇಳುವದು? ಮಾತೃತ್ವವು ಕುರುಡ ಎನ್ನು ವದೇನು ಸುಳ್ಳಲ್ಲ. ಅಂಥವಳೊಡನೆ ವಾದವಿವಾದ ಹೂಡುವದು ವಿಹಿತವಾಗ ಲಾರದು. ತಾಯಿಯರ ಕುರುಡಿನಲ್ಲಿ ಸಾತ್ವಿಕ ತೇಜವು ಉಕ್ಕುತ್ತಿರುತ್ತದೆ. ತಾಯಿಯಾದವಳು ಕೇವಲ ಸ್ತ್ರೀಯಾಗಿರದೆ ಅಡವಿಮೃಗವಾಗಿರುತ್ತಾಳೆ. ಅವಳ ಮಾತುಗಳೆಂದರೆ ಅವಳಿಗೆ ಮರಿಯಾಗಿರುತ್ತವೆ. ಅವನ್ನು ಬಿಟ್ಟು ಅದು ಬದುಕುವದೆಂದಾದರೂ ಸಾಧ್ಯವಿದೆಯೇ ?

ಟೇಲ್‌ಮಾರ್ಚನು ಅವಳನ್ನು ಮಾತಿಗೆ ಹಚ್ಚಬೇಕೆಂದು ಯತ್ನಿಸಿ ದನು. ಆದರೆ ಅವನಿಗೆ ಯಶ ಬರಲಿಲ್ಲ. ' ಆಗಬಾರದ್ದು ಆಗಿ ಹೋಗಿದೆ. ನಾನು ಹೇಳಿಕೇಳಿ ಮುದುಕ.' ನನಗೆ ನಿನ್ನೊ ಡನೆ ಬರಲಿಕ್ಕಾಗದು. ಬರುವಂತಿದ್ದರೆ ನಾನು ಬಂದೇ ಬಿಡುತ್ತಿದ್ದೆ. ಈಗ ನಾನು ಬರುವದೆಂದರೆ ನಿನಗೊಂದು ಭಾರವೇ ಆಗಿಬಿಡುವೆ. ಕೆಲವು ಜನರು ನಾನೊಬ್ಬ ಮಾಂತ್ರಿಕನೆಂದು ಸಂಶಯ ಪಟ್ಟುಕೊಳ್ಳುತ್ತಾರೆ. ಆದರಿಂದ ನಾನು ಬಯಲಿಗೆ ಬಂದರೆ ನನ್ನನ್ನು ಕಡಿದು ಹಾಕುವರು. ಎಂದು ಅವಳಿಗೆ ಹೇಳಿದನು.

ಅವನು ಅವಳಿಂದ, ಉತ್ತರ ಬರಬಹುದೆಂದು ಆಶಿಸಿದನು. ಅವಳು ಮುಖವನ್ನು ಕೂಡ ಎತ್ತಲಿಲ್ಲ. ಅವಳ ವಿಚಾರತಂದ್ರಿಯೇನು ಕಡಿಮೆಯಾಗ ಲಿಲ್ಲ. ಅವನು ಅವಳಿಗೆ ಸೂಜಿ,ದಾರ,ಅರಿವೆ ತಂದುಕೊಟ್ಟನು. ಅವಳು ಏನಾ ದರೂ ಮಾಡಿ ತನ್ನ ದುಃಖವನ್ನು ಮರೆಯಲೆಂದು ಟೇಲ್‌ಮಾರ್ಚನ ಇಚ್ಛೆ

ಯಾಗಿತ್ತು. ಕೊನೆಗೆ ಅವಳು ಹೊಲಿಯಲಾರಂಭಿಸಿದಳು. ಆಕೆ ಹೊಲಿಯು
ತ್ತಿರುವಾಗ ತನ್ನ ಮಂಜುಲಧ್ವನಿಯಿಂದ ಹಾಡಿಕೊಳ್ಳುತ್ತಿದ್ದಳು ಅವಳು
ತನ್ನ ಮಗುಗಳ ಹೆಸರನ್ನೆತ್ತಿ ಮೆಲ್ಲಗೆ ಗುಣುಗುಟ್ಟುತ್ತಿದ್ದಳು. ಅದು ಟೇಲ್
ಮಾರ್ಚನಿಗೆ ಗೊತಾಗುತ್ತಿರಲಿಲ್ಲ. ಅವಳು ನಡುನಡುವೆ ಎದ್ದು ಮೇಲೆ
ನೋಡುವಳು; ಪಕ್ಷಿಗಳ ಕಿಲಕಿಲಾಟವನ್ನು ಕಿವಿಗೊಟ್ಟು ಕೇಳುವಳು. ಅವು
ಗಳೇನಾದರು ತನ್ನ ಮಕ್ಕಳ ಯೋಗಕ್ಷೇಮವನ್ನು ತಂದಿರಬಹುದೆಂದು
ಅವಳು ಭಾವಿಸುತ್ತಿದ್ದಳು. ಅವಳ ತುಟಿಗಳು ಅಲುಗಾಡುತ್ತಿದ್ದವು. ಮನಸಿ
ನಲ್ಲಿಯೇ ಏನನ್ನೋ ಪಿಸುಗುಟ್ಟಿಕೊಳ್ಳುತ್ತಿದ್ದಳು.

ಒಂದು ದಿವಸ ಮುಂಜಾನೆ ಅವಳು ಅಡವಿಯ ಕಡೆಗೆ ನೋಡುತ್ತ
ಹೊರಟದ್ದನ್ನು ಟೇಲ್‌ಮಾರ್ಚನು ಕಂಡು 'ಹೊರಟಿರುವದೆಲ್ಲಿಗೆ?'
ಎಂದು ಅವಳನ್ನು ವಿಚಾರಿಸಿದನು.

'ಮಗುಗಳ ಶೋಧನಾರ್ಥವಾಗಿ' ಎಂದು ಅವಳು ಹೇಳಿದಳು.
ಅವನೂ ಅವಳನ್ನು ತಡೆಯುವ ಪ್ರಯತ್ನವನ್ನು ಮಾಡಲೇ ಇಲ್ಲ.

   

ಯುದ್ಧ ನಿಂತರೂ ಗೊಂದಲವೇನು ನಿಂತಿರಲಿಲ್ಲ. ವೆಂಡಿಯ ಯುದ್ಧ
ದಲ್ಲಿ ಪ್ರಜಾಪಕ್ಷವು ಗೆದ್ದಿತು. ಆದರೆ ಯಾವ ಪ್ರಜಾಕ್ಷವೆಂಬುದೇ ತಿಳಿಯ
ದಾಗಿತ್ತು. ಪ್ರಜಾಪಕ್ಷದಲ್ಲಿ ಎರಡು ಪಂಗಡಗಳಾಗಿದ್ದವು:—ಒಂದು
ಸದಯ; ಇನ್ನೊಂದು ನಿರ್ದಯ. ಸದಯ ಪಕ್ಷವು ದಯೆಯಿಂದಲೂ ಕರು
ಣೆಯಿಂದಲೂ ಜಯವನ್ನು ಸಂಪಾದಿಸಬೇಕೆಂದೆನ್ನುತ್ತಿತ್ತು. ನಿರ್ದಯ ಪಕ್ಷವು
ಕಠೋರತನದಿಂದ ಜಯವನ್ನು ಸಂಪಾದಿಸಬೇಕೆಂದು ಅಭಿಪ್ರಾಯಪಡು
ತ್ತಿತ್ತು. ಒಂದು ಪಕ್ಷದ ಮುಖಂಡನು ಸೈನ್ಯವೃತ್ತಿಯವನಾಗಿದ್ದನು.
ಇನ್ನೊಂದು ಪಕ್ಷದ ಪ್ರಮುಖನು ಜನರ ಪ್ರತಿನಿಧಿಯಾಗಿದ್ದನು. ಒಬ್ಬನು
ಪ್ಯಾರಿಸ್‌ದಿಂದ 'ದಯಾ-ಮಾಯೆ ಏನೂ ಇಲ್ಲ' ಎಂಬ ಆಜ್ಞೆಯನ್ನು
ತಂದಿದ್ದನು. ಅವನಿಗೆ ಎಲ್ಲರ ಮೇಲೆ ವರ್ಚಸ್ಸನ್ನು ಕೂಡಿಸಲು ಬರಬೇ
ಕೆಂದು ಪ್ರಜಾದ್ರೋಹಿಯನ್ನು ಕೊಂದು ಹಾಕುವ ಅಧಿಕಾರವನ್ನು ಕೊಡ

ಲಾಗಿತ್ತು. ಇನ್ನೊಬ್ಬನಿಗೆ ದಯೆ ತೋರಿಸಬೇಕೆಂಬ ಅಧಿಕಾರ ಕೊಡದಿದ್ದರೂ ಅವನು ಆ ಅಧಿಕಾರವನ್ನು ಪಡೆದುಕೊಂಡಿದ್ದನು. ಅವನು ತನ್ನ ಕೈಯಿಂದ ಶತ್ರುಗಳಿಗೆ ಶಿಕ್ಷೆಯನ್ನು ಕೊಡುತ್ತಿದ್ದನು; ಅಂತಃಕರಣದಿಂದ ಅವರನ್ನು ಕ್ಷಮಿಸುತ್ತಿದ್ದನು. ನಾವು ಗೆದ್ದವರಾದುದರಿಂದ ಸೋತವರ ಮೇಲೆ ದಯೆ ತೋರಿಸುವ ಹಕ್ಕು ತಮಗಿದೆಯೆಂದು ಅವನ ಅಭಿಪ್ರಾಯವಾಗಿತ್ತು.

ಈ ಭೇದದಿಂದ ಅವರಿಬ್ಬರಲ್ಲಿ ಪ್ರತ್ಯಕ್ಷ ವೈರತ್ವವೇ ಉಂಟಾಯಿತು. ಎಲ್ಲಿ ನೋಡಿದರೂ ಈ ಬಡಿದಾಟದ ಸುದ್ದಿಯೋ ಸುದ್ದಿ. ಅವರಿಬ್ಬರಲ್ಲಿಯ ಬಡಿದಾಟವಿದ್ದರೂ ವೈರಿಗಳೊಡನೆ ಹೋರಾಡುವದಕ್ಕೆ ಇಬ್ಬರೂ ಒಂದೇ ಮತದವರಾಗಿದ್ದರು; ಪ್ರತಿಸ್ಪರ್ಧಿಗಳಾಗಿದ್ದರೂ ಅವರು ಪರಸ್ಪರರ ಸ್ನೇಹಿತರಾಗಿದ್ದರು; ಸಹಾನುಭೂತಿಪರರಾಗಿದ್ದರು. ಕಠೋರವೃತ್ತಿಯ ಮನುಷ್ಯನು ಕೋಮಲ ಅಂತಃಕರಣದ ಮನುಷ್ಯನ ಪ್ರಾಣವನ್ನುಳಿಸಿದ್ದನು. ಅವನಿಗೆ ಬೀಳುವ ಹೊಡೆತವನ್ನು ಇವನು ತಾನಾಗಿಯೇ ಸ್ವೀಕರಿಸಿದ್ದನು. ಒಬ್ಬನು ಮೃತ್ಯುದೇವತೆಯಾಗಿದ್ದನು. ಮತ್ತೊಬ್ಬನು ಸಂಜೀವಿನಿಯಾಗಿದ್ದನು. ಒಬ್ಬನ ತತ್ವವು ವಿಧ್ವಂಸಕ, ಇನ್ನೊಬ್ಬನದು ಶಾಂತಿಪ್ರದಾಯಕ. ಆದರೂ ಒಬ್ಬರಿಗೊಬ್ಬರು ಪ್ರೇಮದಿಂದಿರುತ್ತಿದ್ದರೆಂಬುವದೇ ವಿಶೇಷದ ಮಾತಾಗಿತ್ತು. ಹೊರಗೆ ಕಠೋರನೆಂದು ತೋರುವವನು ತೀರ ನಿರ್ದಯನಾಗಿದ್ದನೆಂದು ಹೇಳಬರುವಂತಿರಲಿಲ್ಲ. ಅವನು ಗಾಯಾಳುಗಳ ಗಾಯವನ್ನು ತೊಳೆಯುತ್ತಿದ್ದನು. ಬೇನಿಗರ ಶುಶ್ರೂಷೆಯನ್ನು ಮಾಡುತ್ತಿದ್ದನು. ಅವನು ಯಾವಾಗಲೂ ರುಗ್ಣಾಲಯದಲ್ಲಿದ್ದುಕೊಂಡು ಬಡವರ ಮೇಲಿನ ಅಂತಃಕರಣದಿಂದ ತನ್ನ ಹತ್ತಿರವಿರುವದನ್ನೆಲ್ಲ ಕೊಟ್ಟು ಅವರನ್ನು ಸೇವಿಸುತ್ತಿದ್ದನು. ಅವನು ಯುದ್ಧದಲ್ಲಿ ಎಲ್ಲರಿಗಿಂತಲೂ ಮುಂದೆಯೇ ಇರುತ್ತಿದ್ದನು. ಅವನ ಹತ್ತಿರ ಶಸ್ತ್ರಾಸ್ತ್ರಗಳಿರುತ್ತಿದ್ದವು. ಆದರೂ ನಿಶ್ಶಸ್ತ್ರನಾಗಿಯೇ ಇರುತ್ತಿದ್ದನು. ಯಾಕೆಂದರೆ ಅವನು ಅವುಗಳ ಉಪಯೋಗವನ್ನು ಎಂದೂ ಮಾಡುತ್ತಿರಲೇ ಇಲ್ಲ. ಅವನು ಧರ್ಮಗುರುವಾಗಿದ್ದನೆಂದು ಜನರನ್ನುತ್ತಿದ್ದರು. ಇವರಿಬ್ಬರಲ್ಲಿ ಒಬ್ಬನು ಗಾವೆನ್‌ನು; ಇನ್ನೊಬ್ಬನು

ಸಿಮೋರೆಡಿನ್‌ನು ಆಗಿದ್ದರೆಂಬನ್ನು ಹೇಳುವ ಕಾರಣವೇ ಇಲ್ಲ ಅವರಿಬ್ಬರಲ್ಲಿ ಗೆಳೆತನವಿದ್ದರೂ ಅವರ ತತ್ವದಲ್ಲಿ ವೈರತ್ವವಿತ್ತು. ಅವರು ಮಾತನಾಡುತ್ತ ಆಡುತ್ತ ಒಂದು ಮುಂಜಾನೆ ಕೆಳಗೆ ಕಾಣಿಸಿದಂತೆ ಮಾತನಾಡಿಕೊಂಡರು.

‘ ಗಾವೆನ್, ನೀನು ಗಳಿಸಿದ್ದೇನು ? ’

‘ ನನ್ನನ್ನೇಕೆ ಕೇಳುವಿ ? ನಿನಗೆ ಗೊತ್ತೇ ಇದೆ. ನಾನು ಲ್ಯಾಂಟ್‌ನೆಕ್‌ನನ್ನು ಅಟ್ಟಿಬಿಟ್ಟೆನು. ಅವನ ಜನರಲ್ಲಿ ಕೆಲವರೆ ಮಾತ್ರ ಜೀವಂತವುಳಿದಿದ್ದಾರೆ. ಇನ್ನೆಂಟು ದಿನಗಳೊಳಗಾಗಿಯೇ ಅವರನ್ನೂ ಮುತ್ತಿಬಿಡುವೆನು. ’

‘ ೧೫ ದಿವಸಗಳಲ್ಲೇನು ಮಾಡುವಿ ? ’

‘ ಅವನನ್ನು ಬಂಧಿಸುವೆನು. ’

‘ ಆ ಮುಂದೆ ಏನು ? ’

‘ ನಾನು ತೆಗೆದ ಜಾಹೀರನಾಮೆಯನ್ನು ನೋಡಲಿಲ್ಲವೇ ? ’

‘ ನೋಡಿದ್ದೇನೆ. ಆದರೇನು ? ’

‘ ಅವನನ್ನು ಗುಂಡು ಹಾಕಿ ಕೊಂದು ಹಾಕುತ್ತೇನೆ. ’

‘ ಒಂದಿಷ್ಟು ದಯೆ ತೋರಿಸು. ಅವನನ್ನು ವಧಸ್ತಂಭಕ್ಕೇರಿಸು. ’

‘ ಛೇ, ಹಾಗೆಂದಿಗೂ ಆಗದು. ನಾನು ಸೈನ್ಯವೃತ್ತಿಯ ಮನುಷ್ಯನು. ಆದ್ದರಿಂದ ಕ್ಷಾತ್ರವೃತ್ತಿಗನುಸಾರವಾದ ಮರಣ ಬರಬೇಕೆಂದು ನನಗೆ ಎನಿಸುತ್ತದೆ. ’

‘ ನನಗೆ ಈ ಕ್ರಾಂತಿಯುಗದಲ್ಲಿಯೇ ಸಾವು ಬರಬೇಕೆಂದೆನಿಸಿದೆ. ಮತನಿವಾಸಿಗಳಾದ ಸ್ತ್ರೀಯರನ್ನೇಕೆ ಬಿಟ್ಟುಕೊಟ್ಟೆ ? ’

‘ ಯಾಕೆಂದರೆ ನಾನು ಸ್ತ್ರೀಯರೊಡನೆ ಯುದ್ಧ ಮಾಡುವದಿಲ್ಲ ’

‘ ಆದರೆ ಅವರನ್ನು ದ್ವೇಷಿಸುತ್ತೀ. ದ್ವೇಷದ ಮಾತು ಬಂದಿತೆಂದರೆ ಒಬ್ಬ ಸ್ತ್ರೀಯು ಹತ್ತು ಗಂಡಸರನ್ನು ಮೀರುತ್ತಾಳೆ. ಆ ಭಿಕ್ಷುಕನನ್ನು ಬಂಧಿಸಿದಿ; ಶಿಕ್ಷೆ ಕೊಡುವದರ ಸಲುವಾಗಿ ಅವನನ್ನು ಪಂಚರ ಕಡೆಗೆ ಯಾಕೆ ಕಳಿಸಿಕೊಡಲಿಲ್ಲ ? ”

‘ ನಾನು ಮುದುಕನೊಡನೆ ಯುದ್ಧ ಮಾಡುವದಿಲ್ಲ. ’

' ಮುದುಕ ಭಿಕ್ಷುಕರು ತರುಣರಿಗಿಂತಲೂ ಬಹಳ ಕೆಟ್ಟವರಿರುತ್ತಾರೆ. ಬಿಳಿಗೂದಲುಗಳು ಬಂಡಿನ ಬಗ್ಗೆ ಚನ್ನಾಗಿ ಉಪದೇಶ ಮಾಡುತ್ತವೆ. ಜನರು ಮುದುಕರಲ್ಲಿ ವಿಶ್ವಾಸವಿಡುತ್ತಾರೆ ಹಾಗೆ ವಿಶ್ವಾಸವಿಡುವದು ಒಳಿತಲ್ಲ. ಆದ್ದರಿಂದ ಅಂಥವರಿಗೆ ವ್ಯರ್ಥವಾಗಿ ದಯವನ್ನು ತೋರಿಸುವದು ಉಚಿತವಾಗಲಾರದು. ಯಾರು ರಾಜ-ರಾಣಿಯರ ಕೊಲೆಯನ್ನು ಮಾಡಿರುವರೋ ಅಂಥವರೇ ನಿಜವಾದ ಸ್ವಾತಂತ್ರ್ಯೋಪಾಸಕರು. ನಿನ್ನ ದೃಷ್ಟಿಯು ದೇವಾಲಯದ ಬುರುಜಿನ ಕಡೆಗಿರಲಿ. '

' ದೇವಾಲಯದ ಬುರುಜಿನ ಕಡೆಗೆ! ನಾನು ರಾಜಪುತ್ರನನ್ನು ಹೊರಗೆ ತರುವೆನು. ನಾನು ಚಿಕ್ಕ ಹುಡುಗರೊಡನೆ ಯುದ್ಧ ಮಾಡುವದಿಲ್ಲ. '

' ಗಾವೆನ್‌ನೇ, ಲಕ್ಷ್ಯದಲ್ಲಿಡು. ತಾನು ಫ್ರಾನ್ಸದ ರಾಣಿಯೆಂದು ಸಾರುವವಳೊಡನೆ, ತಾನು ಪೋಪನೆಂದು ಹೊಗಳಿಕೊಳ್ಳುವ ಮುದುಕನೊಡನೆ, ತಾನು ರಾಜಪುತ್ರನೆಂದು ಹೇಳಿಕೊಳ್ಳುವ ಹುಡುಗನೊಡನೆ ಎಂದಿಗೂ ಯುದ್ಧ ಮಾಡದೆ ಇರಬೇಡ. ತಿಳಿಯಿತೇ ? '

' ಗುರುಮಹಾರಾಜರೇ, ನಾನೇನು ರಾಜಕಾರಣಿಯಲ್ಲ.'

' ಹಾಗಾದರೆ ಕೆಲಸಕ್ಕೆ ಅಡ್ಡ ಬರಬೇಡ. ಆ ಬಂಡುಗಾರನಾದ ಜೀನಟ್ರೇಟನನ್ನು ಕೊಂದುಹಾಕುವದರ ಬದಲು ನಿನ್ನ ಸೈನ್ಯದೊಳಗಿಂದ ಪಾರಾಗಿ ಹೋಗಲು ಏಕೆ ಬಿಟ್ಟೆ ? "

' ಒಬ್ಬ ಮನುಷ್ಯನನ್ನು ಕೊಲ್ಲುವದಕ್ಕೆ ನಾನು ೧೫೦೦ ಜನರಿಗೆ ಶಸ್ತ್ರಗಳನ್ನು ಹಿರಿಯಿರಿ ಎಂದು ಯಾಕೆ ಹೇಳೇನು ? "

" ಈ ಪ್ರಕಾರವಾಗಿ ನೀನು ಶತ್ರು-ಸೈನಿಕರನ್ನು ಜೀವಂತ ಬಿಟ್ಟು ಶತ್ರುಗಳ ಸಂಖ್ಯೆಯನ್ನು ಬೆಳೆಯಿಸುತ್ತಿರುವಿ—ಎಂಬ ಮಾತು ನಿನಗೆ ತಿಳಿಯುವದಿಲ್ಲವೋ ಏನು ? "

" ಶತ್ರುವಿಗೆ ಶತ್ರುವಿನ ಜೊತೆ ಮಾಡುವದರ ಬದಲು ಮಿತ್ರರ ಜೋಡು ಮಾಡಿದರೆ ಒಳಿತೆಂದು ನಾನು ಭಾವಿಸಿದ್ದೇನೆ. "

" ಜಯವು ದೊರೆತ ದಿವಸ ಸೆರೆಸಿಕ್ಕ ೩೦೦ ಒಕ್ಕಲಿಗರನ್ನು ಕೊಂದು ಹಾಕಲಿಲ್ಲವೇಕೆ ? "

" ರಾಜಪಕ್ಷದವರೂ ತಮ್ಮ ಸೆರೆಯಾಳುಗಳನ್ನು ಹಾಗೆಯೇ ಬಿಟ್ಟಿದ್ದರು. ಆದಕಾರಣ ನಾವೂ ಅವರಿಗಿಂತ ಹೆಚ್ಚು ಉದಾರಿಗಳಾಗುವಾ ಎಂದು ನಾನು ಹಾಗೆ ಮಾಡಿದೆನು. "

" ನಾಳೆ ಲ್ಯಾಂಟ್‌ನೆಕ್‌ನು ನಿನ್ನ ಸೆರೆ ಸಿಕ್ಕರೆ ಅವನನ್ನೂ ಬಿಟ್ಟು ಬಿಡುವವನೋ ಹೇಗೆ ? "

" ಇಲ್ಲ; ಎಂದಿಗೂ ಇಲ್ಲ. "

" ಯಾಕೆ? ಹಾಗಾದರೆ ಆ ಒಕ್ಕಲಿಗರನ್ನೇಕೆ ಬಿಟ್ಟೆ? "

" ಯಾಕೆಂದರೆ ಆ ಒಕ್ಕಲಿಗರು ಏನೂ ತಿಳಿಯದವರು; ಅಜ್ಞಾನಿಗಳು. ಆದರೆ ಲ್ಯಾಂಟನೆಕ್‌ನಿಗೆ ಎಲ್ಲವೂ ಗೊತ್ತಿದೆ. "

" ಆದರೆ ಅವನು ನಿನ್ನ ಕಳ್ಳುಬಳ್ಳಿಯವನಲ್ಲವೋ? "

" ಅಲ್ಲ. ಮಾತೃಭೂಮಿಯೇ ನನ್ನ ಸಮೀಪದ ಸಂಬಂಧ. "

" ಅವನು ಮುದುಕನಿರುತ್ತಾನೆ. "

" ಅವನಿಗೆ ವಯಸ್ಸೇ ಇಲ್ಲ. ಅವನು ಇಂಗ್ಲಿಷರ ಬೆನ್ನು ಬಿದ್ದಿದ್ದಾನೆ. ಅವನು ದೇಶದ್ರೋಹಿ ! ದ್ವಂದ್ವಯುದ್ಧವೆಸಗಿದರೆ ನಮ್ಮಿಬ್ಬರಲ್ಲಿ ಒಬ್ಬರಾದರೂ ಸಾಯುವವರೆಗೆ ಯುದ್ಧವು ಕೊನೆಗೊಳ್ಳಲಾರದು "

" ಏನು ಮಾತಾಡುತ್ತಿರುವಿ ಎಂಬದನ್ನು ಚೆನ್ನಾಗಿ ಲಕ್ಷ್ಯದಲ್ಲಿಟ್ಟುಕೊ ? "

" ನಾನಂತೂ ಅದರ ಬಗ್ಗೆ ಭೀಷ್ಮಪ್ರತಿಜ್ಞೆಯನ್ನೇ ಮಾಡಿದ್ದೇನೆ. "

ಕೆಲ ಸಮಯ ಗತಿಸಿತು. ಯಾರೂ ಮಾತನಾಡಲೇ ಇಲ್ಲ. ಒಬ್ಬರಿಗೊಬ್ಬರು ಮಾತ್ರ ಎವೆ ಹಿಳುಕಿಸದೆ ನೋಡುತ್ತಿದ್ದರು. ಆಗ ಗಾವೆನ್‌ನು ಬಾಯಿಬಿಟ್ಟು ' ಈ ೯೩ನೇ ಇಸ್ವಿಯು ಬಲು ಸಂಸ್ಮರಣೀಯವಾಗಿದೆ ' ಎಂದನು.

" ಗಾವೆನ್‌ನೇ, ಬಲು ಎಚ್ಚರಿಕೆಯಿಂದ ನಡೆದುಕೋ. ನಿನ್ನ ಮುಂದೆ ಘನಘೋರ ಕರ್ತವ್ಯಕರ್ಮವು ನಿಂತಿದೆ. ನಿರ್ದೋಷಿಗಳನ್ನು

ವಿನಾಕಾರಣ ದೂಷಿಸಬೇಡ. ಈ ವರುಷದ ವೈಶಿಷ್ಟ್ಯವೆಂದರೆ ನಿಷ್ಠುರತೆ. ಯಾಕೆಂದರೆ ಇದು ಕ್ರಾಂತಿಕಾರಕ ಕಾಲವಾಗಿದೆ. ಕ್ರಾಂತಿಯು ರಾಜನ ರಾಜ್ಯವನ್ನು, ಸರದಾರರ ಸರದಾರಗಿರಿಯನ್ನು, ಸಿಪಾಯಿಗಳ ಸ್ವೇಚ್ಛಾಚಾರವನ್ನು, ಭಿಕ್ಷುಕರಲ್ಲಿಯ ಧರ್ಮಾಂಧತನವನ್ನು, ನ್ಯಾಯಾಧೀಶರ ಹುಂಬತನವನ್ನು, ಒತ್ತಾಯ ಪಡಿಸುವವರನ್ನು ಹೇಳಹೆಸರಿಲ್ಲದಂತೆ ಮಾಡುತ್ತದೆ. ಈ ಶಸ್ತ್ರಕ್ರಿಯೆಯು ಭಯಂಕರವಾಗಿದೆ; ಆದರೂ ರಾಜ್ಯಕ್ರಾಂತಿಯಲ್ಲಿ ಇದು ಲೀಲಾಜಾಲವಾಗಿದೆ; ಸಹಜವಾದುದಾಗಿದೆ. ಇದರಿಂದ ರಕ್ತಮಾಂಸಗಳ ಕೋಡಿಯೇ ಹರಿಯುವದು. ಈ ರೋಗವು ಶಸ್ತ್ರಕ್ರಿಯೆವಿಲ್ಲದೆ ಗುಣವಾಗತಕ್ಕುದೇ ಅಲ್ಲ. ಶಸ್ತ್ರವೈದ್ಯರು ಕಟಿಕರಂತಿದ್ದಾರೆ. ಕ್ರಾಂತಿಯು ಈ ರಾಕ್ಷಸೀ ಕರಾಳ ಕೃತ್ಯವನ್ನು ಮಾಡಲೇ ಬೇಕಾಗುತ್ತದೆ. ಇದು ರಾಜಕೀಯ, ಸಾಮಾಜಿಕ ಪರಿಸ್ಥಿತಿಯನ್ನು ಛಿನ್ನವಿಚ್ಛಿನ್ನ ಮಾಡುತ್ತದೆ; ಆದರೂ ಅವುಗಳನ್ನು ಪುನರುಜ್ಜೀವನಗೊಳಿಸುವ ಶಕ್ತಿ ಸಂಪನ್ನವಾಗಿದೆ. ನಿನ್ನ 'ದಯೆ' ಎಂಬದು ನಿರೋಗಿ ಶರೀರದಲ್ಲಿಯ ವಿಷದಂತಿದೆ. ಈ ವಿಷವು ಘಾತಗೊಳಿಸದೆ ಎಂದಿಗೂ ಬಿಡಲಾರದು. ಕ್ರಾಂತಿಯಿಂದ ಸುಧಾರಣೆಗಳು ರಸಾತಳವನ್ನು ಕಾಣುತ್ತವೆಂದೆನಿಸಿದರೂ ಅದರಿಂದಲೇ ನವೀನ ಸಶಕ್ತ ಪೀಳಿಗೆಯು ತಲೆಯೆತ್ತುತ್ತದೆ. ನೀವು ದುಃಖವನ್ನು ಎಷ್ಟುದಿನ ಭೋಗಿಸಬಹುದು; ಶಸ್ತ್ರಕ್ರಿಯೆಯಾಗುವವರೆಗೆ ಮಾತ್ರ. ಆ ಮೇಲೆ ನಿಮಗೆ ಸುಖದಾಯಕವಾದ ಕಾಲವು ಪ್ರಾಪ್ತವಾಗುತ್ತದೆ. ಈ ರಾಜ್ಯಕ್ರಾಂತಿಯೆಂದರೆ ಜಗತ್ತಿನ ಶಸ್ತ್ರಕ್ರಿಯೆಯೇ ಆಗಿದೆ. ಆದ್ದರಿಂದಲೇ ಧಮನಿಧಮನಿಗಳಲ್ಲಿ ರಕ್ತದ ಕಾಲುವೆಯು ಹರಿಯುವ ಈ-೯೩ನೇ ಇಸವಿಯು ಅವತಾರವಾಗಿದೆ."

"ಇದರೆ ಶಸ್ತ್ರವೈದ್ಯನೇ ಶಾಂತನಾಗಿದ್ದಾನೆ. ನನ್ನ ಕಣ್ಣಿಗೆ ಕಾಣುವ ಜನರೇ ಅತ್ಯಾಚಾರವನ್ನೆಸಗುತ್ತಿದ್ದಾರೆ."

"ಕ್ರಾಂತಿಯ ಕಾಲದಲ್ಲಿ ಪುಂಡರ ನೆರವು ಅಗತ್ಯವಿದೆ. ಕ್ರಾಂತಿಯ ವಿಶ್ವಾಸವು ಸ್ಥಿತಪ್ರಜ್ಞರಲ್ಲಿ ನೆಲೆಯೂರಿರುತ್ತದೆ. ಡಾಂಟನ್‌ನು ಎಷ್ಟು ಭಯಂಕರ! ರಾಬೆಸ್ಪಿಯರನು ಎಂಥ ಗಟ್ಟಿಗ! ಮಾರೆಯು ಎಷ್ಟು

ಕ್ರೂರ! ಎಂಬದನ್ನು ನೋಡು. ನೀನು ಕಾಳಜಿಯಿಂದಿರು. ಅವರೊಬ್ಬರೇ ಒಂದೊಂದು ಪ್ರಚಂಡ ಸೈನ್ಯದ ಸರಿಸಮಾನರಾಗಿದ್ದಾರೆ. ಅವರು ಇಡೀ ಯುರೋಪಖಂಡಕ್ಕೆ ಬೆಂಕಿ ಹಚ್ಚದೆ ಎಂದಿಗೂ ಬಿಡಲಾರರು."

"ಭವಿಷ್ಯ ಕಾಲವನ್ನು ಗದಗುಟ್ಟಿ ನಡುಗಿಸದೆ ಬಿಡಲಾರರು. ಗುರುಗಳೇ, ನಿಪೊಂದಿಷ್ಟು ತಪ್ಪುತ್ತೀರಿ. ನಾನು ಯಾರಿಗೂ ದೋಷವನ್ನು ಕೊಡುವದಿಲ್ಲ. ಕ್ರಾಂತಿಯೆಂದರೆ ಹೊಣೆಗೇಡಿಯಾದುದೆಂದು ನನ್ನ ಅಭಿಪ್ರಾಯವಾಗಿದೆ. ಇದರಲ್ಲಿ ಯಾರೂ ಪುಣ್ಯಾತ್ಮರಾಗಿರುವದಿಲ್ಲ; ಎಲ್ಲರೂ ಅಪರಾಧಿಗಳೇ. '೧೬ನೇ ಲುಯಿ' ಎಂದರೆ ಸಿಂಹದ ಮುಂದೆ ಬಿಟ್ಟಂಥ ಕುರಿಮರಿಯಾಗಿದ್ದನು. ಅವನು ತನ್ನ ಜೀವರಕ್ಷಣೆಗಾಗಿ ದಾರಿಸಿಕ್ಕತ್ತ ಓಡಾಡಿದನು; ಬೇಕಾದ್ದನ್ನು ಮಾಡಿದನು. ಆದರೆ ಕ್ರಾಂತಿಗೆ ಕಲಂಕ ಮಾತ್ರ ಬರದಿದ್ದರೆ ಸಾಕು. ಸ್ವಾತಂತ್ರ್ಯ, ಸಮತೆ, ಬಂಧುತ್ವಗಳು ಶಾಂತತೆಯ ಮತ್ತು ಸುವ್ಯವಸ್ಥೆಯ ಮೂಲಭೂತತತ್ವಗಳಾಗಿವೆ. ಅವುಗಳಿಗೆ ಉಗ್ರಸ್ವರೂಪವನ್ನು ನಾವೇಕೆ ಕೊಡಬೇಕು? ನಮಗೆ ಬೇಕಾಗಿರುವದೇನು? ಎಲ್ಲ ಜನರನ್ನು ಪ್ರಜಾಪಕ್ಷದ ಅಧಿಕಾರದ ಕೆಳಗೆ ತರುವದೇ ಅಲ್ಲವೇ? ಅವರನ್ನು ಗದಗುಟ್ಟಿ ನಡುಗುವಂತೆ ಮಾಡಿದರೆ ಸಾಕಾಗದೇ? ಕೊಲೆ ಮಾಡುವದರಿಂದಾಗುವದೇನು? ಒಳ್ಳೆಯದಾಗಲೆಂದು ಕೇಡನ್ನುಂಟು ಮಾಡುವದು ವಿಹಿತವಲ್ಲ. ಹಾಕಿದ ಬಲಿಯು ಚಿರಕಾಲ ಬಾಳಲೆಂದು ಯಾರೂ ಸಿಂಹಾಸನವನ್ನು ಒದೆಯಲಾರರು. ರಾಜರು ಸತ್ತುಹೋಗಲಿ. ರಾಷ್ಟ್ರವು ತಲೆಯೆತ್ತಲಿ. ರಾಜಮುಕುಟವನ್ನು ತೆಗೆಯಿರಿ. ಆದರೆ ತಲೆಯನ್ನು ಮಾತ್ರ ಕಾಯ್ದುಕೊಳ್ಳಿರಿ. ರಾಜ್ಯಕ್ರಾಂತಿಯು ಸೌಮ್ಯಸ್ವರೂಪಿಯಾಗಿದೆ; ಭೀಕರ ಸ್ವರೂಪದ್ದಾಗಿರುವದಿಲ್ಲ. ದುಷ್ಟ ಜನರಿಗೆ ದಯೆಯು ಕಲ್ಪನೆ ಬರುವದೇ ಸಾಧ್ಯವಿಲ್ಲ. 'ಕ್ಷಮೆ' ಎಂಬ ಶಬ್ದವು ನನಗೆ ಎಲ್ಲ ಮಾನವೀ ಭಾಷೆಗಳಲ್ಲಿಯೇ ಹೆಚ್ಚು ಪ್ರಿಯಕರವಾಗಿದೆ. ಜೀವದ ಮೇಲೆ ಪ್ರಸಂಗ ಬಾರದೆ ನಾನು ರಕ್ತಪಾತವನ್ನು ಮಾಡಲಾರೆ. ನಾನು ಸಾದಾ ಒಬ್ಬ ಸಿಪಾಯಿಯಾಗಿದ್ದೇನೆ. ನಾನು ಕ್ಷಮೆ ಮಾಡಿರದಿದ್ದರೆ ಯುದ್ಧದ

ಉಪಯೋಗವಾದರೂ ಏನು ? ಯುದ್ಧಮಾಡುತ್ತಿರುವಾಗ ವೈರಿಯಾಗಿರಿ; ಹಿಂದುಗಡೆ ಮಿತ್ರರಾಗಲು ಯಾವ ಅಡ್ಡಿ-ಆತಂಕಗಳಿವೆ? ”

“ ಸಾವಧನಾಗು. ಇದು ಮೂರನೇ ಸಲ. ನನಗೆ ನೀನು ಮಗನ ಗಿಂತಲೂ ಹೆಚ್ಚು ಪ್ರಿಯವಾಗಿರುವಿ. ಎಚ್ಚರಿಕೆಯಿಂದಿರು. ಈ ಕಾಲಕ್ಕೆ ‘ ದಯೆ ’ ಎಂಬದು ವಿಶ್ವಾಸಘಾತದ ಒಂದು ಸ್ವರೂಪವಾಗಿದೆ. ”

ಈ ಉಭಯತರ ಬಾಷಣವನ್ನು ಕೇಳುವವರಿಗೆ ಕೊಡಲಿ, ಕತ್ತಿಗಳ ಖಣಖಣಾಟವು ನಡೆದಂತೆ ಭಾಸವಾಗುತ್ತಿತ್ತೆಂಬದರಲ್ಲಿ ಸಂಶಯವೇ ಇರಲಿಲ್ಲ.

* * * * * *

ಈ ಸಮಯದೊಳಗೆ ಆ ತಾಯಿಯು ತನ್ನ ಮಕ್ಕಳನ್ನು ಶೋಧಿ ಸುತ್ತ, ಹಗಲಿರುಳೆನ್ನದೆ ಮಾರ್ಗಕ್ರಮಿಸುತ್ತಿದ್ದಳು. ಹೊಟ್ಟೆಗೆ ಸಿಕ್ಕದ್ದನ್ನು ತಿನ್ನುವಳು; ನಿದ್ರೆ ಬಂದಲ್ಲಿ ಮಲಗುವಳು. ಅವಳಿಗೆ ತನ್ನ ಜೀವದ ಪರಿ ವೆಯೇ ಇರಲಿಲ್ಲ. ತನ್ನ ಮಗುಗಳ ಸುಳಿವು ಎಲ್ಲಾದರೂ ಹತ್ತಬಹು ದೆಂದು ಹಳ್ಳಿಪಳ್ಳಿಗಳನ್ನು ಸುತ್ತಾಡಿದಳು. ದಾರಿಯಲ್ಲಿ ಹತ್ತುವ ಗುಡಿ- ಗುಂಡಾರಗಳನ್ನೂ, ಗುಡಿಸಲುಗಳನ್ನೂ ಶೋಧಿಸುವಳು. ಗುಡ್ಡವನ್ನೇರಿ ನೋಡುವಳು. ಅವಳ ಬಟ್ಟೆಯೆಲ್ಲ ಹರಿದು ಚಿಂದೆಯಾಗಿತ್ತು ಒಮ್ಮೊಮ್ಮೆ ಜನರು ಅವಳನ್ನು ಬಾ ಎಂದು ಕರೆಯುವರು; ಮತ್ತೊಮ್ಮೆ ಹೋಗತ್ತ ಎಂದು ನೂಕಿಬಿಡುವರು. ಅವಳಿಗೆ ವನವಾಸವೇ ಗತಿಯಾಗಿತ್ತು.

ಅವಳಿಗೆ ಯಾವ ಪರಿಚಯವೂ ಇರಲಿಲ್ಲ. ಅವಳು ತನ್ನ ಊರನ್ನು ಬಿಟ್ಟು ಎಂದೂ ಎಲ್ಲಿಯೂ ಹೋಗಿರಲಿಲ್ಲ. ಅವಳಿಗೆ ತಾನೆಲ್ಲಿಗೆ ಹೊರಟಿ ದ್ದೇನೆಂಬುದರ ಅರಿವಿರಲಿಲ್ಲ. ಒಮ್ಮೊಮ್ಮೆ ಬಂದ ದಾರಿಯಿಂದಲೇ ಹೊರ ಡುವಳು ಒಮ್ಮೊಮ್ಮೆ ದೊಡ್ಡಮಾರ್ಗವನ್ನು ಹಿಡಿದು ಸಾಗುವಳು. ಅರಣ್ಯ ದಲ್ಲಿಯ ಟಿಸಿಲು ದಾರಿಗಳನ್ನು ಹಿಡಿದುಕೊಂಡು ಒಮ್ಮೊಮ್ಮೆ ಹೊರಡು ವಳು. ಮೊದಲಿಗೆ ಅವಳ ಕಾಲಲ್ಲಿದ್ದವು. ಮುಂದೆ ಬರಿಗಾಲಿನಿಂದಲೇ ನಡೆಯತೊಡಗಿದಳು. ಕಾಲಲ್ಲಿ ರಕ್ತವು ಸುರಿಯಲಾರಂಭಿಸಿತು. ಯುದ್ಧವು

ನಡೆದಲ್ಲಿಗೆ ಅವಳು ಹೋಗುವಳು. ತೋಫಿನ ಗರ್ಜನೆಯನ್ನು ಅವಳ ಕೇಳುವಳು. ಆದರೆ ಅವಳಿಗೆ ಜೀವದ ಪರಿವೆಯೇ ಇರಲಿಲ್ಲ. ಅವಳಿಗೆ ತನ್ನ ಮಗುಗಳ ಲಕ್ಷ್ಯವಲ್ಲದೆ ಬೇರೆನೂ ಲಕ್ಷ್ಯಕ್ಕೆ ಬರುತ್ತಿರಲಿಲ್ಲ. ದಾರಿಯಲ್ಲಿ ಭೆಟ್ಟಿಯಾದವರನ್ನೆಲ್ಲ ತನ್ನ ಮೂರು ಮಕ್ಕಳನ್ನು ನೋಡಿರುವಿರಾ ಎಂದು ಅಂಗಲಾಚಿ ಕೇಳದೆ ಬಿಡುತ್ತಿರಲಿಲ್ಲ. ಜನರು ಈ ಪ್ರಶ್ನೆಯನ್ನು ಕೇಳಿ ಗಾಬರಿಯಾಗುತ್ತಿದ್ದರು.

" ಎರಡು ಹುಡುಗರು ಒಬ್ಬ ಹುಡುಗಿ " ಎಂದು ಪುನಃ ಕೇಳುವಳು. ಆಮೇಲೆ ಹುಡುಗರ ಹೆಸರು ತೆಗೆದುಕೊಳ್ಳುವಳು. ' ಹಿರಿಯವನಿಗೆ ೪॥ ವರುಷ, ಹುಡುಗಿಯು ೧೦ ತಿಂಗಳದ್ದು ' ಎಂದು ಹೇಳುತ್ತಿದ್ದಳು. ಜನರು ಅವಳ ಮಾತುಗಳನ್ನು ಕೇಳಿಕೊಳ್ಳುತ್ತಿದ್ದರು; ಮುಂದೆ ಸಾಗುತ್ತಿದ್ದರು. ಯಾರೂ ಉತ್ತರವನ್ನು ಕೊಡದೆ ಹೋದರೆ ಅವಳು ತನ್ನ ತಲೆಗೂದಲನ್ನು ಕೆದರಿಕೊಂಡು ಸ್ತಬ್ಧಳಾಗಿ ನಿಂತುಬಿಡುವಳು. ಆದರೂ ಕೊನೆಗೊಮ್ಮೆ ಒಕ್ಕಲಿಗನೊಬ್ಬನು ಅವಳ ಮಾತುಗಳನ್ನು ಕಿವಿಗೊಟ್ಟು ಕೇಳಿಕೊಂಡು

' ಮೂರು ಹುಡುಗರೇ? '

' ಅಹುದು. ಎರಡು ಹುಡುಗರು; ಒಂದು ಹುಡುಗಿ. '

' ನೀನು ಅವರು ಶೋಧ ನಡೆಸಿರುವಿಯಾ? '

' ಅಹುದು. '

' ಒಬ್ಬ ಸರದಾರನು ಅವುಗಳನ್ನು ತೆಗೆದುಕೊಂಡು ಹೋಗಿ ತನ್ನ ಹತ್ತಿರವಿರಿಸಿಕೊಂಡಿದ್ದಾನೆಂದು ಕೇಳಿದ್ದೇನೆ. '

' ಆ ಸರದಾರನೆಲ್ಲಿರುವನು? ಹುಡುಗರೆಲ್ಲಿವೆ? '

' ಲಾಟೂರಲ್ಲಿ. '

' ಲಾಟೂರ ಅಂದರೇನು? '

' ಅದೊಂದು ಸ್ಥಳದ ಹೆಸರು. '

' ಅದು ಹಳ್ಳಿಯೋ, ಹೊಲವೋ ಅಥವಾ ಕಿಲ್ಲೆಯೋ ಏನು? '

' ಅದೇನೆಂಬುದು ಸ್ಪಷ್ಟವಾಗಿ ನನಗೆ ಗೊತ್ತಿರುವದಿಲ್ಲ. '

' ಅದು ಬಹಳ ದೂರವಿದೆಯೋ ಏನು?'

' ಸಮೀಪವಿರುವದಿಲ್ಲ.'

' ಆ ಸ್ಥಳಕ್ಕೆ ಹೇಗೆ ಹೋಗಬೇಕು ?'

' ಪಶ್ಚಿಮದ ಕಡೆಗೆ-ತೋರಿಸಿ. ಆ ದಾರಿಯಿಂದ ಹೋಗಬೇಕು.'

ಎಂದವನು ಹೇಳಿದನು. ಅವನು ಹೇಳಿದ್ದೊಂದೆ ತಡ ಅದನ್ನು ಕೇಳಿ ಕೊಂಡವಳೇ ಅವಳು ಅಲ್ಲಿಂದ ಕಾಲು ಕಿತ್ತಿಯೇ ಬಿಟ್ಟಳು. ' ಹಾಂ! ಅತ್ತ ಕಡೆಗೆ ಯುದ್ಧ ನಡೆದಿದೆ. ಎಚ್ಚರಿಕೆಯಿಂದ ಹೋಗು' ಎಂದವನು ಕೂಗಿಕೊಂಡನು. ಅವಳು ಹೊರಳಿ ಸಹ ನೋಡಲಿಲ್ಲ. ಹಾಗೆಯೇ ಸಾಗಿಯೇಬಿಟ್ಟಳು.



## ೧೨.

ಲಾಟೋರದ ಎತ್ತರವಾದ ಕಿಲ್ಲೆಯು ಒಂದು ದಟ್ಟಡವಿಯನ್ನು ದಾಟಿ ಹೋದರೆ ಕಾಣುತ್ತದೆ. ಈಕಿಲ್ಲೆಯು ಈಕಥೆಯು ಜರುಗಿದ ಕಾಲಕ್ಕೆ ಅಲ್ಲಲ್ಲಿ ಬಿದ್ದು ಬಿಟ್ಟಿತ್ತು. ಅದರಿಂದ ಈ ಕಿಲ್ಲೆಯು ಈಗ ಹಳೆಯು ಕಿಲ್ಲೆಯ ಪಿಶಾಚಿಯಂತೆ ಕಾಣಿಸತೊಡಗಿತ್ತು. ಈ ಕಿಲ್ಲೆಯ ಕಟ್ಟುವಿಕೆಯು ೩೦೦ ವರುಷಗಳಿಂದ ನಡೆಯುತ್ತ ಬಂದಿತ್ತು. ಕಿಲ್ಲೆಯನ್ನು ಹತ್ತಿ ಮುಂದೆ ಸ್ವಲ್ಪ ಸಾಗಿದ ಮೇಲೆ ಅಲ್ಲೊಂದು ದೊಡ್ಡ ಕಿಂಡಿಯು ಕಾಣುವದು. ಅದರೊಳಗೆ ಪ್ರವೇಶಿಸಿದೊಡನೆ ಅದು ನಿರ್ಜನ ಪ್ರದೇಶವೆಂದು ಕೂಡಲೆ ಹೊಳೆಯುವದು. ಆದರ ತಳದಿಂದ ಶಿಖರದ ವರೆಗೆ ವ್ಯವಸ್ಥಿತವಾದ ಮೆಟ್ಟಿ ಲುಗಳಿರಲಿಲ್ಲ ಅಲ್ಲಲ್ಲಿ ಕೆಲಕೆಲ ಕಮಾನುಗಳು ಕುಪ್ಪಳಿಸಿದ್ದವು. ದೊಡ್ಡ ದೊಡ್ಡ ತೊಲೆಗಳು ಅರ್ಧಮರ್ಧ ಹೊರಬದಿಯಿಂದಲೇ ಕಾಣುತ್ತಿದ್ದುದ ರಿಂದ ಅದರ ಅಂತಸ್ತುಗಳ ಕಲ್ಪನೆಯು ಸಹಜವಾಗಿ ಬರುವದು. ತೂತು ಬಿದ್ದ ಭಾಗಗಳೊಳಗಿಂದ ಒಳಗಿರುವ ಮೆಟ್ಟಲುಗಳು ಕಾಣಬರುತ್ತಿದ್ದವು. ಅದನ್ನು ಹತ್ತಿಹೋಗುವದೆಂದರೆ ಮಹಾ ಪ್ರಯಾಸವೇ ಆಗುತ್ತಿತ್ತು.

ಆ ದೊಡ್ಡ ಕಿಂಡಿಯನ್ನು ಸುರಂಗ ಹೊಡೆದು ಕೆಡವಲಾಗಿತ್ತು. ಮುತ್ತಿಗೆಯು ಬಿದ್ದಾಗ ಶತ್ರುಗಳು ಈ ಕಿಂಡಿಯೊಳಗಿಂದ ಒಳಗೆ ಹೋಗಲು ಶಕ್ಯವಾಗಿತ್ತು. ಈ ಕಿಲ್ಲೆಯು ಅನೇಕ ಮುತ್ತಿಗೆಗಳನ್ನು ಸಹನ ಮಾಡಿಕೊಂಡಿತ್ತು. ಇದರ ತಳದ ಗೋಡೆಗಳು ಅಸಂಖ್ಯ ತೋಫುಗಳ ಹೊಡೆತಕ್ಕೆ ಈಡಾಗಿದ್ದವು. ಈ ಕಿಂಡಿಯೊಳಗಿಂದ ಮುಂದೆ ಹೋದರೆ ಕೆಳಮನೆಗೆ ಹೋಗುವ ಮಾರ್ಗವಿತ್ತು ಅದರ ಎದುರಿನ ಗೋಡೆಯಲ್ಲಿ ಕೆಳಗಿಳಿದು ಹೋಗುವ ಗುಪ್ತ ಮಾರ್ಗವೊಂದಿದೆ. ಅದರ ಬುಡದಲ್ಲಿ ಈ ನೆಲಮನೆಯು ಹಬ್ಬಿಕೊಂಡಿತ್ತು. ಪ್ರತಿಯೊಂದು ಕಿಲ್ಲೆಗೂ ಈ ತರದ ನೆಲಮನೆಯಿದ್ದೇ ಇರುತ್ತದೆ. ಆದರಂತೆ ಇದರ ಈ ನೆಲಮನೆಗೆ ಎರಡು ಅಂತಸ್ತುಗಳಿದ್ದವು. ಮೇಲಿನ ಅಂತಸ್ತು ವಿಶಾಲವಾದದು. ಅದರ ಮೇಲೆ ಸಮಾಂತರ ರೇಷೆಗಳ ಗುರುತುಗಳಿದ್ದವು. ಈ ಗುರುತುಗಳು ದೊಡ್ಡ ದೊಡ್ಡ ಗಾಲಿಗಳಿಂದಾಗಿದ್ದವು. ಪೂರ್ವಕಾಲದಲ್ಲಿ ಕೊಲೆಗಡಕರನ್ನು ಕುದುರೆಗಳ ಬಾಲಕ್ಕೆ ಕಟ್ಟಿ ಕೊಲ್ಲಿಸುತ್ತಿದ್ದಿಲ್ಲ. ಅವರ ಪ್ರತಿಯೊಂದು ಅವಯುವವನ್ನು ಕಡಿದುಹಾಕುವ ಯುಕ್ತಿಯು ರೂಢಿಯಲ್ಲಿತ್ತು. ಕೊಲೆಗಡಕರ ಒಂದು ಕೈಯನ್ನು, ಒಂದು ಕಾಲನ್ನು ಒಂದೊಂದು ಗಾಲಿಗೆ ಕಟ್ಟಿ, ಆ ಗಾಲಿಗಳನ್ನು ವಿರುದ್ಧದಿಶೆಯಿಂದ ಕಸುವಿನಿಂದ ತಿರುಗಿಸುತ್ತಿದ್ದರು ಹಾಗೆ ಆ ಗಾಲಿಗಳು ತಿರುಗುತ್ತಿರುವದರಿಂದ ಅವು ಗೋಡೆಗಳಿಗೆ ಒಮ್ಮೊಮ್ಮೆ ಅಪ್ಪಳಿಸುತ್ತಿದ್ದವು. ಅದರಿಂದ ಅವುಗಳ ಗುರುತುಗಳು ಬಿದ್ದಿದ್ದವು. ಈ ನೆಲಮನೆಯ ಬುಡದಲ್ಲಿ ಒಂದು ಕತ್ತಲೆಕೋಣೆ ಇದೆ. ಆ ಕೋಣೆಯೊಳಗೆ ಹೋಗಲು ಬಾಗಿಲವಿರಲಿಲ್ಲ. ಒಂದು ತೂತುವಿತ್ತು ಆ ತೂತಿನೊಳಗಿಂದ ಅಪರಾಧಿಗಳನ್ನು ಬತ್ತಲೆ ಮಾಡಿ ಒಳಗೆ ದಬ್ಬಲಾಗುತ್ತಿತ್ತು. ಅಲ್ಲಿ ಅಂಥ ಅಪರಾಧಿಯು ಜೀವ ಉಳಿಸಿಕೊಂಡಿದ್ದರೆ ಅವನ ಹೊಟ್ಟೆಗೆ ಅನ್ನವನ್ನು ಒಳಗೆ ಎಸೆಯಲಾಗುತ್ತಿತ್ತು

ಈ ನೆಲಮನೆಯು ಕೈದಿಗಳ ಸೇಡನ್ನು ತೀರಿಸಿಕೊಳ್ಳುವದಕ್ಕೆಂದು ನಿರ್ಮಿಸಲಾಗಿತ್ತು. ಈ ನೆಲಮನೆಯ ಬುಡದಲ್ಲಿರುವ ಕತ್ತಲೆ ಕೋಣೆಗೆ ನೀರು ಹತ್ತಿತ್ತು. ಇವು ಬಹಳ ಹೊಲಸಾಗಿದ್ದವೆಂಬದನ್ನು ವರ್ಣಿಸುವದೇ ಬೇಡ. ಅಲ್ಲಿ ಗಾಳಿಯು ಸುಳಿಯುತ್ತಿರಲಿಲ್ಲ. ಆ ಕಿಂಡಿಯ ಎದುರಿಗೆ ಒಂದು

ಕಲ್ಲಿನ ಪೂಲು ಇದ್ದು, ಅದನ್ನು ಮೇಲಿನ ಬುರುಜಿಗೆ ಜೋಡಿಸಲಾಗಿತ್ತು. ಈ ಪೂಲಿನ ಮೇಲೆ ಒಂದು ಕಟ್ಟಡವಿತ್ತು. ಆದರೆ ಅದೀಗ ಶಿಥಿಲವಾಗಿದೆ. ಈ ಕಟ್ಟಡದ ಬಹು ಭಾಗವೆಲ್ಲ ಅಗ್ನಿ ನಾರಾಯಣನಿಗೆ ಆಹುತಿಯಾಗಿತ್ತು. ಇಂದಿಗೆ ಆ ಕಿಲ್ಲೆಯ ಸ್ಥಳದಲ್ಲಿ ಯಾವ ಅವಶೇಷಗಳೂ ಉಳಿದಿರಲಿಲ್ಲ.

ಆದರೆ ೧೭೫೩ ರಲ್ಲಿ ಲಾಟೋರವು ಭದ್ರವಾದ ಕಿಲ್ಲೆಯಾಗಿತ್ತು. ಅದ್ಭುತವಾದ ಬುರುಜು. ಆ ಬುರುಜಿನ ಬುಡಕ್ಕೆ ವಿಶಾಲವಾದ ಬಯಲು. ಆ ಬಯಲಿಗೆ ಹೊಂದಿ ಒಂದು ಹಳ್ಳ. ಈ ಹಳ್ಳವು ಮಳೆಗಾಲ, ಚಳಿಗಾಲ ದಲ್ಲಿ ಒಡಲು ತುಂಬಿ ಹರಿಯುತ್ತಿತ್ತು ಆದರೆ ಬೇಸಿಗೆಯಲ್ಲಿ ಬತ್ತುತ್ತಿತ್ತು.

ಆ ಕಾಲಕ್ಕೆ ಈ ಕಿಲ್ಲೆಯು ಅಜಿಂಕ್ಯವಾದುದೆಂದು ಪ್ರಖ್ಯಾತವಾಗಿತ್ತು. ಆ ಪೂಲಿನಿಂದ ಮಾತ್ರ ಅದು ದುರ್ಬಲವಾಗಿತ್ತು. ಈ ಕಿಲ್ಲೆಯನ್ನು ನಿರ್ಮಾಣ ಮಾಡಿದವರು ಇದರೊಳಗೆ ಪ್ರವೇಶಿಸಲು ಒಂದು ಕಟ್ಟಿಗೆಯ ಪೂಲಿನ ಯೋಜನೆಯನ್ನು ಮಾಡಿದ್ದರು. ಈ ಪೂಲು ಒಂದೇ ಕೊಡಲಿಯ ಪೆಟ್ಟಿಗೆ ಮುರಿದು ಬೀಳುವಷ್ಟು ಕ್ಷಣಿಕವಾಗಿತ್ತು. ೧೭, ೧೮ ನೇ ಶತಮಾನದ ಸುಮಾರಿಗೆ ಈ ಗಾವೆನ್ ಮನೆತನದ ಸರದಾರರು ಎದುರಿನ ಬಯಲು ಪ್ರದೇಶದಿಂದ ಬರಲು ಒಂದು ಕಲ್ಲಿನ ಪೂಲನ್ನು ಕಟ್ಟಿಸಿದರು.

ಈ ಬುರುಜಿನ ಪಡುವಣಕ್ಕೆ ಒಂದು ದೊಡ್ಡ ಬಯಲು. ಅದು ಬುರು ಜಿಗೆ ಹತ್ತಿಕೊಂಡೇ ಇತ್ತು ಇವೆರಡರ ನಡುವೆ ಒಂದು ಆಳವಾದ ದರಿ ಯಿದ್ದು, ಆ ದರಿಯಲ್ಲಿ ಒಂದು ಹಳ್ಳ ಹರಿಯುತ್ತಲಿದೆ ಬುರುಜನ್ನೂ ಬಯ ಲನ್ನೂ ಕೂಡಿಸುವ ಈ ಪೂಲನ್ನು ಒಂದು ದೊಡ್ಡ ಕಂಬದ ಮೇಲೆ ನಿಲ್ಲಿಸ ಲಾಗಿತ್ತು. ಈ ಕಂಬದ ಮೇಲೆಯೇ ಒಂದು ಚಿಕ್ಕ ಕಿಲ್ಲೆಯಂಥ ಕಟ್ಟಡ ವಿತ್ತು. ಈ ಕಟ್ಟಡದ ಕೆಳಮನೆಯಲ್ಲಿ ಸಶಸ್ತ್ರ ಸಿಪಾಯಿಗಳು ಈ ಪೂಲನ್ನೂ ಕಟ್ಟಡವನ್ನೂ ಸಂರಕ್ಷಿಸಲು ಯಾವಾಗಲೂ ಸಜ್ಜಾಗಿರುತ್ತಿದ್ದರು. ಎರಡ ನೆಯ ಅಂತಸ್ತಿನಲ್ಲಿ ವಾಚನಾಲಯ; ಮೂರನೆಯದರಲ್ಲಿ ಸಾಮಾನುಗಳು ಇದ್ದವು. ಈ ಕಟ್ಟಡವು ದೊಡ್ಡ ಬುರುಜಿನಂತೆ ಕಾಣುತ್ತಿತ್ತು. ಈ ಬುರು ಜಿನ ಮೇಲಿಂದ ಹಲ್ಲೆಯನ್ನು ಆರಂಭಿಸಿದರೆ ಈ ಪೂಲೂ, ಈ ಕಟ್ಟಡವೂ ಕ್ಷಣಮಾತ್ರದಲ್ಲಿ ಧ್ವಂಸವಾಗುವದರಲ್ಲಿ ಸಂದೇಹವಿರಲಿಲ್ಲ.

ಸೈನಿಕ ದೃಷ್ಟಿಯಿಂದ ಈ ಪೂಲು ಬಹಳ ಮಹತ್ವವಾಗಿತ್ತು. ಅರಣ್ಯದ ಬದಿಯಿಂದ ಈ ಕಿಲ್ಲೆಯನ್ನು ವಶಪಡಿಸಿಕೊಳ್ಳುವದು ದುಸ್ಸಾಧ್ಯವಾಗಿತ್ತು. ಆದರೆ ಬಯಲಿನ ಕಡೆಯಿಂದ ವಶಪಡಿಸಿಕೊಳ್ಳಲು ಬಲು ಸುಲಭವಿತ್ತು. ಬಯಲಿನಲ್ಲಿ ಶತ್ರುಗಳ ಸೈನ್ಯವು ಬಂದು ನಿಂತರೆ ಅದನ್ನು ವಶಪಡಿಸಿಕೊಳ್ಳಲು ವೇಳೆಯೇ ಬೇಕಾಗುತ್ತಿರಲಿಲ್ಲ ಆ ವಾಚನಾಲಯವೂ, ಸಾಮಾನುಗಳೂ ಶತ್ರುಗಳ ಉಪಯೋಗಕ್ಕೆ ಬರುವಂತಿದ್ದವು. ಶತ್ರುಗಳಿಗೆ ಪುಸ್ತಕಗಳೂ, ಹುಲ್ಲೂ ಸಮವಾಗಿರುತ್ತವೆ. ಯಾರಿಗೆ ಕೊಳ್ಳಿ ಕೊಡುವದಿದೆಯೋ ಅಂಥವರಿಗೆ ಸಿಕ್ಕದ್ದೆಲ್ಲಾ ಉಪಯೋಗವೇ ಆಗುತ್ತದೆ. ಅಂಥವುಗಳಲ್ಲಿ ಹೋಮರನಂಥ ಪ್ರಖ್ಯಾತ ಕವಿಯ ಗ್ರಂಥಗಳೇ ಸಿಗಲಿ ಅಥವಾ ಹುಲ್ಲಿನ ಸಿವುಡುಗಳೇ ಸಿಗಲಿ-ಎಲ್ಲವೂ ಅಷ್ಟೇ. ಆದ್ದರಿಂದ ಒಟ್ಟಿನಲ್ಲಿ ಈ ಪೂಲು ಮಹತ್ವದ್ದಾಗಿದ್ದರೂ ನಿಷ್ಪ್ರಯೋಜನಕರವಾಗಿತ್ತು. ಆದರೂ ಕಟ್ಟುವ ಕಲೆಗಾರರು ಸಂಕಟಗಳು ಬರಬಾರದೆಂಬ ಯೋಜನೆಯಿಂದ ಅದನ್ನು ಕಟ್ಟಿದ್ದರು. ಮೊದಲು ಅದಕ್ಕೆ ಅಗ್ನಿ ಭಯವಾಗದಂತೆ ಎಚ್ಚರಿಕೆಯನ್ನು ತೆಗೆದುಕೊಂಡಿದ್ದರು. ಒಂದು ವೇಳೆ ಬೆಂಕಿ ಬಿದ್ದರೆ ಒಳಗಿನ ಜನರು ಪಾರಾಗಿ ಹೋಗಲು ಒಂದು ದೊಡ್ಡ ನಿಚ್ಚಣಿಕೆಯನ್ನು ನಿರ್ಮಿಸಿ ಅದಕ್ಕೆ ಜೋಡಿಸಲಾಗಿತ್ತು. ಆದರಂತೆ ಶತ್ರುಗಳ ಹಲ್ಲೆಯಾದರೆ, ಆ ಹಲ್ಲೆಯಿಂದ ಯಾವ ಅಪಾಯವೂ ಆಗದಂಥ ಯೋಜನೆಯನ್ನು ಮಾಡಲಾಗಿತ್ತು. ಈ ಪೂಲಿನ ಕೊನೆಯಲ್ಲಿ ಒಂದು ಕಬ್ಬಿಣದ ಬಾಗಿಲ ಮಾಡಿದ್ದರು. ಈ ಬಾಗಿಲಿಗೆ ಒಂದು ಡೊಡ್ಡ ಕೀಲಿಯನ್ನು ಜಡಿಯಲಾಗಿತ್ತು. ಇದರ ಕೈ ಎಲ್ಲಿರುತ್ತದೆಂಬದು ಕಿಲ್ಲೆಯೊಡೆಯನನ್ನು ಬಿಟ್ಟು ಇನ್ನಾರಿಗೂ ಗೊತ್ತಿರುತ್ತಿದ್ದಿಲ್ಲ. ಈ ಬಾಗಿಲಕ್ಕೆ ಹೋಗಬೇಕಾದರೆ ಇಡೀ ಪೂಲನ್ನು ದಾಟಿ ಹೋಗಬೇಕಾಗುತ್ತಿತ್ತು. ಈ ಬಾಗಿಲವು ಬಹು ಭದ್ರವಾಗಿತ್ತು. ಎಂಥ ತೋಪುಗಳೂ, ಎಷ್ಟು ತೋಪುಗಳೂ ಘರ್ಷಣೆಯಾದರೂ ಅದರ ಮೇಲೆ ಎಳ್ಳಷ್ಟೂ ಪರಿಣಾಮವಾಗುವಂತಿರಲಿಲ್ಲ.

ಆಗಸ್ಟ ತಿಂಗಳು. ಫ್ರಾನ್ಸದ ಮೇಲೆ ದೊಡ್ಡ ಬಿರುಗಾಳಿ ಬೀಸಿತು; ಶಾಂತವೂ ಆಯಿತು. ಅಲ್ಲಲ್ಲಿಯ ಪರಿಸ್ಥಿತಿಯು ಬಲು ಕಠಿಣವಾಗಿತ್ತು.

ವೆಂಡಿಯ ಬಂಡಾಯದಲ್ಲಿ ರಾಜಪಕ್ಷಕ್ಕೆ ಆದ ದೊಡ್ಡ ಪರಾಭವವನ್ನು ನಾವು ಅರಿತಿದ್ದೇವೆ. ಈ ಯುದ್ಧದ ಬೆಂಕಿಯು ಅಡವಿ-ಅಡವಿಗಳಲ್ಲೂ ಹಬ್ಬತೊಡಗಿತ್ತು. ರಾಜಪಕ್ಷದ ಸೈನ್ಯವು ಹೆಚ್ಚು ಹೆಚ್ಚು ಕಳೆಗುಂದುತ್ತ ನಡೆದಿತ್ತು. ಪ್ರಜಾಪಕ್ಷದ ಸೈನ್ಯವು ದೂರು ದೂರಿನಿಂದ ಬಂದು ಕಾಲೂರ ತೊಡಗಿತು. ವೆಂಡಿಯ ೮೦೦೦ ಒಕ್ಕಲಿಗರು ಧಾರಾ ತೀರ್ಥದಲ್ಲಿ ಪತನ ಹೊಂದಿದರು. ಎಲ್ಲೆಲ್ಲಿಯೂ ಅವರು ಕಾಲ್ದೆಗೆಯುತ್ತಿದ್ದರು. ಇಂಗ್ಲಿಷರ ಸೈನ್ಯವೂ, ಫ್ರಾನ್ಸದ ಕಾಯ್ದಿಟ್ಟ ಅಧಿಕಾರಿಗಳೂ ಲ್ಯಾಂಟ್‌ನೆಕ್‌ನ ಆಜ್ಞೆಯ ದಾರಿಯನ್ನು ಕಾಯುತ್ತ ಇನ್ನೂ ವರೆಗೂ ಸಮುದ್ರದಲ್ಲಿದ್ದರು. ಈ ಸೈನ್ಯವು ಇಳಿದು ಬಂದಿದ್ದರೆ ರಾಜಪಕ್ಷದ ಸೈನ್ಯಕ್ಕೆ ಜಯವು ದೊರೆಯುವ ಸಂಭವ ವಿತ್ತು. ಇಂಗ್ಲಂಡಕ್ಕೆ ಪಿಟ್‌ನು ಪ್ರಧಾನ ಮಂತ್ರಿಯಾಗಿದ್ದನು. ಅವನ ಕೈಯಲ್ಲಿ ರಾಜಕಾರಣದ ಸರ್ವ ಸೂತ್ರಗಳಿದ್ದುದರಿಂದ ಫ್ರೆಂಚ್ ಲೋಕ ಪಕ್ಷದ ಜಯಾಪಜಯಗಳು ಅದರ ಮೇಲೆ ಅವಲಂಬಿಸಿ ಕೂತಿದ್ದವು. ರಾಜಕಾರಣದೊಳಗಿನ ಮುತ್ಸದ್ದಿತನವು ಕೊಲೆಗಡಕರ ಕೊಯ್ತದಂತೆ ಸೇಡಿಸ ಸ್ವಭಾವವುಳ್ಳದ್ದಾಗಿದೆ. ಪಿಟ್‌ನು ಫ್ರಾನ್ಸಿಗೆ ಬೆಂಬಲವನ್ನಿತ್ತು, ಇಂಗ್ಲಂಡದ ಕೀರ್ತಿಗೆ ಕಲಂಕವನ್ನು ಹಚ್ಚಿದನು. ಸ್ವದೇಶದ ಅಪಮಾನ ವನ್ನು ಮಾಡುವದೆಂದರೆ ದ್ರೋಹವನ್ನು ಬಗೆದಂತೆಯೇ. ಇಂಗ್ಲಂಡವು ಪಿಟ್‌ನ ಮುಖಾಂತರ ಪ್ರಜಾಪಕ್ಷದವರೊಂದಿಗೆ ಬಡಿದಾಡುತ್ತಲಿತ್ತು. ಇಂಗ್ಲಂಡವು ಗುಪ್ತಚಾರರನ್ನು ಕಳಿಸಿ ಶತ್ರುಗಳ ಗುಪ್ತಕಾರಸ್ಥಾನಗಳನ್ನು ಬಯಲಿಗೆ ಹಾಕುತ್ತಿತ್ತು ಬೇರೆಯುವರನ್ನು ಮೋಸಗೊಳಿಸಿ, ನಡುವೆ ಅಡ್ಡ ಬಂದು ಬೇರೊಂದು ವ್ಯೂಹವನ್ನು ರಚಿಸುತ್ತಿತ್ತು. ಇಂಥ ಹೀನ ಕೃತ್ಯಗಳನೆ ಸಗುವವರಲ್ಲಿ ಇಂಗ್ಲಂಡಕ್ಕೆ ಯಾವ ತರದ ನಾಚಿಕೆ ಎನಿಸುತ್ತಿದ್ದಿಲ್ಲ. ವೆಂಡಿ ಯಲ್ಲಿ ಪಿಟ್‌ನ ಪ್ರತಿನಿಧಿಯೊಬ್ಬನಿದ್ದನು. ಪಿಟ್‌ನು. ಆ ಪ್ರತಿನಿಧಿಗೆ ಬರೆದ ಒಂದು ಪತ್ರವು ಬಂಧಿಸಲ್ಪಟ್ಟ ಒಬ್ಬ ಇಂಗ್ಲಿಷ ಮನುಷ್ಯನ ಹತ್ತಿರ ಸಿಕ್ಕಿತು. ಅದರಲ್ಲಿ 'ಹೆಚ್ಚು ಹಣವನ್ನು ವೆಚ್ಚ ಮಾಡಕೂಡದು. ಕೊಲೆಯನ್ನು ವಿಚಾರಿಸಿ ಮಾಡಬೇಕು. ಈ ಕೆಲಸಕ್ಕೆ ಹೆಂಗಸರು ಮತ್ತು ಭಿಕ್ಷುಕರು

ಬಹಳ ಉಪಯೋಗ ಬೀಳುತ್ತಾರೆ ' ಎಂದು ಬರೆಯಲಾಗಿತ್ತು. ಈ ಪತ್ರ ವನ್ನು ಸಭೆಯಲ್ಲಿ ಓದಿ ತೋರಿಸಲಾಯಿತು.

ಇಬ್ಬಣಗಳಲ್ಲಿಯೂ ಯುದ್ಧದ ಸಿದ್ಧತೆಯು ಭರಾಟೆಯಿಂದ ಸಾಗಿತ್ತು. ಯಾರು ಯಾರಿಗೂ ದಯೆಯನ್ನು ತೋರಿಸಬಾರದು. ಯಾರು ಸಿಕ್ಕರೂ ಅವರನ್ನು ಜೀವಂತ ಉಳಿಸಬಾರದೆಂದು ಸಾರ್ವತ್ರಿಕವಾಗಿ ಡಂಗುರವನ್ನೇ ಹೊಯಿಸಲಾಗಿತ್ತು. ಈ ಕಾಲದ ಇತಿಹಾಸವೆಂದರೆ ಭಯಂಕರವಾದುದೂ ಕರಾಳ ಕೃತಿಗಳಿಂದ ತುಂಬಿದುದೂ ಆಗಿತ್ತು.

ಆಗಸ್ಟದಲ್ಲಿ ಲಾಟೋರಿಗೆ ಮುತ್ತಿಗೆ ಬಿದ್ದಿತು. ಒಂದು ದಿನ ಸಾಯಂಕಾಲ ಗಗನಾಂಗಣದಲ್ಲಿ ತಾರೆಗಳು ಮಿನುಗುತ್ತಿರುವಾಗ, ಅರಣ್ಯ ದಲ್ಲಿ ವೃಕ್ಷಗಳ ಎಲೆಗಳು ನಿಶ್ಚಲವಿರುವಾಗ, ಎಲ್ಲ ಕಡೆಗೂ ನಿತಾಂತ ಶಾಂತ ತೆಯು ನೆಲೆಗೊಂಡಾಗ ಯುದ್ಧದ ಕಹಳೆಯ ಕೂಗು ವಾತಾವರಣವನ್ನು ದುಮುದುಮಿಸ ತೊಡಗಿತು. ಈ ಕಹಳೆಯ ಸಪ್ಪಳವು ಲಾಟೋರದ ಕಿಲ್ಲೆಯ ಕಡೆಯಿಂದ ಕೇಳ ಬರುತ್ತಿತ್ತು. ಒಂದರ ಮೇಲೊಂದು ಯುದ್ಧದ ವಾದ್ಯಗಳು ಮೊಳಗತೊಡಗಿದವು. ಬುರುಜಿನ ಮೇಲೆ ಒಬ್ಬ ಸಶಸ್ತ್ರ ಸಿಪಾಯಿ ಯೊಬ್ಬನಿದ್ದನು. ಕೆಳಗೆ ಸೈನ್ಯದ ಒಂದು ದೊಡ್ಡ ತಂಡವೇ ತಳವೂರಿತ್ತು. ಕಿಲ್ಲೆಯ ಮೇಲೆ ಕತ್ತಲುಗವಿದಿತ್ತು. ಈ ಕತ್ತಲೆಯೊಳಗಿಂದಲೂ ಗಾವೆರ್ನನು ಯಾರು ಎಂಬದು ಸ್ಪಷ್ಟವಾಗಿ ಗುರುತಿಸಿಗಬಹುದಾಗಿತ್ತು. ಕಿಲ್ಲೆಯ ಮೇಲೆ ಅನೇಕ ಆಕೃತಿಗಳ ತಿರುಗಾಟವು ಎಡೆಬಿಡದೆ ನಡೆದಿತ್ತು. ಅರಣ್ಯದಲ್ಲಿಯೂ, ಬಯಲಿನೊಳಗಿನ ಹೊಲಗಳಲ್ಲಿಯೂ ಅಲ್ಲಲ್ಲಿ ಬೆಂಕಿಯು ಉರಿಯುತ್ತಿತ್ತು. ಬೆಂಕಿಯ ಕಿಡಿಗಳು ಭೂಮಿಯ ಮೇಲಿನ ತಾರಾಗಣದಂತೆ ಆ ಕತ್ತಲೆಯೊಳ ಗಿಂದ ಹೊಳೆಯುತ್ತಿದ್ದವು. ಬಯಲಿನಿಂದ ದೂರದವರೆಗೂ, ಅರಣ್ಯದ ಬದಿಗ ಳೊಳಗೂ ಸೈನ್ಯವು ಬೀಡು ಬಿಟ್ಟುಕೊಂಡು ಲಾಟೋರಿಗೆ ಮುತ್ತಿಗೆ ಹಾಕಿತ್ತು.

ಕಹಳೆಯ ಧ್ವನಿಗೆ ಕೆಳಗಿನಿಂದ ಒಂದು ವಾದ್ಯವು ಮೊಳಗಿ ಸಂಕೇತ ದಿಂದ ಪ್ರತಿಧ್ವನಿಕೊಟ್ಟಿತು. ಈ ಉತ್ತರವು ಕೇಳಿಸಿದೊಡನೆಯೆ ಇಮಾನ ಸನು ಬುರುಜಿನ ಮೇಲೆ ಬಂದು ಮಾತನಾಡ ತೊಡಗಿದನು.

‘ ನಾನು ನಿಮ್ಮೊಳಗಿನ ಜನರಲ್ಲಿ ಅನೇಕರನ್ನು ಕೊಂದಿದ್ದರಿಂದ ನನಗೆ ಪ್ರಜಾಪಕ್ಷ ಸಂಹಾರಕನೆಂಬ ಹೆಸರು ಬಿದ್ದಿದೆ ಇನ್ನೂ ಅನೇಕರನು ಕೊಲ್ಲುವದಿರುವದರಿಂದ ನನಗೆ ಇಮಾನಸನೆಂದೂ ಕರೆಯಲಾಗುತ್ತದೆ. ನಾನು ಒಬ್ಬ ಮನುಷ್ಯನ ಮೇಲೆ ಬಿದ್ದು ಹಲ್ಲೆಯನ್ನು ಮಾಡುತ್ತಿರುವಾಗ ನನ್ನ ಕೈಗತ್ತಿಯಿಂದ ನನ್ನ ಬೆರಳು ಕತ್ತರಿಸಲ್ಪಟ್ಟಿತು. ನೀವು ಲಾವಲದಲ್ಲಿ ನನ್ನ ತಾಯಿ-ತಂದೆ ಮತ್ತು ೧೮ ವರುಷದ ನನ್ನ ತಂಗಿಯನ್ನು ಗಲ್ಲಿಗೇರಿಸಲಿಲ್ಲವೇ ? ಅಂಥವರ ಇಮಾನಸನು ನಾನಾಗಿದ್ದೇನೆ. ನಾನು ನನ್ನ ಯಜಮಾನನಾದ ಲ್ಯಾಂಟೆನೆಕ್‍ನ ಪರವಾಗಿ ಸಂಭಾಷಣ ಮಾಡುತ್ತಿದ್ದೇನೆ. ನೀವು ನನ್ನ ಯಜಮಾನನ ಈ ಕಿಲ್ಲೆಯ ಮೇಲೆ ಹಲ್ಲೆಯನ್ನು ಆರಂಭಿಸುವ ಮೊದಲೇ ಅವನು ತನ್ನ ಸರ್ವಸ್ವವನ್ನೆಲ್ಲ ಆರು ಅಧಿಕಾರಿಗಳಿಗೆ ಹಂಚಿಕೊಟ್ಟಿದ್ದಾನೆ. ಆ ಅಧಿಕಾರಿಗಳೆಲ್ಲರೂ ಕಿಲ್ಲೆಯ ಹೊರಗಿರುತ್ತಾರೆಂಬದನ್ನು ಲಕ್ಷ್ಯದಲ್ಲಿಟ್ಟುಕೊಳ್ಳಿರಿ. ಈ ಕಿಲ್ಲೆಯು ನಿಮ್ಮ ವಶವಾದರೂ ಆ ಅಧಿಕಾರಿಗಳು ಈ ಎಲ್ಲ ಪ್ರಾಂತವನ್ನು ತಮ್ಮ ವಶಪಡಿಸಿಕೊಂಡಿರುವದರಿಂದ ಈ ಯುದ್ಧವು ಕೊನೆಯದೆಂದು ತಿಳಿಯಬೇಡಿರಿ ಲ್ಯಾಂಟ್‍ನೆಕ್‍ನಿಗೆ ಒಂದು ವೇಳೆ ಮರಣವು ಪ್ರಾಪ್ತವಾದರೂ ರಾಜನ ಹಾಗೂ ದೇವನ ಈ ವೆಂಡೀ ಪ್ರಾಂತವು ಜೀವಂತವಾಗಿ ಉಳಿದೇ ತೀರುವದೆಂಬದನ್ನು ಮರೆಯು ಬೇಡಿರಿ. ನಾನೀಗ ಹೇಳುತ್ತಿರುವದೆಲ್ಲವೂ ನಿಮಗೆ ಎಚ್ಚರಿಕೆ ಕೊಡುವದಕ್ಕಾಗಿಯೇ ಇದೆ. ಮಹಾರಾಜ ಲ್ಯಾಂಟ್‍ನೆಕ್‍ನು ನನ್ನ ಬದಿಯಲ್ಲಿಯೇ ನಿಂತುಕೊಂಡು, ನನ್ನ ಮುಖಾಂತರವಾಗಿ ನಿಮಗೆ ಮಾತನಾಡುತ್ತಿದ್ದಾನೆ.

“ ನೀವು ನಮ್ಮೊಡನೆ ಹೂಡಿದ ಯುದ್ಧವು ನ್ಯಾಯವಾದದ್ದಲ್ಲೆಂಬದನ್ನು ಲಕ್ಷ್ಯದಲ್ಲಿಡಿರಿ. ನಾವು ಇಲ್ಲಿಯವರಾದ್ದರಿಂದ ಪ್ರಾಮಾಣಿಕತೆಯಿಂದ ಹೋರಾಡುತ್ತಿದ್ದೇವೆ. ನಾವು ಶುದ್ಧರೂ ಸರಳರೂ ಇದ್ದು ದೇವರ ಪ್ರೇರಣೆಯಂತೆ ವರ್ತಿಸುವವರಾಗಿದ್ದೇವೆ. ಪ್ರಜಾಪಕ್ಷವೇ ನಮ್ಮ ಮೇಲೇರಿ ಬಂದಿದೆ. ಅದೇ ನಮ್ಮನ್ನು ಪೀಡಿಸತೊಡಗಿದೆ. ನಮ್ಮ ಮನೆ—ಮಾರು—ಹೊಲಗಳಿಗೆ ಬೆಂಕೀ ಹಚ್ಚಿ ಹಾಳು ಮಾಡಿದೆ. ಹಗಲಿರುಳೂ ಹೆಂಗಸರೂ ಹುಡುಗರೂ ಬರಿಗಾಲಿನಿಂದ ಅಡವಿ, ಅರಣ್ಯ ಅಲೆದಾಡಲು ಹಚ್ಚಿದೆ.

" ಕೆಲಸವಿಲ್ಲದ ನೀವೆಲ್ಲರೂ ನಮಗೆ ಮುತ್ತಿಗೆಯನ್ನು ಹಾಕಿರುವಿರಿ. ಯಾರು ಯಾರು ನಮಗೆ ಬಂದು ಕೂಡಿದ್ದರೋ ಅವರೆಲ್ಲರನ್ನು ಇಲ್ಲಿಂದ ನೀವೇ ಓಡಿಸಿ ಹಾಕಿದಿರಿ; ಇಲ್ಲವೆ ಕೊಂದು ಹಾಕಿದಿರಿ. ನಿಮ್ಮ ಹತ್ತಿರ ತೋಫುಗಳಿವೆ; ನಿಮ್ಮ ಸೈನ್ಯವೆಲ್ಲಾ ಕೂಡಿ ನಾಲ್ಕೈವರೆ ಸಾವಿರ ಇದೆ. ನಾವು ಕೇವಲ ೧೯ ಜನರು ಮಾತ್ರ ಹೋರಾಡುತ್ತಿರುವೆವು. ನಿಮ್ಮ ಹತ್ತಿರ ಮದ್ದು-ಗುಂಡು, ಧನಧ್ಯಾನ್ಯವೆಲ್ಲವೂ ಇದೆ. ನೀವು ಸುರಂಗ ಹೊಡೆಯುತ್ತಿರುವಿರಿ. ಬುರುಜಿನ ಗೋಡೆಗೆ ಬಿರುಕು ಕೆಡವಿರುವಿರಿ. ವಾರಿಯಲ್ಲಿ ದಾರಿಯನ್ನು ಮಾಡಿಕೊಳ್ಳುತ್ತ ಒಳಗೆ ಬರಬೇಕೆಂದು ಮಾಡಿರುವಿರಿ. ನೀವು ಹಲ್ಲೆಯ ಸರ್ವ ಸಿದ್ಧತೆಯನ್ನು ಮಾಡಿಕೊಂಡಿರುವಿರಿ. ನಾವು ಕಿಲ್ಲೆಯಲ್ಲಿ ಸಿಕ್ಕಬಿದ್ದಿದ್ದೇವೆ ನಿಮಗೆ ಒಂದು ಮಾತನ್ನು ಹೇಳುತ್ತೇನೆ. ಲಕ್ಷಗೊಟ್ಟು ಕೇಳಿರಿ. ಅದೇನೆಂದರೆ—ನಮ್ಮ ವಶದಲ್ಲಿ ಕೈದಿಗಳಾಗಿರುವ ಮೂರು ಮಗುಗಳಿವೆ. ಈ ಹುಡುಗರನ್ನು ನಿಮ್ಮಲ್ಲಿಯ ಒಂದು ತಂಡವು ದತ್ತಕವೆಂದು ಸ್ವೀಕರಿಸಿದ್ದಿತು. ಈ ಮೂರೂ ಹುಡುಗರನ್ನು ನಿಮಗೆ ಕೊಡುತ್ತೇವೆ. ಆದರೆ ಒಂದು ಕರಾರದ ಮೇಲೆ ಕೊಡಬಯಸುತ್ತೇವೆ. ಆ ಕರಾರವೆಂದರೆ ನೀವು ಇಲ್ಲಿಂದ ಗಪ್ಪುಚಿಪ್ಪಾಗಿ ಹೊರಟು ಹೋಗಬೇಕು. ಇಲ್ಲವಾದರೆ ನೀವು ನಮ್ಮ ಮೇಲೆ ಎರಡೂ ಬದಿಯಿಂದ ಹಲ್ಲೆಯನ್ನು ಮಾಡಬಹುದು. ಪೂಲಿನ ಮೇಲಿರುವ ಕಟ್ಟಡಕ್ಕೆ ಮೂರು ಅಂತಸ್ತುಗಳಿವೆ. ಮೊದಲಿನ ಅಂತಸ್ತಿನಲ್ಲಿ ನಾನೇ-ಇಮಾನಸನು—ಆರು ಡಾಂಬರಿನ ಪಿಪಾಯಿಗಳನ್ನೂ, ಒಣಗಿದ ನೂರು ಹುಲ್ಲಿನ ಸಿವುಡುಗಳನ್ನೂ ತುಂಬಿ ಇಟ್ಟಿರುವೆನು. ಮೂರನೆಯ ಅಂತಸ್ತಿನಲ್ಲಿಯೂ ಹುಲ್ಲನ್ನು ಒಟ್ಟಲಾಗಿದೆ. ಎರಡನೆಯದರಲ್ಲಿ ಪುಸ್ತಕಗಳೂ, ಕಾಗದಪತ್ರಗಳೂ ಇವೆ. ನಡುವಿರುವ ಕಬ್ಬಿಣದ ಬಾಗಿಲವು ಹಾಕಲ್ಪಟ್ಟಿದೆ. ಅದರ ಕೀಲಿಕೈಯು ಲ್ಯಾಂಟ್‌ನೆಕನ ಹತ್ತಿರವಿದೆ. ಈ ಬಾಗಿಲದ ಕೆಳಗೆ ನಾನು ಒಂದು ತೂತನ್ನು ಕೆಡವಿರುವೆ. ಈ ತೂತಿನಲ್ಲಿ ಗಂಧಕದ ಕಡ್ಡಿಗಳಿದ್ದು, ಅವುಗಳ ಒಂದು ತುದಿಯು ನನ್ನ ಕೈಯಲ್ಲಿದೆ. ಇನ್ನೊಂದನ್ನು ಡಾಂಬರಿನ ಪೀಪೆಗಳಲ್ಲಿರಿಸಲಾಗಿದೆ. ನನಗೆ ಈ ಕಡ್ಡಿಗೆ ಬೇಕಾದಾಗ ಬೆಂಕಿ ಕೊಡಲು ಬರುತ್ತದೆ. ನೀವು ನಮ್ಮನ್ನು ಸುಮ್ಮನೆ

ಹೋಗಗೊಡದಿದ್ದರೆ ಆ ಮೂರೂ ಹುಡುಗರನ್ನು ನಡುವಣ ಅಂತಸ್ತಿನಲ್ಲಿ ರಿಸಿ, ಕಬ್ಬಿಣದ ಬಾಗಿಲವನ್ನು ಭದ್ರವಾಗಿ ಹಾಕಲಾಗುವದು. ನೀವು ಪೂಲಿನ ಕಡೆಯಿಂದ ಹಲ್ಲೆಯನ್ನು ಮಾಡಿದ್ದಾದರೆ ನೀವೇ ಅದಕ್ಕೆ ಬೆಂಕಿ ಯನ್ನು ಹಚ್ಚುವ ಪ್ರಸಂಗ ಬರಬಹುದು. ಇನ್ನೊಂದು ಬದಿಯಿಂದ ನೀವು ಹಲ್ಲೆ ಮಾಡಿದರೆ ನಮಗೆ ಬೆಂಕಿಯನ್ನು ಹಚ್ಚುವ ಪ್ರಸಂಗಬರುವದು. ಅಥವಾ ನೀವು ಎರಡೂ ಬದಿಯಿಂದ ಒಮ್ಮೆಲೆ ಹಲ್ಲೆಯನ್ನು ಆರಂಭಿಸಿದರೆ ನಾವೇ ಎರಡೂ ಕಡೆಯಲ್ಲಿ ಬೆಂಕಿಯನ್ನು ಕೊಡುತ್ತೇವೆ. ಏನೇ ಆದರೂ ಈ ಬೆಂಕಿಯಿಂದ ಆ ಹುಡುಗರ ರಕ್ಷಣೆಯಾಗುವದು ಅಶಕ್ಯವಾದ ಮಾತು.

'ನಮ್ಮ ಕರಾರವನ್ನು ಒಪ್ಪಿಕೊಳ್ಳುವಿರೊ ಅಥವಾ ನಿರಾಕರಿಸು ವಿರೋ ಎಂಬದನ್ನು ಹೇಳಿರಿ.'

'ಒಪ್ಪಿಕೊಂಡರೆ ನಾವು ಹೊರಗೆ ಬರುವೆವು. ಇಲ್ಲದಿದ್ದರೆ ಹುಡುಗರ ಆಹುತಿಯಾಗುವದು ನಿಶ್ಚಿತ.'

"ನಾನು ಹೇಳುವದನ್ನೆಲ್ಲ ಹೇಳಿಬಿಟ್ಟಿದ್ದೇನೆ." ಎಂದು ಮಾತು ಮುಗಿಸಿ ಗಪ್ಪಾದನು.

ಕೆಳಬದಿಯಿಂದ 'ನಾವು ನಿರಾಕರಿಸುತ್ತೇವೆ' ಎಂಬ ಸ್ವರವು ಕೇಳ ಬಂದಿತು. ಆ ಸ್ವರವು ಕಠೋರವೂ ಸ್ಪಷ್ಟವಾದುದೂ ಆಗಿತ್ತು. ಅದಕ್ಕೂ ಸ್ವಲ್ಪ ಕಡಮೆ ಕಠೋರದ ಸ್ವರವು 'ನೀವು ನಮಗೆ ಶರಣಾಗತರಾಗಲು ನಿಮಗೆ ೨೪ ತಾಸುಗಳ ಅವಧಿಯನ್ನು ಕೊಡುತ್ತೇನೆ. ನೀವು ನಾಳೆ ಈ ಹೊತ್ತಿಗೆ ಶರಣು ಬಾರದಿದ್ದರೆ ಹಲ್ಲೆಗೆ ಆರಂಭವಾಗುವದು' ಎಂದು ಕೇಳ ಬಂದಿತು. ಆ ನಂತರ ಮೊದಲಿನವನು 'ಆಮೇಲೆ ದಯ ತೋರಿಸಲಿಕ್ಕಾ ಗದು' ಎಂದನು. ಈ ರೌದ್ರಸ್ವರಕ್ಕೆ ಉತ್ತರವು ಮೇಲಿನಿಂದ ಬಂದಿತು. ಲ್ಯಾಂಟ್‌ನೆರ್‌ನು ಸ್ವಲ್ಪ ಬಾಗಿ, ಕೆಳಗೆ ನೋಡಿ 'ಸುಮ್ಮನೆ ಇರ್ರಿ. ಹಾಗೆ ಬಡಬಡಿಸುವ್ಯಗೂಬೆ ಯಾವನೋ?' ಎಂದು ಕೂಗಿದನು.

'ಏ ದೇಶದ್ರೋಹಿಯೇ! ನಾನೋ' ಎಂದು ಕೆಳಬದಿಯಿಂದ ಉತ್ತರ ಬಂದಿತು. ಈ ಕಠೋರ ಸ್ವರವು ಸಿಮೋರೆಡಿನ್‌ನದಾಗಿತ್ತು.

ಎರಡನೇ ಸ್ವರವು ಗಾವೆನ್‌ನದಾಗಿತ್ತು. ಲ್ಯಾಂಟ್‌ನೆಕ್‌ನು ಸಿಮೋರೆಡಿನ್‌ನ ಸ್ವರವನ್ನು ಗುರುತಿಸದೆ ಇರಲಿಲ್ಲ.

ಕೆಲವು ದಿನಗಳ ವರೆಗೆ ಈ ಭಾಗದಲ್ಲಿ ರಕ್ತಪಾತವು ನಡೆದೇ ಇತ್ತು. ಆದ್ದರಿಂದ ಸಿಮೋರೆಡಿನ್‌ನ ಹೆಸರು ಎಲ್ಲರ ಬಾಯಲ್ಲೂ ಕುಳಿತಿತ್ತು. ಸಿಮೋರೆಡಿನ್‌ನ ಹೆಸರು ಕೇಳಿಯೇ ಜನರು ಗದಗುಟ್ಟಿ ನಡುಗುತ್ತಿದ್ದರು. ಇಂಥ ಕಠೋರ ಮನುಷ್ಯನ ಅಂತಃಕರಣದ ಕಡೆಗೆ ದೃಷ್ಟಿಯನ್ನು ಹೊರಳಿಸಿದರೆ ಅದು ಪೂರ್ಣ ನಿರ್ದೋಷವಾದದ್ದೆಂದು ಕಂಡುಬರುವದು. ಲ್ಯಾಂಟ್‌ನೆಕ್ ಹಾಗೂ ಸಿಮೋರೆಡಿನ್‌ನ ದ್ವೇಷವು ಜನರಿಗೆ ಸರಿಸಮಾನಾಗಿಯೇ ಕಂಡುಬಂದಿತ್ತು. ಇಬ್ಬರೂ ವಿರುದ್ಧ ಪಕ್ಷದವರಿಗೆ ರಕ್ಕಸರಂತೆ ಕಾಣುತ್ತಿದ್ದರು. ಅವರ ರುಂಡ ತಂದವರಿಗೆ ಬಹುಮಾನವನ್ನು ಕೊಡುವದಾಗಿ ಸಾರಲಾಗಿತ್ತು.

ಗಾವೆನ್‌ನ ಮಧ್ಯಸ್ಥಿಕೆಯಿಂದ ೨೪ ತಾಸಿನ ಒಪ್ಪಂದವಾಯಿತು. ಇಮಾನಸನಿಗೆ ಅದರ ಬಿಸಿಯು ಚನ್ನಾಗಿಯೇ ತಾಗಿತು. ಸಿಮೋರೆಡಿನ್‌ನ ಆಗಮನದಿಂದ ಗಾವೆನ್‌ನಿಗೆ ಅವನ ನೆರವು ದೊರೆತು ಅವನ ಸೈನ್ಯವು ೪॥ ಸಾವಿರವಾಗಿತ್ತು. ಆ ಸೈನ್ಯದೊಂದಿಗೆ ಗಾವೆನ್‌ನು ಲ್ಯಾಂಟ್‌ನೆಕ್‌ನನ್ನು ಲಾಟೋರ ಕಿಲ್ಲೆಯಲ್ಲಿ ಹಿಡಿದು ಹಾಕಿದ್ದನು. ಅವನು ಆರು ತೋಫುಗಳನ್ನು ಕಿಲ್ಲೆಗೆ ಹೊಡೆಯುವಂತೆ ಸಿದ್ಧಪಡಿಸಿದನು. ತನ್ನ ಸೈನ್ಯದಲ್ಲಿ ಎರಡು ಭಾಗ ಮಾಡಿ, ಒಂದನ್ನು ಅರಣ್ಯದ ಕಡೆಗೂ, ಮತ್ತೊಂದನ್ನು ಪೂಲಿನ ಕಡೆಗೂ ಅಟ್ಟಿದನು. ಕಿಲ್ಲೆಗೆ ಸುರಂಗವನ್ನು ಹೊಡೆದು ಬಿರುಕು ಕೆಡವಿದನು. ೨೪ ತಾಸು ಪೂರ್ತಿಯಾದ ಮೇಲೆ ಹಲ್ಲೆಯು ಸರ್ವ ವಿಧದಿಂದಲೂ ಆರಂಭವಾಗುವದಿತ್ತು. ಎರಡೂ ಪಕ್ಷಗಳಲ್ಲಿಯೂ ಸಾಕಷ್ಟು ವಿಷಮತೆಯು ಬೇರೂರಿತ್ತು.

ಆ ಕಿಲ್ಲೆಯ ದುರ್ದೈವ ಎಂಥದೋ ಏನೋ ನೋಡಿರಿ! ಗಾವೆನ್ ಮನೆತನದವರು ಅದರ ರಕ್ಷಣೆ ಮಾಡುತ್ತಿದ್ದರು. ಅದೇ ಗಾವೆನ್ ಮನೆತನದವರೇ ಈಗ ಅದರ ಧ್ವಂಸ ಮಾಡಬೇಕೆಂದು ಸಿದ್ಧವಾಗಿದ್ದರು. ನಿಜವಾಗಿಯೂ ಲ್ಯಾಂಟನೆಕ್‌ನು ಆ ಕಿಲ್ಲೆಯಲ್ಲಿ ಎಂದೂ ವಾಸಿಸುತ್ತಿದ್ದಿಲ್ಲಾದ್ದರಿಂದ

ಅವನಿಗೆ ಅವರ ಬಗ್ಗೆ ಆದರವೆನಿಸಿದ್ದಿಲ್ಲ. ಸುತ್ತೂ ಕಡೆಯಿಂದಲೂ ಮುತ್ತಿಗೆಯು ಹಾಕಲ್ಪಟ್ಟಿದ್ದರಿಂದ ಲ್ಯಾಂಟ್‌ನೆಕ್‌ನಿಗೆ ಈ ಕಿಲ್ಲೆಯಲ್ಲಿ ಆಶ್ರಯವನ್ನು ಪಡೆಯುವ ಪ್ರಸಂಗವು ಬಂದಿತ್ತು. ಪ್ರಸಂಗವು ತೀರ ವೈಮೇಲೆಯೇ ಬಂದುದಾದರೆ ಕಿಲ್ಲೆಯನ್ನು ಉಧ್ವಸ್ತಗೊಳಿಸುವ ವಿಚಾರದ ಸಿದ್ಧತೆಯಲ್ಲಿಯೇ ಅವನಿದ್ದನು. ಆದರೆ ಗಾವೆನ್‌ನಿಗೆ ಆ ಕಿಲ್ಲೆಯ ಬಗ್ಗೆ ಅತ್ಯಂತ ಆದರವಿತ್ತು.

ಕಿಲ್ಲೆಯ ಸೂಕ್ಷ್ಮ ಭಾಗವೆಂದರೆ ಆ ಪೂಲು. ಅಲ್ಲಿಯ ವಾಚನ ಗೃಹದಲ್ಲಿ ಹಳೆಯ ಕಾಗದ ಪತ್ರಗಳಿದ್ದವು. ಆ ಬದಿಯಿಂದ ಹಲ್ಲೆಯನ್ನು ಮಾಡಿದ್ದಾಗಿದ್ದರೆ ಪೂಲಿಗೆ ಬೆಂಕೀ ಹಚ್ಚಬೇಕಾಗುತ್ತಿತ್ತು. ಪೂಲಿಗೆ ಬೆಂಕೀ ಹಚ್ಚುವದೆಂದರೆ ಪೂರ್ವಜರ ಕಾಗದಪತ್ರಗಳಿಗೆ ಬೆಂಕೀ ಹಚ್ಚಿದಂತೆಯೇ. ಹೀಗೆ ಮಾಡುವದೆಂದರೆ ತಮ್ಮ ಪೂರ್ವಜರ ಮೇಲೇ ಕೈಮಾಡಿದಂತೆಯೇ ಆಗುತ್ತಿತ್ತೆಂದು ಗಾವೆನ್‌ನಿಗೆನಿಸಿತು. ಗಾವೆನ್‌ನು ಬಾಲ್ಯವನ್ನು ಈ ಕಿಲ್ಲೆಯಲ್ಲಿಯೇ ಕಳೆದಿದ್ದನು. ಆದ್ದರಿಂದ ಅದನ್ನು ಮುತ್ತಿ, ಮಣ್ಣುಗೂಡಿಸುವದೆಂದರೆ ಅವನಿಗೆ ಜೀವದ ಸುತ್ತು ಬಂದಿತ್ತು. ಅನುಚಿತವೂ ಎಂದು ಅವನು ಭಾವಿಸಿದ್ದನು. ಕೆಲಕೆಲವು ವಿಚಾರಗಳು ಭಾವನಾಮಯವಿರುತ್ತವೆಂಬದೇನು ಸುಳ್ಳಲ್ಲ. ಈ ಕಿಲ್ಲೆಯನ್ನು ನೋಡಿ ಗಾವೆನ್‌ನ ಅಂತಃಕರಣವು ತುಂಬಿ ಬಂದಿತು. ಆದ್ದರಿಂದ ಅವನು ಪೂಲಿನ ಕಡೆಯಿಂದ ಅದರ ಮೇಲೆ ಹಲ್ಲೆ ಮಾಡುವ ವಿಚಾರ ಬಿಟ್ಟನು. ಆ ಪೂಲಿನ ಮೇಲೆ ಹಲ್ಲೆಯಾಗಬಾರದೆಂದೂ, ಅಲ್ಲಿಂದ ಯಾರೂ ಓಡಿಹೋಗಬಾರದೆಂದೂ, ಅಲ್ಲೊಂದು ತೋಫುಖಾನೆಯ ಯೋಜನೆಯನ್ನು ಮಾಡಿದನು.

ಸಿಮೋರೆಡಿನ್‌ನು ಗಾವೆನ್ನನ ಯೋಜನೆಗಳಲ್ಲಿ ಯಾವರೀತಿಯಿಂದಲೂ ಅಡ್ಡಿಗಳನ್ನೊಡ್ಡಲಿಲ್ಲ. ಅವನ ಕಠೋರ ಮನೋವೃತ್ತಿಗೆ ಪುರಾಣ ವಸ್ತುಗಳ ಬಗ್ಗೆ ಪ್ರೇಮವೆನಿಸುತ್ತಿದ್ದಿಲ್ಲ. ಮನುಷ್ಯರ ವಿಷಯಕ್ಕೆಯೇ ದಯಬಾರದಂಥವನಿಗೆ ಕಟ್ಟಡದ ವಿಷಯದಲ್ಲಿ ದಯೆ ಬರುವದು ಅಸಾಧ್ಯವಾದ ಮಾತಾಗಿತ್ತು ಇಬ್ಬರ ಮನೋವೃತ್ತಿಗಳಲ್ಲಿ ಇಷ್ಟು ಭೇದವು ಒಡೆದು ತೋರುತ್ತಿದ್ದಿತು. ಸಿಮೋರೆಡಿನ್‌ನು ಗಾವೆನ್‌ನ ಈ ಮನೋದೌರ್ಬಲ್ಯ

ವೃತ್ತಿಯನ್ನು ಬದಲಾಯಿಸಲು ಯತ್ನ ಮಾಡೇ ಮಾಡುತ್ತಿದ್ದನು. ಆದರೂ ಸಿಮೋರೆಡಿನ್‌ನ ಅಂತರಂಗದಲ್ಲಿ ಈ ಕಿಲ್ಲೆಯ ಬಗ್ಗೆ ಭೀತಿಯುಂಟಾಗಿತ್ತು. ಯಾವ ಸ್ಥಳದಲ್ಲಿ ಕುಳಿತುಕೊಂಡು ಗಾವೆನ್‌ನಿಗೆ ತಾನು ಚಿಕ್ಕಂದಿನಲ್ಲಿ ಪುಸ್ತಕ ಓದಲು ಕಲಿಸಿದ್ದನೋ ಅಂಥ ಸ್ಥಳವನ್ನು ನೋಡಿ ಸಿಮೋರೆಡಿನ್ನನ ಅಂತಃಕರಣವು ಕರುಣಾಮಯವಾಯಿತು. "ನನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಯಾವ ಸ್ಥಳದಲ್ಲಿ ಗಾವೆನ್‌ನಿಗೆ ಓದು ಬರೆಯಲು ಕಲಿಸಿದೆನೋ ಅಂಥ ಸ್ಥಳಕ್ಕೆ ಬೆಂಕೀ ಹಚ್ಚಿ ಹಾಳು ಮಾಡುವದೇ" ಎಂಬ ವಿಚಾರದಿಂದ ಗಾವೆನ್‌ನಿಗೆ ತನ್ನ ಅಭಿಪ್ರಾಯದಂತೆ ವರ್ತಿಸಲು ಸಿಮೋರೆಡಿನ್ನನು ಅವಕಾಶಕೊಟ್ಟಿದ್ದನು. ಎರಡನೆಯ ಬದಿಯಿಂದಲೇ ಹಲ್ಲೆಯನ್ನು ಪ್ರಾರಂಭಿಸಲು ಅವನೇ ಅಪ್ಪಣೆಯನ್ನು ಕೊಟ್ಟನು. ಇಡೀ ರಾತ್ರಿಯೆಲ್ಲ ಉಭಯ ಪಕ್ಷಗಳಲ್ಲೂ ಸಿದ್ಧತೆಯು ಬಲು ಜೋರಿನಿಂದ ಸಾಗಿತ್ತು.

ಮೇಲಿನಂತೆ ಮಾತು ಕತೆ ಮುಗಿದ ಮೇಲೆ ಗಾವೆನ್‌ನು ತನ್ನ ಕೈಕೆಳಗಿನ ಅಧಿಕಾರಿಯಾದ ಗುಶೆಪ್‌ನನ್ನು ಕರೆಸಿದನು. ಗುಶೆಪ್‌ನಲ್ಲಿ ಸೇನಾಪತಿಯಾಗುವ ಯೋಗ್ಯತೆಯಿರಲಿಲ್ಲ ಆದರೂ ಅವನು ಶ್ರೇಷ್ಠ ತರಗತಿಯ ಸಿಪಾಯಿಯಾಗಿದ್ದನು. ಅವನು ನಂಬಿಗಸ್ಥನೂ, ಶೂರನೂ, ನಿರ್ಭಯನೂ, ಆಜ್ಞಾಧಾರಕನೂ ಆಗಿದ್ದನು. ಸುಲಭವಾಗಿ ತಿಳಿಯತಕ್ಕ ಸಂಗತಿಗಳು ಮಾತ್ರ ಅವನಿಗೆ ತಿಳಿಯುತ್ತಿದ್ದವು. ಬಹಳ ಆಳವಾಗಿ ವಿಚಾರವನ್ನು ಮಾಡುವ ಗೋಜಿಗೆ ಅವನು ಎಂದಿಗೂ ಹೋಗುತ್ತಿದ್ದಿಲ್ಲ. ಅವನ ಅಂತಃಕರಣವು ಅಷ್ಟೇ ಕಠೋರವಾಗಿತ್ತು. ಏನಾದರೂ ಮಾಡಿ ಅವನು ಕಾರ್‍ಯವನ್ನು ಎಂದಿಗೂ ಕೆಡಿಸುತ್ತಿದ್ದಿಲ್ಲ. ಅವನು ತೋರಿಸಿ ಕೊಟ್ಟ ಮಾರ್ಗದಿಂದ ಹೋಗುತ್ತಿದ್ದನು. ಅವನ ಮಾರ್ಗವು ಸರಳವಾದರೂ ಅಕುಂಚಿತವಾಗಿತ್ತು. ಗಾವೆನ್‌ನು 'ಗುಶಪ್‌ನೇ, ನಿಚ್ಚಣಿಕೆಯನ್ನು ತೆಗೆದುಕೊಂಡು ಬಾ' ಎಂದು ಹೇಳಿದನು.

"ಸೇನಾಪತಿ ಸಾಹೇಬರೇ, ನಿಚ್ಚಣಿಕೆಯು ನನ್ನ ಹತ್ತಿರವಿರುವದಿಲ್ಲ."

"ಒಂದು ನಿಚ್ಚಣಿಕೆಯು ಬೇಕೇ ಬೇಕು."

" ಹತ್ತುವದಕ್ಕಾಗಿಯೋ ? "

" ಅಲ್ಲ; ಪಾರಾಗಿ ಹೋಗುವದಕ್ಕಾಗಿ. "

ಚಣಹೊತ್ತು ವಿಚಾರಮಗ್ನನಾಗಿ ಗುಶೆಪ್ಪನು ' ಹಾಂ, ನನ್ನ ತಲೆಯಲ್ಲಿ ಬಂದಿತು. ಆದರೆ ಯಾವುದಕ್ಕಾಗಿ ನಿಚ್ಚಣಿಕೆಯು ಬೇಕಾಗಿ ದೆಯೋ ಅದು ಬಹಳ ಎತ್ತರವಾದದ್ದು ಬೇಕಲ್ಲವೇ ?'

" ಅಹುದು; ಕನಿಷ್ಠ ಪಕ್ಷಕ್ಕೆ ಮೂರು ಅಂತಸ್ತಿನಷ್ಟಾದರೂ ಎತ್ತರ ಇರಬೇಕು. ಆದರೆ ನಿನ್ನ ಹತ್ತಿರ ನಿಚ್ಚಣಿಕೆ ಏಕಿಲ್ಲ? "

" ತಮ್ಮ ವಿಚಾರವು ಈ ಬದಿಯಿಂದ ಮುತ್ತುವದಿಲ್ಲದ್ದರಿಂದ ನಿಚ್ಚ ಣಿಕೆಯನ್ನು ತರಲಿಲ್ಲ. "

" ಹಾಗಾದರೆ ಒಂದನ್ನು ಬೇಗನೆ ಸಿದ್ಧಗೊಳಿಸು. "

" ಇಷ್ಟು ಉದ್ದವಾದ ನಿಚ್ಚಣಿಕೆಯನ್ನು ಈ ಸಮಯದಲ್ಲಿ ಅವಸರ ದಿಂದ ಮಾಡುವದು ಕಠಿಣವಾದುದು. "

" ಹಾಗಿದ್ದರೆ ಸಣ್ಣ ಸಣ್ಣ ನಿಚ್ಚಣಿಕೆಗಳನ್ನು ಒಂದಕ್ಕೊಂದು ಜೋಡಿಸಿ ಕಟ್ಟು. "

" ಅವಾದರೂ ಬೇಕಲ್ಲ ! ಎಲ್ಲಿವೆ ? "

" ಶೋಧಿಸಿ ತೆಗೆದುಕೊಂಡು ಬಾ. ನಿಚ್ಚಣಿಕೆಯಂತೂ ಬೇಕೇ ಬೇಕು. "

" ಶೋಧಿಸುವದು ಅಶಕ್ಯವಾದುದು. ಯಾಕೆಂದರೆ ಹಳ್ಳಿಯ ಜನರು ಗಾಡಿಗಳನ್ನು ಮುರಿಯುತ್ತಾರೆ. ಪೂಲನ್ನು ಕೆಡವುತ್ತಾರೆ. ಅದರಂತೆ ನಿಚ್ಚಣಿಕೆಗಳನ್ನೂ ಸುಟ್ಟು ಹಾಕುತ್ತಾರೆ. ಇರಲಿ, ಜವನೆ ಹಳ್ಳಿಯಲ್ಲಿ ಒಬ್ಬ ಕಮ್ಮಾರನಿರುತ್ತಾನೆ. ಅವನ ಹತ್ತಿರವಿದೆಯೋ ಏನೋ ನೋಡು ತ್ತೇನೆ. "

" ಹಾಗಿದ್ದರೆ ಈಗಲೇ ಹೊರಡು. ಒಂದು ನಿಮಿಷವನ್ನೂ ಕಳೆಯ ಬೇಡ. "

" ನಿಚ್ಚಣಿಕೆ ಯಾವಾಗ ಬೇಕು ? "

" ನಾಳೆ ಇಷ್ಟೊತ್ತಿಗೆ. "

" ನಾನು ಈಗಿಂದೀಗಲೇ ಜನರನ್ನು ಕಳಿಸುತ್ತೇನೆ. ನಿಚ್ಚಣಿಕೆಯು ಬರುವದು "

" ಒಳ್ಳೇದು. ಬೇಗನೆ ಹೊರಡು. "

ಹತ್ತು ನಿಮಿಷದ ನಂತರ ಗುಶೆಪ್‍ನು ಬಂದು ನಿಚ್ಚಣಿಕೆಯನ್ನು ತರಲು ಜನರನ್ನು ಕಳಿಸಲಾಗಿದೆ ಎಂದು ಗಾವೆನ್‍ನಿಗೆ ಹೇಳಿದನು. ಆ ಮೇಲೆ ಗಾವೆನ್‍ನೂ, ಸಿಮೋರೆಡಿನ್‍ನೂ ತಾವು ಹಲ್ಲೆಯನ್ನು ಮಾಡುವ ಸ್ಥಳಗಳನ್ನು ಗೊತ್ತುಮಾಡಿಕೊಂಡರು. ಗಾವೆನ್ ಮತ್ತು ಗುಶೆಪ್‍ನು ಅಡವಿಯೊಳಗಿನ ಬದಿಯನ್ನು ತಮ್ಮ ಕಡೆಗೆ ತೆಗೆದುಕೊಂಡರು. ಇತ್ತ ಸಿಮೋರೆಡಿನ್‍ನು ತೋಫುಖಾನೆಯ ಸಿದ್ಧತೆಯನ್ನು ಮಾಡಿಕೊಂಡು ಪ್ರಸಂಗ ಬಿದ್ದರೆ ಒಮ್ಮೆಲೆ ತೋಫು ಹಾರಿಸುವ ವ್ಯವಸ್ಥೆಯನ್ನು ಮಾಡಿಕೊಂಡನು. ಹೊರಗೆ ಹಲ್ಲೆಯ ಸಿದ್ಧತೆ ನಡೆದಿತ್ತು. ಒಳಗೂ ಅವರು ತಮ್ಮ ಸಂರಕ್ಷಣೆಯ ವ್ಯವಸ್ಥೆಯನ್ನು ಮಾಡಿಕೊಳ್ಳುತ್ತಿದ್ದರು. ಶತ್ರುಗಳ ಸೈನ್ಯವು ಸುರಂಗವನ್ನು ಹೊಡೆದು ದೊಡ್ಡ ಕಿಂಡಿಯನ್ನು ಕೆಡವಿಯೇ ಬಿಟ್ಟಿತ್ತು. ಈ ಕಿಂಡಿಯ ಮೇಲೆಯೇ ತೋಫಿನ ಹೊಡತ ಬಿದ್ದು ಅದು ಇನ್ನಷ್ಟು ದೊಡ್ಡದಾಗಿತ್ತು.

ಈ ಕಿಂಡಿಯೊಳಗಿಂದಲೆ ಕೆಳಗಿನ ಅಂತಸ್ತಿಗೆ ಹೋಗುವ ದಾರಿಯಿತ್ತು. ಈ ಅಂತಸ್ತೆಂದರೆ ದೊಡ್ಡದೊಂದು ದಿವಾಣಖಾನೆಯಿದ್ದು, ಮಧ್ಯದಲ್ಲಿ ದೊಡ್ಡ ಕಂಬವಿತ್ತು. ಅದರ ಮೇಲೊಂದು ಕೋಣೆ. ಈ ಕೋಣೆಯು ದೊಡ್ಡದಿದ್ದು ಅಗಲಳತೆಯಲ್ಲಿ ೪೦ ಫೂಟುಗಳಿಗಿಂತ ಕಡಮೆ ಇರಲಿಲ್ಲ. ಈ ಕೋಣೆಯೊಳಗಿಂದಲೆ ಕತ್ತಲೆ ಕೋಣೆಗೆ ಹೋಗುವ ಮಾರ್ಗವಿತ್ತು. ಇದರ ಗೋಡೆಯಲ್ಲಿಯೇ ಸುತ್ತು ಮುತ್ತು ಹೋಗಲು ಪಾವಟಿಗೆಗಳಿದ್ದವು. ಲ್ಯಾಂಟ್‍ನೆಕ್‍ನ ನೇತೃತ್ವದಲ್ಲಿ ಸಂರಕ್ಷಣೆಯ ವ್ಯವಸ್ಥೆಯು ಭದ್ರವಾಗಿಯೇ ನಡೆದಿತ್ತು.

ಲ್ಯಾಂಟ್‍ನೆಕ್‍ನು ೮೦ ವರುಷದವನಾಗಿದ್ದರೂ ಅವನ ಮೈಯಲ್ಲಿ ದೊಡ್ಡ ದೊಡ್ಡ ಪಟ್ಟಣಗಳನ್ನು ಸಂರಕ್ಷಿಸುವ ಸಾಮರ್ಥ್ಯವು ಇನ್ನೂ

ಇತ್ತು. ಕಿಲ್ಲೆಯೊಳಗೆ ಸಿಕ್ಕುಬಿದ್ದ ಸೈನಿಕರಿಗೆ ಲ್ಯಾಂಟ್‌ನೆಕ್‌ನೇ ಧೈರ್ಯ ಹೇಳುತ್ತಿದ್ದನು ಅವನೂ ಸ್ವತಃ ಕಲ್ಲು ಮಣ್ಣು ಹೊರುತ್ತಿದ್ದನು. ಸೈನಿಕರೊಡನೆ ಸೈನಿಕರಂತೆ ಕೆಲಸಮಾಡುತ್ತಿರುವಾಗ ಅವನು ಸಲುಗೆಯಿಂದ ವರ್ತಿಸುತ್ತಿದ್ದನು. ಆದರೂ ಅವನು ತನ್ನ ವರ್ಚಸ್ಸನ್ನು ಕಾದುಕೊಂಡಿದ್ದನು. ತಾನು ಅಪ್ಪಣೆ ಮಾಡಿದುದಕ್ಕೆ ಪ್ರತಿಯಾಗಿ ಯಾರಾದರೂ ಏನಾದರೂ ಆಡಿದರೆ ಅವನಿಗೆ ಸಹನವಾಗುತ್ತಿದ್ದಿಲ್ಲ. 'ನಿಮ್ಮಲ್ಲಿಯ ಅರ್ಧದಷ್ಟು ಜನರು ನನ್ನ ವಿರುದ್ಧ ಬಂಡೆದ್ದರೂ ಉಳಿದರ್ಧ ಜನರ ನೆರವಿನಿಂದ ನಿಮ್ಮನ್ನೂ ಹತ್ತಿಕ್ಕಿ ಕಿಲ್ಲೆಯನ್ನು ಸಂರಕ್ಷಿಸುವೆನು' ಎಂದು ಅವನು ಅವರಿಗೆ ಹೇಳುತ್ತಿದ್ದನು. ಈ ಪ್ರಕಾರವಾಗಿ ಲ್ಯಾಂಟ್‌ನೆಕ್‌ನು ಬುರುಜಿನ ಸಂರಕ್ಷಣೆಯಲ್ಲಿ ತೊಡಗಿರುವಾಗ ಇಮಾನಸನು ಪೂಲಿನ ಕಡೆಯ ಸಂರಕ್ಷಣೆಯ ವ್ಯವಸ್ಥೆಯಲ್ಲಿ ತೊಡಗಿದ್ದನು. ಹಲ್ಲೆಯಾಗುವ ಸಂಭವವಿದ್ದುದರಿಂದ ವಾಚನಾಲಯ ಹತ್ತಿರವಿಟ್ಟಿದ್ದ ನಿಚ್ಚಣಿಕೆಯನ್ನು ಒಳಗೊಯ್ಯಲಾಯಿತು. ಆದ್ದರಿಂದಲೆ ಗಾವೆನ್‌ನಿಗೆ ಹೊಸನಿಚ್ಚಣಿಕೆಯು ಬೇಕಾಗಿತ್ತು. ವಾಚನಾಲಯದ ಕಿಡಿಕಿಗೆ ಕಬ್ಬಿಣದ ಸಳಿಗಳಿರಲಿಲ್ಲ. ಕಿಡಿಕಿಯು ಬಲು ಎತ್ತರವಾಗಿತ್ತು. ಇಮಾನಸನು ತನ್ನ ಕೈ ಕೆಳಗೆ ಕುಶಲರಾದ ಮೂವರು ಕೆಲಸಗಾರರನ್ನು ತೆಗೆದುಕೊಂಡಿದ್ದನು. ಇಮಾನಸನು ಕೈಯಲ್ಲಿ ಕಂದೀಲನ್ನು ಹಿಡಿದುಕೊಂಡು ಕಬ್ಬಿಣದ ಬಾಗಿಲವನ್ನು ತೆರೆದನು. ಮೂರೂ ಅಂತಸ್ತುಗಳನ್ನು ಚನ್ನಾಗಿ ಪರೀಕ್ಷಿಸಿ ನೋಡಿದನು. ಮೇಲಿನ ಅಂತಸ್ತು ಹುಲ್ಲಿನಿಂದ ತುಂಬಿದ್ದುದು ಅವನಿಗೆ ಕಂಡುಬಂದಿತು. ಕೆಳಗಿನ ಅಂತಸ್ತಿನಲ್ಲಿ ಬೆಂಕಿ ಹಚ್ಚುವದಕ್ಕಾಗಿ ಡಾಂಬರಿನ ಪಿಪಾಯಿಗಳು ಸಿದ್ಧವಾಗಿದ್ದವು. ಪ್ರಸಂಗ ಬಿದ್ದರೆ ಇಡೀ ಕಿಲ್ಲೆಯನ್ನು ಧ್ವಂಸಗೊಳಿಸುವ ಸರ್ವ ಸಿದ್ಧತೆ ಮಾಡಿಕೊಂಡು ಕುಳಿತಿದ್ದನು. ನೆಲದ ಮೇಲೆ ಡಾಂಬರನ್ನು ಸುರುವಿಸಿದನು. ನಡುವಿನ ಅಂತಸ್ತಿನಲ್ಲಿಯೂ ಸುತ್ತೂ ಕಡೆಗೆ ಡಾಂಬರು ಚೆಲ್ಲಿಸಿ ನಡುವೆ ಮೂರೂ ಮಗುಗಳ ತೊಟ್ಟಿಲುಗಳನ್ನು ಮೆಲ್ಲನೆ ತಂದಿರಿಸಿದನು. ಆ ಮೂರು ಮಗುಗಳೆಂದರೆ ರೇನಿಜಿನ್, ಗ್ರಾಸ್‌ಅಲೈನ್ ಮತ್ತು ಜಾರ್ಜೆಟ್. ಅವುಗಳಿಗೆ ಗಾಢವಾದ ನಿದ್ರೆ ಹತ್ತಿತ್ತು.

ಆ ತೊಟ್ಟಿಲುಗಳು ತೀರ ಸಾಮಾನ್ಯವಾಗಿದ್ದವು. ಆ ತೊಟ್ಟಿಲುಗಳೊಳಗಿಂದ ಪರರ ನೆರವಿಲ್ಲದೆ ಹೊರಗೆ ಬರಲು ಸಾಧ್ಯವಿತ್ತು. ಪ್ರತಿಯೊಂದು ತೊಟ್ಟಿಲದ ಹತ್ತಿರ ಗಂಜಿಯ ಬಟ್ಟಲ ಮತ್ತು ಚಮಚೆಗಳನ್ನು ಇಡಲಾಗಿತ್ತು. ಹೊರಗಿದ್ದ ನಿಚ್ಚಣಿಕೆಯನ್ನು ತಂದು ಗೋಡೆಗೆ ತೂಗು ಹಾಕಲಾಯಿತು. ಇಮಾನಸನು ಆ ಮೂರೂ ತೊಟ್ಟಿಲುಗಳನ್ನು ಈ ನಿಚ್ಚಣಿಕೆಗೆ ಹತ್ತಿಯೇ ಇಟ್ಟನು. ಹವೆಯು ಆಡುತ್ತಿದ್ದರೆ ಒಳಿತೆಂದು ಭಾವಿಸಿ ಅವನು ಆರೂ ಕಿಡಕಿಗಳನ್ನು ತೆರೆದಿಟ್ಟನು. ಬೇಸಿಗೆಯ ರಾತ್ರಿಯಾದ್ದರಿಂದ ಬಹಳ ಸೆಕೆಯಾಗುತ್ತಿತ್ತು. ನಕ್ಷತ್ರಗಳು ಮಿನುಗುತ್ತಿದ್ದವು. ಆ ಕಟ್ಟಡದ ಮುಂಬದಿಗೆ ಹಚ್ಚಿದ್ದ ಬಳ್ಳಿಯು ಒಣಕಲಾಗಿತ್ತು. ಅದು ಇಮಾನಸನ ಕಣ್ಣಿಗೆ ಬಿದ್ದಿತು. ಈ ಬಳ್ಳಿಯ ಒಂದು ಟೊಂಗೆಗೆ ಹೂಗಳಿದ್ದವು. ಈ ಬಳ್ಳಿಯು ಹೀಗೆಯೇ ಇರಲೆಂದು ಇಮಾನಸನು ನಿಶ್ಚಯಿಸಿ, ತನ್ನ ದೃಷ್ಟಿಯನ್ನು ಸುತ್ತೂ ಕಡೆಗೂ ಬೀರಿ, ಆ ನಾಲ್ವರೂ ಬುರುಜಿನ ಕಡೆಗೆ ಹೊರಳಿದರು. ಇಮಾನಸನು ಆ ಕಬ್ಬಿಣದ ಬಾಗಿಲಿಗೆ ಎರಡು ಕೀಲಗಳನ್ನು ಜಡಿದನು. ಪ್ರಸಂಗವು ಮೈಮೇಲೆ ಬಂದರೆ ಉತ್ತಮ ರೀತಿಯಿಂದ ಬೆಂಕೀ ಹಚ್ಚಲು ಆಗಿರುವ ಅನುಕೂಲತೆ ಕಂಡು ಇಮಾನಸನಿಗೆ ಸಮಾಧಾನವೆನಿಸಿ ತಲೆದೂಗಿದನು. ಅವನು ಬುರುಜಿನಿಂದ ಪೂಲಿನವರೆಗೆ ಬಂದು ಬಿರುಕನ್ನು ತೋಡಿ, ಒಂದು ತುದಿಯಿಂದ ಇನ್ನೊಂದು ತುದಿಯನ್ನು ಮುಟ್ಟುವಂಥ ಬತ್ತಿಯನ್ನು ಜ್ವಾಲಾಗ್ರಾಹೀ ಪದಾರ್ಥಗಳಿಗೆ ತಗಲುವಂತೆ ಇರಿಸಿದನು. ಬುರುಜಿನ ಹತ್ತಿರವಿರುವ ಬತ್ತಿಗೆ ಕೊಳ್ಳೀ ಕೊಟ್ಟರೆ ಅರ್ಧ ತಾಸಿನೊಳಗಾಗಿಯೇ ವಾಚನಾಲಯವು ಸುಟ್ಟು ಭಸ್ಮವಾಗದಿರದೆಂದು ಇಮಾನಸನಿಗೆನಿಸುತ್ತಿತ್ತು. ಇಮಾನಸನು ಮತ್ತೊಮ್ಮೆ ಎಲ್ಲ ನಿರೀಕ್ಷಣೆಯನ್ನು ಚೆನ್ನಾಗಿ ಮಾಡಿ, ಕೀಲೀ ಕೈಗಳನ್ನು ಲ್ಯಾಂಟ್‌ನೆಕ್‌ನ ಕೈಗೆ ಒಯ್ದುಕೊಟ್ಟನು. ಶತ್ರುಗಳ ಚಟುವಟಿಕೆಗಳ ಮೇಲೆ ಕಣ್ಣಿಡುವದು ಅವಶ್ಯವಾದ್ದರಿಂದ ತನ್ನ ಕೊಂಬನ್ನು ತೆಗೆದುಕೊಂಡು, ಬುರುಜಿನ ಮಾರ್ಗವನ್ನು ಹಿಡಿದು ಹೊರಟನು. ಇಮಾನಸನ

ತನ್ನ ಕಣ್ಣುಗಳನ್ನು ಅತ್ತಿತ್ತ ತಿರುಗಿಸುತ್ತ ಬಂದೂಕಿಗಾಗಿ ಕಾಡತೂಸುಗಳ ಸಿದ್ಧತೆ ಮಾಡಿಕೊಳ್ಳತೊಡಗಿದನು.

ಸೂರ್ಯೋದಯವಾಯಿತು. ಕೈಯಲ್ಲಿ ಕತ್ತಿ, ಬಗಲಿಗೆ ಬಂದೂಕು ಹಿಡಿದುಕೊಂಡಂಥ ಸನ್ನದ್ಧವಾದ ಸೈನಿಕರ ಎಂಟು ತುಂಡುಗಳು ಹೊರಗೆ ಸ್ಪಷ್ಟವಾಗಿ ಕಂಡವು. ಒಳಗೆ ಮೂರು ಮಗುಗಳು, ಸುಡುವ ಸಾಮಗಿಗಳು ಮತ್ತು ೧೯ ಜನರು ಮಾತ್ರ ಇದ್ದರು.



## ೧೩.

ಹೊತ್ತೇರುತ್ತಲೆ ಮೂರೂ ಹುಡುಗರೂ ಎಚ್ಚತ್ತವು. ಹೂಗಳ ಪಕಳಿಗಳು ಪಟಪಟನೆ ಬಿಚ್ಚುವಂತೆ ಆ ಹಸುಗೂಸುಗಳು ಕಣ್ಣು ತೆರೆದವು. ೨೧ ತಿಂಗಳದ ಎಳೆಗೂಸು—ಜಾರ್ಜೆಟ್ ಕಣ್ತೆರೆದು ಹುಳು ಹುಳು ಸುತ್ತುಮುತ್ತು ನೋಡತೊಡಗಿ, ತೊಟ್ಟಿಲದಲ್ಲಿ ಎದ್ದು ಕುಳಿತು ಏನೇನೋ ಶಬ್ದ ಮಾಡತೊಡಗಿತು. ಸೂರ್ಯನ ಆರಕ್ತ ಕಿರಣಗಳ ಬೆಳಕಿನಿಂದ ಆ ಮಗುವಿನ ಮುಖವು ಬಲು ಮನೋಹರವಾಗಿ ಕಾಣುತ್ತಿತ್ತು. ಉಳಿದೆರಡು ಮಗುಗಳು ಏಳುವದರಲ್ಲಿದ್ದವು. ಮೂರೂ ಮಗುಗಳ ಮೈಮೇಲಿನ ಅಂಗಿಗಳೆಲ್ಲವೂ ಹರಿದು ಚಿಂದಿಯಾಗಿದ್ದವು. ಹುಡುಗರು ತಮ್ಮಷ್ಟಕ್ಕೆ ತಾವೇ ಹೇಗೊ ಬೆಳೆಯುತ್ತಿದ್ದವು. ಅವುಗಳ ಆರೈಕೆಯನ್ನು ಮಾಡುವವರಾರು? ಸಿಪಾಯರು ಹೊಟ್ಟೆಗೊಂದಿಷ್ಟು ಗಂಜಿಯನ್ನು ಮಾತ್ರ ಹಾಕುತ್ತಿದ್ದರು. ಇದೇ ಅವುಗಳ ಪುಣ್ಯವಾಗಿತ್ತು. ಅಲ್ಲಿರುವವರೆಲ್ಲರೂ ಅವುಗಳ ಯಜಮಾನರಾಗಿದ್ದರು. ತಂದೆಮಾತ್ರ ಯಾರೂ ಆಗಿರಲಿಲ್ಲ. ತಾಯಿಯ ಮಾತಂತೂ ಕೇಳಲೇ ಬಾರದು.

ಜಾರ್ಜೆಟ್‌ಳ ಮುದ್ದು ಮಾತುಗಳು ಆರಂಭವಾಗಿದ್ದವು. ಪಕ್ಷಿಗಳು ಹಾಡುತ್ತಿದ್ದವು ಹುಡುಗಿಯು ಮಾತನಾಡುತ್ತಿತ್ತು; ಎರಡೂ ಒಂದೇ ಆಗಿದ್ದವು. ಈ ಹಾಡೂ ಮಾತೂ ಅಸ್ಪಷ್ಟವಾಗಿದ್ದರೂ ಅರ್ಥಪೂರ್ಣವಾಗಿದ್ದವು. ಹುಡುಗರ ಮುಂದೆ ಕತ್ತಲುಗವಿದ ಭವಿಷ್ಯತ್ತು ಕಾದು ಕುಳಿತಿತ್ತು ಸಣ್ಣ ಹುಡುಗರ ಕಂಠದಿಂದ ಹೊರಹೊಮ್ಮುವ ಶಬ್ದಗಳು ಮನುಷ್ಯನ ಆತ್ಮದ ಸಹಜೋದ್ಗಾರಗಳಾಗಿದ್ದು ಅವೇ ಜಗತ್ತಿನೊಳಗಿನ ಅತ್ಯಂತ ಉತ್ತಮವಾದ, ಪವಿತ್ರವಾದ ಗಾಯನಗಳಾಗಿವೆ. ಜೀವನ ಕ್ರಮದ ಮೊದಲ ಮೆಟ್ಟಲದ ಮೇಲೆ ನಿಂತುಕೊಂಡು ಈ ಎಳೆ ಜೀವಗಳು ಆಯುಷ್ಯವು ಬೇಡವೇ ಬೇಡವೆಂದು ಹಾಡುತ್ತಿದ್ದವೋ ಏನೋ ಯಾರು ಬಲ್ಲರು! ನಿಜವಾಗಿಯೂ ಈ ದೃಶ್ಯವು ಹೃದಯಭೇದಕವಾಗಿತ್ತು. ಈ ಅಜ್ಞಾತ ಮಗುಗಳು ಅನಂತ ಕಾಲದ ಕಡೆಗೆ ನೋಡುತ್ತ ಜೀವ ಸೃಷ್ಟಿಯ ಮೇಲಾಗದ ಪರಿಣಾಮವು ತಮಗೆ ಸಂಭವಿಸಿದೆಯೆಂಬುದನ್ನು ಸ್ವೀಕರಿಸುತ್ತಲಿವೆಯೋ ಏನೋ ಎಂಬಂತೆ ಕಾಣುತ್ತಿದ್ದವು. ದೈವಗೇಡಿಗಳಾದ ಮೂರೂ ಮಗುಗಳೂ ಸಂಕಟದಲ್ಲಿ ಸಿಕ್ಕು ಬಿದ್ದಿದ್ದವು. ಇದೊಂದು ತರದ ವಿಶ್ವಾಸಘಾತವೇ ಅಲ್ಲದೆ ಮತ್ತೇನು? ಮಗುಗಳ ಮುತ್ತಿನಂಥ ಮುದ್ದಿನ ಮಾತುಗಳ ಮುಂದೆ ದೊಡ್ಡ ದೊಡ್ಡ ಭಾಷಣಗಳ ಬೆಲೆಯಾದರೂ ಏನು ! ಎಂದೆನಬೇಕಾಗುವದು.

ಮಗುಗಳ ಮುದ್ದು ಬೀರುವ ಗಾಯನಕ್ಕೆ ತಾಲಸ್ವರಗಳಿಲ್ಲ. ಶಾಬ್ದಿಕ ಅವಯವಗಳೂ ಇರುವದಿಲ್ಲ. ಆದರೂ ಅದೊಂದು ಭಾಷೆ—ಬಾಲಭಾಷೆ. ಅವು ಸ್ವರ್ಗದಲ್ಲಿ ಆರಂಭವಾಗುತ್ತವೆ; ಕೊನೆ ಪೃಥ್ವಿಯ ಮೇಲೆ ಆಗುವದಿಲ್ಲ. ಜನ್ಮ ಧರಿಸುವ ಮೊದಲೇ ಅವುಗಳ ಮಾತು ಮೊಳೆಯುತ್ತದೆ; ಆದರೆ ಅದರ ಕೊನೆಯಾಗಬೇಕಾದರೆ ಸಪ್ತಲೋಕಗಳಾಚೆಗೆ ಹೋಗಬೇಕಾಗುತ್ತದೆ. ಹುಡುಗರು ದೇವಸ್ವರೂಪದಲ್ಲಿರುವಾಗ ಏನು ಮಾತನಾಡುತ್ತಿರುವವೋ ಅವೇ ಪಂಚಭೂತಗಳಲ್ಲಿ ಲೀನವಾದಾಗ ಏನು ಮಾಡಬಹುದು ಎಂಬುದರ ಪ್ರತಿಧ್ವನಿಯು ಈ ಮುದ್ದು ಮಾತುಗಳಿಂದ ಪ್ರತಿಸ್ಫುಟಿಸುತ್ತಿರುತ್ತದೆ. ಮಗುಗಳ ಮಧುರ ಮಾತುಗಳಲ್ಲಿ ಭೂತ, ಭವಿಷ್ಯಕಾಲಗಳ

ಮಿಶ್ರಣವಿರುತ್ತದೆ. ಈ ಮಾತುಗಳಲ್ಲಿ ಈಶ್ವರನ ಅಸ್ತಿತ್ವವೂ, ಆತ್ಮನ ಅನಂತತೆಯೂ ಮತ್ತು ದೈವದ ಅಗಮ್ಯತ್ವವೂ ಸಮಪ್ರಮಾಣದಲ್ಲಿ ಹೊಂದಿಕೊಂಡಿರುತ್ತವೆ. ಈ ಹಸುಗೂಸಿನ ಮಾತಿನಲ್ಲಿ ದುಃಖಕಾರಕವಾದುದೇನಿರಲಿಲ್ಲ. ಆದರ ಪುಟ್ಟ ಮುಖದಲ್ಲಿ ನಗೆಯು ಕಳೆಯಿತ್ತು ಅದರ ನಗೆಯಿಂದ ಅಂದಿನ ಪ್ರಭಾತವು ಗಂಭೀರತೆಯನ್ನು ತಾಳತೊಡಗಿತ್ತು. ನಂತರ ನಾಲ್ಕು ವರುಷದ ರೇನೀಜೀನ ಎದ್ದಿತು. ಅದು ತೊಟ್ಟಿಲದಿಂದ ಚಟಕ್ಕನೆ ಜಿಗಿದು ತಿನ್ನುವ ಪದಾರ್ಥವಿದ್ದಲ್ಲಿಗೆ ತೆರಳಿತು. ಮೂರನೆಯದೂ ಚಮಚೆಯ ಸಪ್ಪಳವನ್ನು ಕೇಳಿ ಎಚ್ಚತ್ತಿತು. ಅವಕ್ಕೆ ಮೂರು ವರುಷಗಳಾಗಿದ್ದವು. ಅದು ಎದ್ದು ತಿಂಡಿಯ ಬಟ್ಟಲವನ್ನು ತೆಗೆದುಕೊಂಡು ತೊಟ್ಟಿಲದಲ್ಲಿಯೇ ಕುಳಿತು ತಿನ್ನತೊಡಗಿತು. ಹಿರಿಯ ಹುಡುಗನು ಬಟ್ಟಲದಲ್ಲಿಯದೆಲ್ಲವನ್ನೂ ತಿಂದು, ಬಟ್ಟಲವನ್ನೂ ನೆಕ್ಕಿದನು. ಎಲ್ಲವನ್ನು ನೆಕ್ಕಿದ ಮೇಲೆ ಡೌಲಿನಿಂದ 'ನಾನು ಪಾಯಸವನ್ನು ತಿಂದೆನು' ಎಂದೆಂದನು. ಅದನ್ನು ಕೇಳಿಕೊಂಡು ಆ ಪುಟ್ಟ ಹುಡುಗಿಯು 'ನಂಗ್ ಪಾಯ್ಸ' ಎಂದೆಂದಿತು. ಇಬ್ಬರೂ ಅಣ್ಣಂದಿರು ತಿಂದ ಮೇಲೆ ಅದು ತಿನ್ನತೊಡಗಿತು. ಅದು ತಿನ್ನುತ್ತಿರುವಾಗ ಎಷ್ಟೋ ಸಾರೆ ಚಮಚೆಯನ್ನು ಕಿವಿಯ ಕಡೆಗೆ ಒಯ್ಯುತ್ತಿತ್ತು; ಮೂಗಿಗೂ ತಿನಿಸುತ್ತಿತ್ತು. ಒಮ್ಮೊಮ್ಮೆ ಚಮಚೆಯನ್ನು ಚೆಲ್ಲಿಕೊಟ್ಟು ಬೆರಳಿನಿಂದ ಸೀಪುತ್ತಿತ್ತು. ಹೀಗೆ ಮೂರೂ ಹುಡುಗರು ತಮ್ಮ ನ್ಯಾರಿಯನ್ನು ಮುಗಿಸಿದವು.

ಅಷ್ಟರಲ್ಲಿಯೇ ಒಮ್ಮಿಂಮೊಮ್ಮೆ ಅರಣ್ಯದ ಕಡೆಯಿಂದ ಕರ್ಕಶವಾದ ವಾದ್ಯಧ್ವನಿಯು ಕೇಳಬಂದಿತು. ಅದಕ್ಕೆ ಬುರುಜಿನ ಬದಿಯಿಂದ ಕಹಳೆಯು ಉತ್ತರವನ್ನಿತ್ತಿತು. ಹೀಗೆ ಉತ್ತರ, ಪ್ರತ್ಯುತ್ತರಗಳು ನಡೆದ ಮೇಲೆ ಕೆಳಗಿನ ಜನರು ಅರಣ್ಯದಲ್ಲಿಯ ಒಂದು ದಿಬ್ಬದ ಮೇಲೆ ನಿಂತುಕೊಂಡು 'ಇಂದು ಸೂರ್ಯಾಸ್ತದೊಳಗಾಗಿ ಶರಣು ಬಾರದಿದ್ದರೆ ನಾವು ಹಲ್ಲೆಯನ್ನು ಆರಂಭಿಸುವೆವು' ಎಂದು ಕೂಗಿದರು.

ಆದಕ್ಕೆ ಬುರುಜಿನ ಮೇಲಿನವರು 'ಒಳ್ಳೇದು' ಹಲ್ಲೆಯನ್ನು ಮಾಡಿರಿ' ಎಂದು ಉತ್ತರವನ್ನಿತ್ತರು.

ಕೆಳಗಿನಿಂದ ಮತ್ತೆ 'ಕೊನೆಯ ಎಚ್ಚರಿಕೆಯೆಂದು ತೋಘು ಹಾರಿಸಲ್ಪಡುವದು. ಅಲ್ಲಿಂದ ಮುಂದೆ ಅರ್ಧ ತಾಸಿನಲ್ಲಿ ಹಲ್ಲೆ ಆರಂಭವಾಗುವದು' ಎಂಬ ಶಬ್ದವು ಹೊರಟಿತು.

"ಮಾಡಿರಿ ಹಲ್ಲೆಯನ್ನು" ಎಂದು ಮೇಲಿನಿಂದ ಉತ್ತರ ಬಂದಿತು.

ಆ ಮಗುಗಳಿಗೆ ಈ ಭಾಷಣವು ಕೇಳಬರಲಿಲ್ಲ. ಆದರೆ ಆ ವಾದ್ಯಗಳ ಧ್ವನಿಯು ಅವುಗಳಿಗೆ ಕೇಳಿಸದಿರಲಿಲ್ಲ. ಮೊದಲನೆಯ ಸಪ್ಪಳ ಕೇಳಿಸಿದೊಡನೆಯೆ ಜಾರ್ಜೆಟ್‌ಳು ತಿನ್ನುವದನ್ನು ನಿಲ್ಲಿಸಿತು. ಕಹಳೆಯ ಕೂಗು ಕೇಳಿಸಿದಾಗ ಚಮಚೆಯನ್ನು ಬಟ್ಟಲದಲ್ಲಿ ಚೆಲ್ಲಿಕೊಟ್ಟಿತು. ಹುಡುಗರ ಲಕ್ಷ್ಯವು ಮಾತ್ರ ಅದರ ಕಡೆಗಿರಲಿಲ್ಲ. ಅವರ ಲಕ್ಷ್ಯವು ಅಲ್ಲಿ ಸರಿಯುತ್ತಿರುವ ಒಂದು ಹುಳದ ಕಡೆಗೆ ಹೋಗಿತ್ತು.

'ಈ ಹುಳವನ್ನು ಕೊಂದು ಹಾಕುತ್ತೇನೆ' ಎಂದು ರೇನೀ ಅನ್ನಲಾಗಿ 'ಪಾಪ! ಬೇಡ' ಎಂದು ಗ್ರಾಸ್ ಆ್ಯಲನ್ನನೆಂದನು. ಇಬ್ಬರೂ ಆ ಹುಳವನ್ನು ನೋಡುತ್ತ ನಿಂತುಕೊಂಡರು. ಅಷ್ಟರಲ್ಲಿ ಹುಡುಗಿಯ ಲಕ್ಷ್ಯವು ಅಣ್ಣಂದಿರು ಏನು ಮಾಡುತ್ತಿರುವರೆಂಬದರ ಕಡೆಗೆ ಸೆಳೆಯಿತು. ಅವರು ಸ್ವಲ್ಪ ದೂರದಲ್ಲಿದ್ದರು. ಅಲ್ಲಿಯ ವರೆಗೆ ಹೋಗಲು ಅದಕ್ಕೆ ಸಾಧ್ಯವಿರಲಿಲ್ಲ. ದಾರಿಯಲ್ಲಿ ಹಳೆಯ ಕಾಗದಗಳ ಹೊರೆಗಳು, ಬರಿ ಪೆಟ್ಟಿಗೆಗಳು, ಪುಸ್ತಕಗಳು ಮೊದಲಾದ ಸಾಮಾನುಗಳಿದ್ದವು. ಅವೆಲ್ಲ ಸಾಮಾನುಗಳನ್ನು ದಾಟಿ ಹೋಗುವದೆಂದರೆ ಅದಕ್ಕೆ ಬಲು ಕಷ್ಟದಾಯಕವಿತ್ತು. ಆದರೂ ಅದು ಮೊದಲು ತೊಟ್ಟಿಲದಿಂದ ಕೆಳಗಿಳಿಯಿತು. ಒಂದೊಂದೇ ಸಾಮಾನು ದಾಟುತ್ತ ಅದು ಮೆಲ್ಲಗೆ ಅಣ್ಣಂದಿರಿದ್ದ ಕಡೆಗೆ ಸಾಗಿತು. ಆದರೆ ನಡುವೆ ನಿಚ್ಚಣಿಕೆಯೊಂದು ಅಡ್ಡವಾಗಿ ಬಿದ್ದುಕೊಂಡಿತ್ತು. ಅದನ್ನು ಸಾಹಸದಿಂದ ದಾಟುವಾಗ ಎರಡು ಮೂರು ಭಾರಿ ಬಿದ್ದಿತು. ಆದರೂ ಅದು ಸಾವರಿಸಿಕೊಳ್ಳುತ್ತ ಸಾವಕಾಶವಾಗಿ ಮುಂದೆ ಮುಂದೆ ಸರಿಯುತ್ತ ಅಣ್ಣಂದಿರಿದ್ದ ಸ್ಥಳವನ್ನು ತಲುಪಿತು.

ರೇನಿಜೀನ್ ಆ ಹುಳುವು ಯಾವುದಿರಬಹುದು ಎಂಬ ಗಹನ ವಿಚಾ ರದಲ್ಲಿ ಮಗ್ನವಾಗಿತ್ತು. ಸಂಶೋಧನೆಯ ಕಾರ್ಯ ಮುಗಿದ ಮೇಲೆ ಅದು ಮೀನವೆಂದು ಜಾರ್ಜೆಟಳು ಬಾಯಿಬಿಟ್ಟಿತು.

ಜಾರ್ಜೆಟಳ ಭಾಷಣವನ್ನು ಕೇಳಿ ರೇನಿಯು ನಗತೊಡಗಿದನು. ಅದನ್ನು ಕಂಡು ಗ್ರಾಸ್ ಆ್ಯಲನ್‌ನೂ ನಗತೊಡಗಿದನು. ಆ ನಗೆಯಾಟ ದಲ್ಲಿ ಆ ಹುಳುವು ಎತ್ತೋ ಹರಿದು ಹೋಗಿ ಮಟಾಮಾಯವಾಯಿತು. ಅಷ್ಟರಲ್ಲಿ ಒಂದು ಪಾತರಗಿತ್ತಿ ಹಾರಾಡುತ್ತ ಅವರ ಹತ್ತಿರ ಸುಳಿದಿತು. ಅದರಿಂದ ಅವರ ಲಕ್ಷ್ಯವು ಆ ಪಾತರಗಿತ್ತಿಯ ಹಾರಾಟದ ಕಡೆಗೆ ಹೋಯಿತು. ಜಾರ್ಜೆಟ್ ಅದರ ಕಡೆಗೆ ಬೆರಳು ಮಾಡುತ್ತ 'ಕೋಳಿ' ಎಂದು ಕೂಗಿತು. ಅದಕ್ಕೆ ರೇನಿಜೀನ್ 'ಅದು ಕೋಳಿಯಲ್ಲ. ಹಕ್ಕಿ' ಎಂದಿತು. ಮೂರೂ ಹುಡುಗರು ಅದನ್ನು ನೋಡುತ್ತ ನಿಂತುಕೊಂಡವು.

ಆಮೇಲೆ ಗುಂಗೀಹುಳುವೊಂದು ಹಾರಾಡುತ್ತ ಗುಂಯ್ ಗುಂಯ್ ಗಾಯನ ಮಾಡುತ್ತ ಅತ್ತಿಂದಿತ್ತ ಸುಳಿದಾಡಿ ಹಾರಿಹೋಯಿತು.

'ನೋಡಿರಿ. ಅದು ತನ್ನ ಮನೆಯ ಕಡೆಗೆ ಹೊರಟಿತು' ಎಂದು ರೇನಿಯು ಮಾತಾಡಿದನು.

ಗ್ರಾಸ್ ಆ್ಯಲನ್‌ನು 'ಅದು ಪಶು' ಎಂದನು.

ರೇನೀ 'ಅಲ್ಲ, ಅದು ಮೀನ' ಎಂದಿತು.

'ಮೀನ' ವೆಂದು ಜಾರ್ಜೆಟ್ ಕೂಗಿತು.

ಆ ಮೇಲೆ ಗ್ರಾಸ್ ಆ್ಯಲನ್‌ನು ಒಂದು ಹಗ್ಗದ ತುಂಡನ್ನು ಜೋರಿ ನಿಂದ ತಿರುವಿದನು. ಜಾರ್ಜೆಟ್‌ಳ ಹತ್ತಿರವೊಂದು ಕುರ್ಚಿಯು ಬಿದ್ದಿತ್ತು. ಆ ಕುರ್ಚಿಗೆ ಗೆದ್ದಲು ಹತ್ತಿ ಮುರಕಳಿಯಾಗಿತ್ತು. ಕುರ್ಚಿಯ ಎದುರಿಗೆ ನಿಂತು ಬೊಟ್ಟು ಹಾಕಿ ಅದರಲ್ಲಿಯ ತೂತುಗಳನ್ನು ದೊಡ್ಡದಾಗಿ ಮಾಡುತ್ತ ನಿಂತಿತು.

ಅಷ್ಟರಲ್ಲಿ ಅದು ಬೆರಳನ್ನು ತೆಗೆದು 'ಒಂದು' ಎಂದು ಅದಕ್ಕೆ ಹೇಳಬೇಕಾಗಿತ್ತು. ಹಿರಿಯರಿಬ್ಬರೂ ಅದಕ್ಕೆ ತಲೆಯಲ್ಲಾಡಿಸಿದರು. ಅವರಿಗೆ ದೂರಿನಿಂದ ಕೇಳಬರುತ್ತಿರುವ ಸದ್ದು ಕೇಳಿಸಿತು. ಸೈನ್ಯದ

ಚಟುವಟಿಕೆಗಳು ಸಾಗಿದ್ದರಿಂದ ಆ ಸದ್ದು ಅರಣ್ಯದೊಳಗಿಂದ ಹೊರ ಬರುತ್ತಿತ್ತು. ಕುದುರೆಗಳು ಖೇಕರಿಸುತ್ತಿದ್ದವು ರಣವಾದ್ಯಗಳು ಗರ್ಜಿಸುತ್ತಿದ್ದವು. ನಗಾರಿಗಳು ಬಾರಿಸುತ್ತಿದ್ದವು. ನಾನಾ ತರದ ಸದ್ದು ಕೂಡಿಕೊಂಡು ಸಮ್ಮಿಶ್ರವಾದೊಂದು ದೊಡ್ಡ ಸದ್ದು ಅವರಿಗೆ ಕೇಳಿಸುತಲಿತ್ತು. ಆ ಹುಡುಗರು ಆ ಸದ್ದನ್ನು ಆನಂದದಿಂದ ಕೇಳತೊಡಗಿದವು.

ರೇನಿಯು 'ದೇವರು ಇದೆಲ್ಲವನ್ನು ಮಾಡುತ್ತಾನೆ!' ಎಂದಂದಿತು. ಸದ್ದು ಬಹಳ ಹೆಚ್ಚಾಯಿತು. ರೇನಿಜೀನ್ ಬಹಳ ಚಿಂತಾಯುಕ್ತವಾಗಿ 'ಅವ್ವಾ' ಎಂದು ಚೀರಿದನು. ಗ್ರ್ರಾಸ್ ಆ್ಯಲನ್‌ನೂ 'ಅವ್ವಾ' ಎಂದು ಚೀರಿದನು. ಜಾರ್ಜೆಟ್‌ಳೂ 'ಅವ್ವಾ! ಅವ್ವಾ!' ಎಂದು ಚೀರಿತು. ರೇನೀಯು ಅತ್ತಿಂದಿತ್ತ ಓಡಾಡತೊಡಗಿದನು. ಅದನ್ನು ನೋಡಿ ಗ್ರ್ರಾಸ್ ಆ್ಯಲನ್‌ನೂ ಜಿಗಿಯತೊಡಗಿದನು. ಜಿಗಿಯಲು ಬಾರದ ಜಾರ್ಜೆಟ್ ಅವರಿಬ್ಬರ ಕುಣಿದಾಟವನ್ನು ನೋಡುತ್ತ ನಿಂತಿತು. ಈ ಪ್ರಕಾರವಾಗಿ ಆ ಮೂರೂ ಮಗುಗಳ ಚಲ್ಲಾಟ ನಡೆದಿತ್ತು. ಇಷ್ಟರಲ್ಲಿ ಒಮ್ಮಿಂದೊಮ್ಮೆಲೆ ಕಿಡಿಕಿಯ ಹತ್ತಿರ ಮನುಷ್ಯನೊಬ್ಬನು ನಿಂತುಕೊಂಡುದು ರೇನೀಯ ಕಣ್ಣಿಗೆ ಬಿದ್ದಿತು. ಆ ಮನುಷ್ಯನನ್ನು ನೋಡಿದ ಕೂಡಲೆ ರೇನೀಯು ಹಿಂದಕ್ಕೆ ಸರಕ್ಕನೆ ಸರಿದು ಮೂಲೆಯಲ್ಲಿ ಅಡಗಿಕೊಂಡನು. ಅದನ್ನು ನೋಡಿ ಉಳಿದವೆರಡೂ ಮಗುಗಳು ಅಲ್ಲಿಯೇ ಹೋಗಿ ಅಡಗಿಕೊಂಡು ಗಪ್ಪ ಚಿಪ್ಪಾಗಿ ಕುಳಿತುಕೊಂಡವು.

ತಾತ್ಪೂರ್ತಿಕ ಒಪ್ಪಂದವಾದುದರ ಮೂಲಕ ವೇಳೆ ಸಿಕ್ಕದ್ದರಿಂದ ಸಿಪಾಯಿಯೊಬ್ಬನು ಸಹಜವಾಗಿ ಅಲ್ಲಿಯ ವರೆಗೆ ಬಂದಿದ್ದನು. ಸ್ವಲ್ಪ ಹೊತ್ತು ಸುಮ್ಮನಿದ್ದುಕೊಂಡು ಮೆಲ್ಲಗೆ ಆ ಮನುಷ್ಯನು ಹೋಗಿರುವನೋ ಇಲ್ಲವೋ ಎಂಬುದನ್ನು ನೋಡಬೇಕೆಂಬ ಕುತೂಹಲದಿಂದ ಅವು ಹೊರಗೆ ಬಂದವು. ಅಷ್ಟರಲ್ಲಿ ಆ ಮನುಷ್ಯನು ಹೊರಟು ಹೋಗಿದ್ದನು. ಆಗ ಮೂರೂ ಮಗುಗಳು ಹೊರಬಂದು ಮೊದಲಿನಂತೆ ಆಟವಾಡತೊಡಗಿದವು. ಆ್ಯಲನ್‌ನಿಗೆ ಒಂದು ಮುರುಕು ಗಾಡಿಯು ಸಿಕ್ಕಿತು. ಅದು ಎಷ್ಟೋ ವರುಷಗಳಿಂದ ಧೂಳು ತಿನ್ನುತ್ತ ಬಿದ್ದಿತ್ತು. ಅದನ್ನು ತೆಗೆದುಕೊಂಡು

ಆ್ಯಲನ್‌ನು ಓಡಾಡಿಸತೊಡಗಿದನು. ಈ ಗಾಡಿಯು ಗಾವೆನ್ ಆಡುತ್ತಿದ್ದ ಗಾಡಿಯಾಗಿತ್ತೇನೋ ಯಾರು ಬಲ್ಲರು !

ಗ್ರಾಸ್ ಆ್ಯಲನ್‌ನು ಅಲ್ಲಿ ಬಿದ್ದಿರುವ ಹಗ್ಗದ ತುಂಡೊಂದನ್ನು ತೆಗೆದುಕೊಂಡು ಬಾರುಕೋಲು ಮಾಡಿದನು. ಜಾರ್ಜೆಟಳು ಆ ಮುರುಕು ಗಾಡಿಯಲ್ಲಿ ಹೋಗಿ ಕುಳಿತಳು. ರೇನೀಯು ಕುದುರೆಯಾದನು. ಗ್ರಾಸ್ ಆ್ಯಲನ್‌ನು ಗಾಡೀ ಹೊಡೆಯುವವನಾದನು. ಅವನಿಗೆ ಗಾಡಿ ಹೊಡೆಯಲಿಕ್ಕೆ ಬರಲಿಲ್ಲ. ಆದ್ದರಿಂದ ಕುದುರೆಯೇ ಗಾಡಿಯನ್ನು ಹೇಗೆ ಹೊಡೆಯಬೇಕೆಂಬದನ್ನು ಕಲಿಸುವದೋ ಏನೋ ಎಂಬಂತೆ ರೇನೀಯು ಗಾಡಿಯನ್ನು ಜಗ್ಗುತ್ತ ಹೊರಟನು. ಆದರೆ ಗಾಡಿಯು ತುಸು ಮುಂದೆ ಸಾಗುವಷ್ಟರಲ್ಲಿ ಹೊಡಮರಳಿ ಬಿದ್ದುಬಿಟ್ಟಿತು. ಮೂರೂ ಹುಡುಗರೂ ಚೀರತೊಡಗಿದವು. ಈ ಆಟವು ಮುಗಿದ ಮೇಲೆ ಗ್ರಾಸ್‌ಆ್ಯಲನ್‌ನ ಲಕ್ಷ್ಯವು ಕಿಡಿಕಿಯಲ್ಲಿ ಕಾಣುತ್ತಿರುವ ಬಳ್ಳಿಯ ಕಡೆಗೆ ಹೋಯಿತು. ಆ ಬಳ್ಳಿಗೆ ಮುಳ್ಳುಗಳಿದ್ದು ಸಣ್ಣ ಸಣ್ಣ ಹಣ್ಣುಗಳಾಗಿದ್ದವು. ಆ ಮೂವರೂ ಆ ಬಳ್ಳಿಗೆ ಮುಗಿಬಿದ್ದು ಹಣ್ಣು ಹರಿದು ತಿನ್ನತೊಡಗಿದರು. ಮುಳ್ಳುಗಳು ಚುಚ್ಚುತ್ತಿದ್ದರೂ ಅವರು ಹಣ್ಣುಗಳನ್ನೇನೂ ಉಳಿಸಲಿಲ್ಲ. ಅವರು ಮುಳ್ಳುಗಳ ಚುಚ್ಚುವಿಕೆಯನ್ನು ಸಹಿಸದೆ ಆ ಬಳ್ಳಿಯನ್ನು ಶಪಿಸುತ್ತಲೇ ಇದ್ದರು.

ರೇನೀಜಿನ್‌ನು ಗ್ರಾಸ್‌ಆ್ಯಲನ್‌ನ ಎರಡು ಸಂಶೋಧನೆಗಳನ್ನು ಸಹಿಸದೆ ತಾನೂ ಒಂದಾದರೂ ಶೋಧ ಮಾಡಬೇಕೆಂದು ಪುಸ್ತಕಗಳ ರಾಶಿಯಿದ್ದಲ್ಲಿಗೆ ಧಾವಿಸಿದನು. ವಾಚನಾಲಯದ ಮಧ್ಯಭಾಗದಲ್ಲಿರುವ ಕಪಾಟೊಂದು ಅವನ ಕಣ್ಣಿಗೆ ಬಿದ್ದಿತು. ಆ ಕಪಾಟನೊಳಗೆ ಬಾರ್ಥೋಲೋಮೋನ ಪ್ರಸಿದ್ಧ ಪುಸ್ತಕವೊಂದಿತ್ತು. ಅದು ಭವ್ಯವೂ, ಬಹು ಬೆಲೆಯುಳ್ಳದ್ದೂ ಆಗಿತ್ತು. ಅರೇಬಿಯನ್ ಕಾಗದದ ಮೇಲೆ ಅದರ ಮುದ್ರಣವಾಗಿತ್ತು. ರೇಶಿಮೆ ಹಾಗೂ ಅರಳೆಯಿಂದ ಆ ಕಾಗದವು ಸಿದ್ಧವಾಗಿತ್ತು. ಅದರ ಹೊರಕಟ್ಟು ಸುಂದರವಾದ ಚರ್ಮದಿಂದ ಮಾಡಲಾಗಿತ್ತು. ಆ ಪುಸ್ತಕದಲ್ಲಿ ನಯನಮನೋಹರವಾದ ಚಿತ್ರಗಳಿದ್ದವು. ಅನೇಕ ದೇಶದ ನಕಾಶೆಗಳಿದ್ದವು. ಅದು ಬಹಳೇ ಚಿತ್ತಾಕರ್ಷಕವಿದ್ದುದರಿಂದ

ರೇನೀಯ ಚಿತ್ರವು ಅದರಲ್ಲಿ ನಟ್ಟುಹೋಯಿತು. ಪುಸ್ತಕವು ತೆರೆದಿದ್ದುದ ರಿಂದ ಚಿತ್ರಗಳು ಒಮ್ಮೆಲೆ ಕಂಡವು. ಜಾರ್ಜೆಟ್‌ಳೂ ಅಲ್ಲಿಗೆ ಬಂದು 'ಚಿತ್ರ' ಎಂದು ಮುದ್ದಾಗಿ ಹೇಳಿತು. ಕಪಾಟಿನ ಹತ್ತಿರವೇ ದೊಡ್ಡ ದೊಂದು ಕುರ್ಚಿಯಿತ್ತು. ರೇನೀಯು ಅದನ್ನು ಕಪಾಟಿನ ಸಮೀಪಕ್ಕೆ ದರ ದರ ಎಳೆದು ತಂದನು. ಕುರ್ಚಿಯನ್ನು ಹತ್ತಿ ತನ್ನ ಎರಡೂ ಕೈಗಳಿಂದ ಆ ಪುಸ್ತಕವನ್ನು ಹಿಡಿದು ಪುಟಗಳನ್ನು ತೆಗೆಯತೊಡಗಿದನು. ಪುಟ ಗಳನ್ನು ತೆಗೆಯುವದರಲ್ಲಿ ಮೊದಲನೇ ಚಿತ್ರವನ್ನು ಚನ್ನಾಗಿ ಹರಿದು ಹಾಕಿ ದನು. ಆದರೆ ದುರ್ದೈವದಿಂದ ಆ ಚಿತ್ರವು ಪೂರ್ಣ ಹರಿಯಲಿಲ್ಲ. ಅದನ್ನು ಕಂಡು ಜಾರ್ಜೆಟ್‌ಳು ಆ ಕೆಲಸವನ್ನು ಪೂರ್ತಿ ಮಾಡಿದಳು. ರೇನೀಯು ಎರ ಡನೇ ಪುಟವನ್ನು ತೆರೆಯಲಾಗಿ ಅದು ಸಾಧುಪುರುಷನೊಬ್ಬನ ಚಿತ್ರವಾಗಿತ್ತು. ಗ್ರಾಸ್‌ಆ್ಯಲನ್‌ನು ಅದರ ಆಹುತಿಯನ್ನು ತೆಗೆದುಕೊಂಡನು. ಜಾರ್ಜೆ ಟ್‌ಳು ಹರಿದು ಹಾಕಿದ ತುಂಡುಗಳನ್ನು ಕೂಡಿಸಿಕೊಂಡು ಇನ್ನಿಷ್ಟು ಹರಿ ಹರಿದು ತುಣುಕು ತುಣುಕು ಮಾಡಿ ಚಲ್ಲಿದಳು. ಹೀಗೆ ಒಂದರ ಮೇಲೊಂದು ಚಿತ್ರಗಳು ಹರಿಪಂತರ ಸ್ವಾಧೀನವಾದ ಮೇಲೆ ರೇನಿಯು ಅದನ್ನು ದೊಪ್ಪನೆ ನೆಲದ ಮೇಲೆ ಬೀಸಾಡಿದನು. ಅದರಿಂದ ಅದರ ಹೊರ ಕಟ್ಟೂ ಹಾಳಾಗಿ ಹೋಯಿತು. ಅದು ಬಿದ್ದುದರಿಂದ ನೆಲದ ದೂಳು ಸುತ್ತಲೂ ಹರಡಿತು. ಅದಕ್ಕೆ ಸಿಟ್ಟಿಗೆದ್ದು ಗ್ರಾಸ್‌ಆ್ಯಲನ್‌ನು ಬಂದು ಅದನ್ನು ಒದ್ದು ಹಾಕಿದನು. ಅದನ್ನು ಕಂಡು ಉಳಿದವರಿಬ್ಬರೂ ಅದರ ಅನುಕರಣವನ್ನು ಮಾಡಿದರು. ಆ ಪುಸ್ತಕದ ಪೂರ್ಣಾಹುತಿಯಾದ ಮೇಲೆ ಅವರು ಚಪ್ಪಾಳೆ ತಟ್ಟಿ ಕುಣಿಯತೊಡಗಿದರು. ಇಷ್ಟಾದ ಮೇಲೆ ಆ ಚೂರು ಗಳನ್ನು ಅಲ್ಲಿಯೇ ಬಿಟ್ಟರೆ ನೆಟ್ಟಗಲ್ಲವೆಂದು ಕೂಡಿ ಹಾಕಿಕೊಂಡು ಹೋಗಿ ಕಿಡಿಕಿಯಲ್ಲಿ ಹೊರಗೆ ತೂರಿಬಿಟ್ಟರು. ಅವು ಗಾಳಿಗೆ ಹಾರಾಡತೊಡಗಿದವು. ಅದೂ ಒಂದು ಅವರಿಗೆ ಮೋಜೆನಿಸಿತು. ಸಂಧ್ಯಾಸಮಯವಾಗುತ್ತ ನಡೆ ದಿತ್ತು. ಉಷ್ಣತೆಯು ಏರುತ್ತಲಿತ್ತು. ಹುಡುಗರಿಗೆ ನಿದ್ದೆ ಬಂದಿತು. ಇನ್ನು ಮಲಗಿಕೊಳ್ಳೋಣವೆಂದು ಅವು ತಮ್ಮ ತಮ್ಮ ತೊಟ್ಟಿಲುಗಳಿಗೆ ಹೋದವು. ಮೂರೂ ಮಗುಗಳಿಗೆ ನಿದ್ದೆ ಹತ್ತಿಬಿಟ್ಟಿತು. ತೆರೆದ ಕಿಡಿಕಿಯಿಂದ ಬಿಸಿ

ಗಾಳಿಯು ಬೀಸುತ್ತಿತ್ತು. ಅಡವಿ ಹೂಗಳ ಸುಗಂಧವು ಗಾಳಿಯೊಡನೆ ಕೂಡಿಕೊಂಡಿತು. ಸೃಷ್ಟಿದೇವತೆಯು ಶಾಂತಳೂ ಕರುಣಾಮಯಳೂ ಆದಂತೆ ಕಾಣಿಸಿದಳು. ಎಲ್ಲ ಕಡೆಗೂ ನಿಸ್ತಬ್ಧತೆ. ಸೂರ್ಯನು ಮುಳುಗುತ್ತ ನಡೆದಿದ್ದನು. ಅಷ್ಟರಲ್ಲಿಯೇ ಮಿಂಚಿನಂಥ ಪ್ರಕಾಶವು ಒಮ್ಮೆಲೆ ಮಿನುಗಿತು. ಕರ್ಣಕಠೋರ ಶಬ್ದವೂ ಕೇಳತೊಡಗಿತು. ತೋಫಿನ ಗರ್ಜನೆಯೂ ಆರ್ಭಟಿಸಿತು. ಆ ಸಪ್ಪುಳಕ್ಕೆ ಜಾರ್ಜೆಟ್ ಎಚ್ಚರಾಯಿತು. ಕಣ್ಣು ಪಿಳುಕಿಸಿ 'ಬವು' ಎಂದಂದು ಪುನಃ ಕಣ್ಣು ಮುಚ್ಚಿತು. ಮತ್ತೆ ಶಾಂತತೆ ನೆಲೆಸಿತು. ಆ ಮೂರೂ ಮಗುಗಳು ದಣಿದು ಆರಾಮಾಗಿ ಮಲಗಿಕೊಂಡವು.



## ೧೪

ಇಳಿಹೊತ್ತಾಗುವಷ್ಟರಲ್ಲಿ ಆ ತಾಯಿಯು ಇಡೀ ದಿನ ನಡೆದು ಸೋತಿದ್ದಳು. ಅವಳು ತೀರ ದಣಿದಳೆಂದರೆ ಯಾವುದಾದರೊಂದು ಮರದ ಬುಡದಲ್ಲಿ ಒರಗಿ ಬಿಡುವ ಪರಿಪಾಠವಾಗಿತ್ತು. ಹಸಿವೆನಿಸಿದಾಗ ಪಶುಗಳಂತೆ ಸಿಕ್ಕದ್ದನ್ನು ತಿನ್ನುವಂತೆ ಅವಳೂ ಏನಾದರೂ ತಿನ್ನುತ್ತಿದ್ದಳು. ಸಾವು ಬರಬಾರದೆಂದು ಅವಳು ಎಷ್ಟು ಅವಶ್ಯಕವೋ ಅಷ್ಟು ಆಹಾರ ತೆಗೆದುಕೊಂಡು ಸ್ವಲ್ಪೇ ನಿದ್ರೆಮಾಡುತ್ತಿದ್ದಳು. ಒಮ್ಮೊಮ್ಮೆ ಬಹಳ ಹೊತ್ತೂ ಮಲಗಿ ಬಿಡುತ್ತಿದ್ದಳು. ಮಧ್ಯರಾತ್ರಿಯಾಯಿತೆಂದರೆ ಎದ್ದು ಸೂರ್ಯನ ತಾಪವು ಅಸಹನೀಯವಾಗುವ ವರೆಗೆ ಮಾರ್ಗಕ್ರಮಣ ಮಾಡುತ್ತಿದ್ದಳು. ಬಿಸಿಲು ಕಾಲದಲ್ಲಿ ಮಾರ್ಗಕ್ರಮಣ ಮಾಡಲು ರಾತ್ರಿಯೆ ಹೆಚ್ಚು ಅನುಕೂಲವಾದುದರಿಂದ ಅವಳು ಹಾಗೆ ತನ್ನ ಪ್ರಯಾಣವನ್ನು ಬೆಳೆಸುತ್ತಿದ್ದಳು.

ಆ ಒಕ್ಕಲಿಗನು ತೋರಿಸಿದ ದಾರಿಯನ್ನು ಹಿಡಿದು ಅವಳು ಅವಸರವಸರದಿಂದ ನಡೆದಿದ್ದಳು. ಲಾಟೋರ್, ಲಾಟೋರ್ ಎಂದು ಬಾಯಿಂದ

ಜಪಮಾಡುತ್ತಲೇ ಅವಳ ಕಾಲುಗಳು ದಾರಿ ತುಳಿಯುತ್ತಿದ್ದವು. ತನ್ನ ಮಗುಗಳ ನೆನಪಿನೊಂದಿಗೆ ಈ ಲಾಟೋರ ಎಂಬ ಶಬ್ದದ ಹೊರತಾಗಿ ಅವಳಿಗೆ ಯಾವ ಸ್ಮರಣೆಯೂ ಇರಲಿಲ್ಲ. ದೈವಹೀನ ಪುರುಷನಿಗಿಂತಲೂ ದೈವಹೀನ ಸ್ತ್ರೀಯ ಪರಿಸ್ಥಿತಿಯು ಬಹಳ ಭಯಾನಕವಾದುದು. ಅದರಿಂದ ಅವಳ ಈ ಪ್ರಯಾಣದ ಪ್ರವಾಸವೇನು ? ತನ್ನ ಮಗುಗಳಿಗಾಗಿ ಪಡುವ ಕಷ್ಟವೇನು ? ಎಂಬುದರ ಅರಿವೂ ಕೂಡ ಇಲ್ಲದೆ ಅವಳು ಒಂದೇ ಸವನೆ ಮುಂದೆ ಸಾಗುತ್ತ ಹೊತ್ತೇರುವಷ್ಟರಲ್ಲಿ ಒಂದು ಹಳ್ಳಿಗೆ ತಲುಪಿದಳು. ಆ ಹಳ್ಳಿಯ ದೊಡ್ಡ ಓಣಿಯೊಳಗಿನ ಕೆಲವು ಮನೆಯ ಬಾಗಲುಗಳು ಅದೇ ತೆರೆದಿದ್ದವು ಜನರು ತಲೆಯನ್ನು ಬಗ್ಗಿಸಿ, ಚಮತ್ಕಾರಿಕ ದೃಷ್ಟಿಯಿಂದ ಹೊರಗೆ ನೋಡುತ್ತಿದ್ದರು. ದೇವಾಲಯದ ಚೌಕಿನಲ್ಲಿ ಗಾಬರಿಗೊಂಡ ಜನಸಮೂಹವು ತಮ್ಮ ತಲೆಯನ್ನೆತ್ತಿ ಗುಡ್ಡದ ಪಾರಿಯ ದಾರಿಯಿಂದ ಏನೋ ಇಳಿದು ಬರುತ್ತಿರುವದರ ಕಡೆಗೆ ಲಕ್ಷ್ಯಪೂರ್ವಕವಾಗಿ ನೋಡುತ್ತಿತ್ತು ಅದೊಂದು ನಾಲ್ಕು ಗಾಲಿಯ ಗಾಡಿ. ಐದು ಕುದುರೆಗಳು ಹೂಡಲ್ಪಟ್ಟಿವೆ. ದೊಡ್ಡ ಸರಪಣಿಯಿಂದ ಕಟ್ಟಲಾಗಿದೆ. ಗಾಡಿಯ ಮೇಲೆ ಕೊಲ್ಗಂಬದ ಸಾಮಾನುಗಳಿದ್ದವು. ಮಧ್ಯಭಾಗದಲ್ಲಿ ಆಕಾರವಿರಹಿತವಾದ ಪದಾರ್ಥವೊಂದಿದೆ ಅದನ್ನು ಹೊದಿಕೆಯಿಂದ ಮುಚ್ಚಲಾಗಿದೆ. ಗಾಡಿಯ ಮುಂದೆ ಹತ್ತು ಕುದುರೆ ಸವಾರರೂ, ಹಿಂದೆಯೂ ಹತ್ತಾರು ಕುದುರೆ ಸವಾರರು ನಡೆದಿದ್ದರು. ಅವರ ತಲೆಯ ಮೇಲೆ ತ್ರಿಕೋಣೀ ಆಕಾರದ ಟೊಪ್ಪಿಗೆಗಳಿದ್ದವು. ಹೆಗಲ ಮೇಲೆ ಒರೆಯಿಂದ ಹಿರಿದ ಕತ್ತಿಗಳು ಝಳಪಿಸುತ್ತಿದ್ದವು ಆ ಗಾಡಿ, ಆ ಕುದುರೆ, ಆ ಸವಾರರೆಲ್ಲರೂ ಸಾಗುತ್ತಿರುವಾಗ ಪ್ರಭಾತಕಾಲದ ಸೂರ್ಯಪ್ರಕಾಶವು ಅದೇ ಹೊರಬರುತ್ತಿತ್ತು. ಅವರು ಹಳ್ಳಿಯಲ್ಲಿ ಹೊಕ್ಕು ದೇವಾಲಯದ ಚೌಕಿನ ಕಡೆಗೆ ಸಾಗಿದರು. ಯಾರೂ ಚಕಾರ ಶಬ್ದವನ್ನು ಆಡದೆ ಮೂಕರಂತೆ ಮುಂದೆ ಮುಂದ ಸಾಗಿದ್ದರು.

ದೈವಗೇಡಿಯಾದ ಆ ತಾಯಿಯು ಇನ್ನೊಂದು ಬದಿಯಿಂದ ಹಳ್ಳಿಯನ್ನು ಹೊಕ್ಕಳು. ಅವರು ಹಳ್ಳಿಯೊಳಗೆ ಬರುವ ಹೊತ್ತಿಗೆ ಇವಳೂ

ಬಂದಳು. ಆಗ ಅವರು ತಮ್ಮ ತಮ್ಮೊಳಗೆ ಕೆಳಗಿನಂತೆ ಮಾತಾಡಿಕೊಳ್ಳು ತ್ತಿದ್ದರು.

"ಇದೇನು?"

'ಕುತ್ತಿಗೆಯನ್ನು ಕತ್ತರಿಸುವ ಯಂತ್ರ.'

'ಎಲ್ಲಿಂದ ಬಂದಿದೆ?'

'ಪೋರೆಯಿಂದ.'

'ಎಲ್ಲಿಗೆ ಒಯ್ಯಲಾಗುವದು?'

'ಯಾರಿಗೆ ಗೊತ್ತು!'

'ಎಲ್ಲಿಗಾದರೂ ಹೋಗಲೊಲ್ಲದು. ಇಲ್ಲಿ ಮಾತ್ರ ಇರಬಾರದು' ಎಂದೊಬ್ಬನು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದನು. ಸ್ವಲ್ಪ ಹೊತ್ತಿನ ಮೇಲೆ ಆ ಸೈನಿಕರ ತಂಡವು ಅಲ್ಲಿಂದ ಕಾಲಕಿತ್ತು ಮುಂದೆ ಹೊರಟಿತು. ಅಲ್ಲಿಯ ವರೆಗೆ ಕಲ್ಲಿನಂತಾಗಿದ್ದ ಆ ಹಳ್ಳಿಯ ಜನರು ಕೈಯಲ್ಲಿ ಜೀವ ಹಿಡಿದುಕೊಂಡಿದ್ದರು. ಅವರು ಹೊರಟು ಹೋದುವನ್ನು ಕಂಡು ಆ ಹಳ್ಳಿಗರು ಧೈರ್ಯದಿಂದ ಹೊರಗೆ ಬರತೊಡಗಿದರು.

ಈ ಸುಮಾರಿಗೆ ವಾಚನಾಲಯದಲ್ಲಿ ಜಾರ್ಜೆಟಳಿಗೆ ಎಚ್ಚರವಾಯಿತು. ಆ ತಾಯಿಯು ಆ ಸೈನಿಕರ ಸಮೂಹವನ್ನು ನೋಡಿದಳು. ಆದರೆ ಅವಳಿಗೆ ಅದರ ಅರ್ಥವಾಗಲಿಲ್ಲ. ಅವಳ ಲಕ್ಷ್ಯವು ತನ್ನ ಮಕ್ಕಳಲ್ಲಿ ಪೂರ್ತಿಯಾಗಿ ಗುಂಗಾಗಿತ್ತು. ಅವಳು ಹಳ್ಳಿಯನ್ನು ಪ್ರವೇಶಿಸಿ ಆ ಸೈನಿಕ ತಂಡದವರು ಹೋದ ದಾರಿಯನ್ನು ಹಿಡಿದು ಸಾಗಿದಳು; ಹೋಗಹೋಗುತ್ತಿರುವಾಗ 'ಕುತ್ತಿಗೆ ಕೊಯ್ಯುವ ಯಂತ್ರ!' ಎಂಬ ಶಬ್ದಗಳು ಅವಳಿಗೆ ಕೇಳಬಂದವು. ಅವಳಿಗೆ ಆ ಶಬ್ದದ ಅರ್ಥವು ಗೊತ್ತಾಗಲಿಲ್ಲ. ಆದರೂ ಆ ಶಬ್ದವನ್ನು ಕೇಳಿ ಅವಳ ಮೈಮೇಲೆ ಮುಳ್ಳುಗಳೆದ್ದವು. ಆ ಯಂತ್ರದ ಹಿಂದಿನಿಂದ ಹೋಗುವದು ಸರಿಯಲ್ಲವೆಂದು ಅವಳು ಎಡಬದಿಗೆ ಹೊರಳಿದಳು. ಆ ದೊಡ್ಡ ಹಾದಿಯನ್ನು ಬಿಟ್ಟು ಅರಣ್ಯದ ಕಾಲುದಾರಿಯನ್ನು ಹಿಡಿದು ಸಾಗಿದಳು. ಅದು ಪೋರೆಯ ಅರಣ್ಯವಾಗಿತ್ತು. ಸ್ವಲ್ಪ ದಾರಿ ಸವಿದ ಮೇಲೆ ಅವಳಿಗೆ ಮನೆಗಳ ಹಂಚುಗಳು ಕಾಣತೊಡಗಿದವು.

ಆ ಹಂಚುಗಳು ಆ ಅರಣ್ಯದಲ್ಲಿದ್ದ ಒಂದು ಮನೆಯ ಹಂಚುಗಳಾಗಿದ್ದವು. ಆ ಕಡೆಗೆ ಅವಳು ಸಾಗಿದಳು. ಅವಳಿಗೆ ಹೊಟ್ಟೆ ಹಸಿವೆಯಾಗಿತ್ತು.

ಈ ಹಳ್ಳಿಯಲ್ಲಿ ಸೈನಿಕರ ಅಧಿಕಾರ ನಡೆದಿತ್ತು. ಆದ್ದರಿಂದ ಆ ಹಳ್ಳಿಯು ಭಯಗ್ರಸ್ತವಾಗಿತ್ತು. ಆ ಹಳ್ಳಿಯ ಜನರೆಲ್ಲರೂ ಅಲ್ಲಿಯ ದೊಡ್ಡ ವಾಡೆಯ ಕಡೆಗೆ ಸಾಗಿದ್ದರು. ಆ ವಾಡೆಯ ಮೆಟ್ಟಲುಗಳ ಮೇಲೆ ಮನುಷ್ಯನೊಬ್ಬನು ನಿಂತಿದ್ದನು. ಅವನ ಹಿಂದೆ ಸೈನಿಕರಿದ್ದರು. ಅವನ ಕೈಯಲ್ಲೊಂದು ದೊಡ್ಡ ಜಾಹೀರನಾಮೆಯಿತ್ತು. ಅವನ ಬಲಬದಿಯಲ್ಲಿ ಡಂಗುರ ಸಾರುವವನಿದ್ದನು. ಎಡಬದಿಯಲ್ಲಿ ಆ ಜಾಹೀರಾತನ್ನು ಅಂಟಿಸುವ ಸಲುವಾಗಿ ಒಬ್ಬನು ನಿಂತಿದ್ದನು.

ಮಹಾದ್ವಾರದ ಮುಂದಿರುವ ಮೊಗಸಾಲೆಯಲ್ಲಿ ಹಳ್ಳಿಯ ಮುಖಂಡರು ಕುಳಿತಿದ್ದರು ಅವರೆಲ್ಲರ ತಲೆಯ ಮೇಲೆ ತಿರಂಗಿ ಬಣ್ಣದ ಟೊಪ್ಪಿಗೆಗಳಿದ್ದವು. ಮೈಯಲ್ಲಿ ಮಾತ್ರ ಹಳ್ಳಿಯ ತರದ ಅಂಗಿಗಳಿದ್ದವು. ಅದೇ ಹೊತ್ತಿಗೆ ಆ ತಾಯಿಯು ಅಲ್ಲಿಗೆ ಬಂದಳು. ಆ ಜಾಹೀರಾತನ್ನು ಹಿಡಿದ ಅಧಿಕಾರಿಯು ಅದನ್ನು ಎಲ್ಲರಿಗೂ ಕೇಳಿಸುವಂತೆ ಓದತೊಡಗಿದನು

"ಫ್ರಾನ್ಸದ ಪ್ರಜಾಪಕ್ಷದವರಿಂದ —" ಎಂಬದನ್ನು ಕೇಳಿದ ಕೂಡಲೆ ಢುಂ ಢುಂ ಎಂದು ಡಂಗುರ ಹೊಡೆಯಲಾಯಿತು. ಎಷ್ಟೋ ಜನರು ಹುರುಪಿನಿಂದ ತಮ್ಮ ಟೊಪ್ಪಿಗೆಗಳನ್ನು ತೂರಾಡಿದರು; ಕೆಲವರು ಗಟ್ಟಿಯಾಗಿ ತಮ್ಮ ಟೊಪ್ಪಿಗೆಗಳನ್ನು ಹಿಡಿದುಕೊಂಡರು. ಉತ್ಸಾಹಭರಿತರು ಪ್ರಜಾಪಕ್ಷದ ಜಯಜಯಕಾರವನ್ನು ಮಾಡುವವರಾಗಿದ್ದರು. ನಿರುತ್ಸಾಹಿಗಳು ಪ್ರಜಾಪಕ್ಷದವರನ್ನು ಉಪೇಕ್ಷಿಸುವವರಾಗಿದ್ದರು. ಆ ಹೊತ್ತಿಗೆ ಪಕ್ಷಗಳ ಪರಿಚಯವು ಟೊಪ್ಪಿಗೆಯ ಮೂಲಕ ಗೊತ್ತಾಗುತ್ತಿತ್ತು. ಆ ಉತ್ಸಾಹ, ಹಾರಾಟ ನಿಂತಮೇಲೆ ಜನರು ಓದುವದನ್ನು ಲಕ್ಷ್ಯಪೂರ್ವಕವಾಗಿ ಕೇಳತೊಡಗಿದರು.

"ಫ್ರಾನ್ಸದ ಜನಸಭೆಯು ಕೊಟ್ಟ ಅಧಿಕಾರಾನ್ವಯದ ಆಜ್ಞೆಯೇ ನೆಂವರೆ ಬಂಡುಗಾರರೆಂದು ಜಾಹೀರುಪಡಿಸಿದ ೧೯ ಜನರಿಗೆ ಯಾರು

ಆಶ್ರಯವನ್ನು ಕೊಡುತ್ತಾರೋ ಅಥವಾ ಅವರು ಓಡಿ ಪಾರಾಗಿ ಹೋಗಲು ಸಹಾಯಮಾಡುತ್ತಾರೋ ಅಂಥವರಿಗೆ ದೇಹಾಂತ ಶಿಕ್ಷೆಯನ್ನು ವಿಧಿಸಲಾಗುವದು. ”

ಡಂಗುರ ಬಡಿಯುವವನು ಸ್ವಲ್ಪ ಹೊತ್ತು ಸುಮ್ಮನಾದನು. ಆ ಹತ್ತೊಂಬತ್ತು ಜನರು ಯಾರೆಂದರೆ—ಮಾರ್ಕ್ವಿಸ್ ಲ್ಯಾಂಟನೆಕ್, ಇಮಾನಸ, ಮತ್ತು ಹದಿನೇಳು ಜನರ ಹೆಸರನ್ನು ಓದಿ ಹೇಳಲಾಯಿತು. ಈ ಎಲ್ಲ ಜನರು ಲಾಟೋರ ಕಿಲ್ಲೆಯಲ್ಲಿ ಸಿಕ್ಕುಬಿದ್ದಿದ್ದಾರೆ. ಹೆಸರು ಹೇಳಿದನಂತರ ಆ ಓದುವವನು ದೊಡ್ಡ ದನಿಯಿಂದ “ ಮೇಲ್ಕಾಣಿಸಿದ ಹೆಸರಿನ ಜನರು ಸಿಕ್ಕರೆ ಅವರನ್ನು ಆಗಿಂದಾಗಲೆ ಕೊಂದುಹಾಕಬೇಕು. ಅವರಿಗೆ ನೆರವಾದವರನ್ನು ಗಲ್ಲಿಗೇರಿಸಲಾಗುವದು ” ಎಂದು ಜಾಹೀರು ಪಡಿಸಿದನು. ಈ ಜಾಹೀರನಾಮೆಗೆ ಸಾರ್ವಜನಿಕ ಸಂರಕ್ಷಕ ಮಂಡಳದ ಅಧ್ಯಕ್ಷನಾದ ಸಿಮೋರೆಡಿನ್‌ನ ಅಂಕಿತವಿತ್ತು.

‘ ಈ ಸಿಮೋರೆಡಿನ್–ಅಂದರೆ ಪಾದ್ರಿ! ’ ಎಂದೊಬ್ಬ ಒಕ್ಕಲಿಗನು ಪಿಸುಗುಟ್ಟಿದನು. ‘ ಅಹುದಹುದು. ಅವನು ಪರೀಗ್ ಹಳ್ಳಿಯಲ್ಲಿದ್ದನು. ಅವನೇ ಅಲ್ಲವೆ? ’ ಎಂದು ಮತ್ತೊಬ್ಬನೆಂದನು. ಆ ಹಳ್ಳಿಯ ಮುಖಂಡನು ತನ್ನ ಟೊಪ್ಪಿಗೆಯನ್ನು ತೆಗೆದು ‘ ಪ್ರಜಾಪಕ್ಷಕ್ಕೆ ಜಯವಾಗಲಿ! ’ ಎಂದು ಕೂಗಿದನು. ಮತ್ತೆ ಡಂಗುರ ಬಡಿಯಲಾಯಿತು. ಅದರಿಂದ ಕಾರ್ಯಕ್ರಮವು ಇನ್ನೂ ಮುಗಿದಿರಲಿಲ್ಲವೆನಬಹುದಾಗಿತ್ತು.

‘ ಕೇಳಿರಿ, ಕೇಳಿರಿ. ಇನ್ನೂ ಒಂದು ಆಜ್ಞೆಯಿದೆ. ಲಾಟೋರದಲ್ಲಿ ಅಡಗಿಕೊಂಡ ಈ ಬಂಡುಗಾರರಿಗೆ ಯಾವುದೇ ರೀತಿಯಿಂದ ನೆರವು ನೀಡಿದವರನ್ನು ಗಲ್ಲಿಗೇರಿಸಲಾಗುವದು’ ಇದು ಗಾವೆನ್‌ನ ಆಜ್ಞೆಯಾಗಿತ್ತು.

‘ ಲಾಟೋರ ಎಂಬ ಶಬ್ದವು ಕಿವಿಗೆ ಬಿದ್ದೊಡನೆ ‘ ಏನು? ’ ಎಂಬದೊಂದು ಪ್ರಶ್ನೆಯು ಕೇಳಬಂದಿತು. ಎಲ್ಲರೂ ಚಕಿತರಾಗಿ ಯಾರು ಈ ಪ್ರಶ್ನೆಯನ್ನು ಕೇಳಿದರು ಎಂಬುದನ್ನರಿತುಕೊಳ್ಳಲು ಆತುರರಾದರು. ಆ ಪ್ರಶ್ನೆಯನ್ನು ಕೇಳಿದ ಸ್ವರದ ಮೇಲಿಂದ ಅವಳು ಸ್ತ್ರೀಯಾಗಿರಬೇಕೆಂದು

ಜನರ ಕಲ್ಪನೆಯಾಯಿತು. ಆ ಮಗುಗಳ ತಾಯಿಯೇ ಈ ಪ್ರಶ್ನೆಯನ್ನು ಕೇಳಿದ್ದಳು.

ಮಾಯಾಕೇಲ್ ಫ್ಲೆಶಾರ್ಡಳು ಆ ಗಡಿಬಿಡಿಯಲ್ಲಿ ಎಲ್ಲಿಯೋ ಇದ್ದಳು. ಅವಳಿಗೆ ಲಾಟೋರ ಎಂಬ ಶಬ್ದವು ಕಿವಿಗೆ ಬಿದ್ದಿತು. ಅದರಿಂದಲೆ ಅವಳು 'ಲಾಟೋರ ಅಂದರೇನು' ಎಂಬ ಪ್ರಶ್ನೆಯನ್ನು ಕೇಳಿದಳು. ಜನರು ಅವಳ ಕಡೆಗೆ ಹುಳುಹುಳು ನೋಡಹತ್ತಿದರು. ಅವಳ ಚಿಂದಿಚಿಂದಿಯಾದ ಬಟ್ಟೆಯನ್ನು ನೋಡಿ 'ಇವಳು ತುಡುಗಿ' ಎಂದಂದುಕೊಂಡರು.

ಒಕ್ಕಲಿಗನೊಬ್ಬನ ಹೆಂಡತಿಯು ತಲೆಯ ಮೇಲೆ ರೊಟ್ಟೀಗಂಟನ್ನಿಟ್ಟುಕೊಂಡು ಹೊರಟಿದ್ದಳು. ಅವಳು ಆ ಸ್ತ್ರೀಯ ಹತ್ತಿರ ಹೋಗಿ 'ನಾಲಿಗೆಯನ್ನು ಬಿಗಿಹಿಡಿ' ಎಂದು ಆಕೆಗೆ ಹೇಳಿದಳು. ಅದನ್ನು ಕೇಳಿ ಆ ತಾಯಿಯು ಅವಳನ್ನು ಹರಿದು ತಿನ್ನುವಂತೆ ನೋಡತೊಡಗಿದಳು. ಲಾಟೋರ ಎಂಬ ಶಬ್ದವನ್ನು ಕೇಳಿ ಅವಳ ಹೊಟ್ಟೆಯ ಕರುಳುಗಳು ಹೊರಗೆ ಬಂದಂತಾದುದರಿಂದ ಅವಳು ಆ ಪ್ರಶ್ನೆಯನ್ನು ಕೇಳಿದ್ದಳು. ಅದಕ್ಕೆ ಈ ಜನರು ತನ್ನನ್ನು ಹೀಗೇಕೆ ನೋಡುತ್ತಿರುತ್ತಾರೆ ಎಂಬುದರ ಅರ್ಥವೇ ಅವಳಿಗಾಗಲಿಲ್ಲ. ಅಷ್ಟರಲ್ಲಿ ಡಂಗುರ ಬಡಿದು ಆ ಜಾಹೀರಾತನ್ನು ಗೋಡೆಗೆ ಅಂಟಿಸಿ ಆ ಸೈನಿಕರು ಮುಂದಿನ ಹಳ್ಳಿಗೆ ಹೊರಟರು. ಜನಸಮೂಹವು ಕರಗಿತು. ಕೆಲವರು ಮಾತ್ರ ಆ ಜಾಹೀರಾತಿನ ಮುಂದೆ ನಿಂತುಕೊಂಡರು. ಅವರಲ್ಲಿಯೇ ಈ ತಾಯಿಯೂ ಹೋಗಿ ಸೇರಿಕೊಂಡಳು.

ಬಂಡುಗಾರರೆಂದು ಜಾಹೀರು ಪಡಿಸಿದವರ ವಿಷಯವಾಗಿ ಅವರು ಚರ್ಚೆ ನಡೆಸಿದ್ದರು. ಅವರಲ್ಲಿ ಎರಡು ಪಕ್ಷಗಳಿದ್ದವು. 'ಅವರು ಕೇವಲ ೧೯ ಜನರನ್ನು ಬಂಧಿಸಿದ್ದಾರೆ. ಅಷ್ಟರಿಂದೇನಾಗುವದು? ಅವರೆಲ್ಲರೂ ರಾಜಪಕ್ಷದವರೇ ಅಲ್ಲವೆ?' ಎಂದೊಬ್ಬ ಒಕ್ಕಲಿಗನು ಮಾತನಾಡಿದನು.

ಅಷ್ಟರಲ್ಲಿ ಮುದಕನೊಬ್ಬನು ಮುಂದೆ ಬಂದು ಸಿಟ್ಟಿನಿಂದ 'ಹೆಚ್ಚು ಜನರನ್ನು ಬಂಧಿಸದಿದ್ದರೂ –ಲ್ಯಾಂಟ್‌ನೆಕ್‌ನನ್ನು ಬಂಧಿಸಿದ್ದಾರೆ

ಎಂದಮೇಲೆ ಎಲ್ಲರೂ ಕೈಗೆ ಸಿಕ್ಕಂತೆ. ಅವನೇ ಸಿಕ್ಕಮೇಲೆ-ಇನ್ನೇನುಳಿ ಯಿತು. ಎಲ್ಲವೂ ಮುಗಿದಂತೆಯೇ ' ಎಂದು ಮಾತನಾಡಿದನು.

' ಈ ಲ್ಯಾಂಟ್‌ನೆಕ್‌ನೆಂದರೆ ಯಾರು? ' ಎಂದೊಬ್ಬನು ವಿಚಾರಿಸಿದನು

' ಹೆಂಗಸರ ಕೊಲೆಯನ್ನು ಮಾಡುವವನು ' ಎಂದು ಯಾವನೋ ಉತ್ತರವಿತ್ತನು.

' ನಿಜವಾಗಿಯೇ ಅಹುದು ' ಎಂದು ಆ ಸ್ತ್ರೀಯು ನಡುವೆ ಬಾಯಿ ಹಾಕಿದಳು ಅದನ್ನು ಕೇಳಿ ಎಲ್ಲರೂ ಆಕೆಯನ್ನು ನೋಡತೊಡಗಿದರು.

' ಯಾಕೆಂದರೆ ನನಗೂ ಗುಂಡುಗಳನ್ನು ಹೊಡೆದರು ' ಎಂದು ಅವಳೆಂದಳು. ಅದನ್ನು ಕೇಳಿಹಮೇಲಂತೂ ಆ ಜನರು ಸಂಶಯಗ್ರಸ್ತರಾದರು. ಅವಳು ಗಾಬರಿಯಾಗಿದ್ದಳು ಒಂದೇ ಸವನೆ ನಡಗುತ್ತಿದ್ದಳು. ಅವಳ ಮುಖವನ್ನು ನೋಡಿದರೆ ಅಂಜಿಕೆ ಬರುತ್ತಿತ್ತು ದುರ್ದೈವದ ಚರಮಸೀಮೆಯನ್ನು ಮುಟ್ಟಿರುವ ಆ ತಾಯಿಯನ್ನು ಕಂಡು ಸೂಕ್ಷ್ಮದೃಷ್ಟಿಯಿಲ್ಲದ ಆ ಜನರಿಗೆ ಇವಳ ಬಗ್ಗೆ ಕನಿಕರವಾದರೂ ಹೇಗೆ ಹುಟ್ಟಬೇಕು? ಆ ಜನರ ತರ್ಕವಿತರ್ಕ ನಡವೆ ಇತ್ತು · ಇವಳೊಬ್ಬ ಗುಪ್ತಕಾರಸ್ಥಾನಿ ಇರಬೇಕು ' ಎಂದೊಬ್ಬನು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದನು.

' ಏ, ಸುಮ್ಮನೆ ಬಾಯಿ ಮುಚ್ಚಿಕೊಂಡು ಇಲ್ಲಿಂದ ಹೊರಟು ಹೋಗು ' ಎಂದು ಹೆಂಗಸೊಬ್ಬಳು ಅವಳಿಗೆ ಹೇಳಿದಳು.

' ನಾನು ಯಾರಿಗೂ ತೊಂದರೆ ಕೊಡುವದಿಲ್ಲ. ನಾನು ನನ್ನ ಮಗುಗಳನ್ನು ಹುಡುಕುತ್ತಿರುವೆನು ' ಎಂದು ಆ ತಾಯಿಯು ಉತ್ತರಕೊಟ್ಟಳು.

' ಇವಳು ಗುಪ್ತಕಾರಸ್ಥಾನಿಯಲ್ಲ. ಹುಚ್ಚುಗಿಚ್ಚು ಹಿಡಿದಿರಬಹುದು ' ಎಂದೆಂದು ಆ ಹೆಂಗಸು ಆ ತಾಯಿಯನ್ನು ಒಂದು ಬದಿಗೆ ಕರೆದುಕೊಂಡು ಹೋಗಿ ರೊಟ್ಟಿಯನ್ನು ಕೊಟ್ಟಳು. ಅವಳು ಕೊಟ್ಟ ರೊಟ್ಟಿಯನ್ನು ಆ ತಾಯಿಯು ಗಪಗಪನೆ ತಿಂದುಹಾಕಿದಳು.

' ನೋಡಿರಿ ರೊಟ್ಟಿಯನ್ನು ಹೇಗೆ ತಿಂದಳು! ಹುಚ್ಚಿಯೇ ಆಗಿರಬಹುದು ' ಎಂದು ಜನರು ಅಂದುಕೊಳ್ಳುತ್ತ ತಮ್ಮ ಮನೆಯ ದಾರೀಹಿಡಿ

ಪರು. ರೊಟ್ಟಿಯನ್ನು ತಿಂದನಂತರ ಆ ತಾಯಿಯು ಒಕ್ಕಲಿಗಳಿಗೆ ಲಾಟೋರ ಎಲ್ಲಿದೆ ಹೇಳು?' ಎಂದು ವಿಚಾರಿಸಿದಳು.

'ಅಲ್ಲೇಕೆ ಸಾಯಲು ಹೋಗುವಿ? ಮೇಲಾಗಿ ಅದೆಲ್ಲಿದೆಯೋ ಏನೋ ನನಗೂ ಗೊತ್ತಿರುವದಿಲ್ಲ. ನಿನಗೆ ಹುಚ್ಚೇ ಹಿಡಿದಿದೆ. ನೀನು ಬಹಳ ಬಳಲಿರುವಿ. ಆದಕಾರಣ ನಮ್ಮ ಮನೆಗೆ ಬಾ. ಒಂದಿಷ್ಟು ವಿಶ್ರಾಂತಿಯನ್ನು ತೆಗೆದುಕೋ' ಎಂದು ಆಕೆ ಅವಳಿಗೆ ಹೇಳಿದಳು.

'ಛೇ, ಛೇ ನನಗೆ ವಿಶ್ರಾಂತಿಯೆಲ್ಲಿ? ಅವರು ನನ್ನ ಮಗುಗಳನ್ನು ಒಯ್ದಿರುವರೆಂದು ಆಗಲೆ ನಾನು ಹೇಳಲಿಲ್ಲವೆ? ನಾನು ಅಡವಿಯೊಳಗಿಂದ ಬಂದೆ. ಬೇಕಾದರೆ ಟೇಲ್‌ಮಾರ್ಚನನ್ನು ಕೇಳಿರಿ. ಅರಣ್ಯದಲ್ಲಿ ಬೆಟ್ಟಿಯಾದ ಟೇಲ್‌ಮಾರ್ಚನೇ ನನಗೆ ಔಷಧ ಕೊಟ್ಟು ಗುಣಪಡಿಸಿದನು. ನನಗೆ ಗುಂಡು ಬಡಿದು ಎಲುಬು ಮುರಿದಿದ್ದುವಂತೆ. ನನಗೆ ಗಾಯವಾದದ್ದು ಅಷ್ಟೇ. ಇನ್ನು ರೇಡೋನನ್ನು ಬೇಕಾದರೆ ನನ್ನ ಬಗ್ಗೆ ವಿಚಾರಿಸಬಹುದು. ಅವನು ನನ್ನ ವಿಷಯವಾಗಿ ಹೇಳಬಲ್ಲ. ಅವನೂ ನನಗೆ ಅರಣ್ಯದಲ್ಲಿ ಭೆಟ್ಟಿಯಾಗಿದ್ದ. ನನ್ನ ಮಕ್ಕಳು ಮೂರು! ಹಿರಿಯನ ಹೆಸರು ರೇನೀಜಿನ್. ನನ್ನ ಗಂಡ ಸತ್ತನು. ಅವರು ಅವನನ್ನು ಕೊಂದುಹಾಕಿದರು. ಅವನು ಒಕ್ಕಲತನ ಮಾಡುತ್ತಿದ್ದನು. ನೀವು ಬಲು ಒಳ್ಳೆಯವರೆಂದು ಕಾಣುತ್ತೀರಿ. ನನಗೆ ಲಾಟೋರಿನ ಹಾದಿಯನ್ನು ತೋರಿಸಿಕೊಡಬಾರದೇ? ನನಗೆ ಹುಚ್ಚುಹಿಡಿದಿಲ್ಲ; ನಾನು ಹುಚ್ಚಿಯಲ್ಲ. ನಾನು ತಾಯಿಯಿದ್ದೇನೆ. ನನ್ನ ಮಕ್ಕಳು ಅಪಹೃತವಾಗಿವೆ. ನಾನು ಅವರನ್ನು ಹುಡುಕುತ್ತಲಿದ್ದೇನೆ. ನಾನು ಇಲ್ಲಿಗೆ ಹೇಗೆ ಬಂದೆನೆಂಬದು ದೇವರೇ ಬಲ್ಲ! ನಾನು ಲಾಟೋರಿನ ಕಡೆಗೆ ಹೊರಟಿದ್ದೇನೆ. ನಾನೇನು ತುಡುಗಿಯಲ್ಲ. ನಾನು ನನ್ನ ಮಕ್ಕಳ ಶೋಧವನ್ನಷ್ಟೇ ಮಾಡುತ್ತಿದ್ದೇನೆ. ನನಗೆ ಗುಂಡು ಬಡಿಯಿತು. ಎಲ್ಲಿ ಬಡಿಯಿತೆಂಬುದೂ ನನಗೆ ಗೊತ್ತಾಗಿಯೋ ಇಲ್ಲ."

ಆ ಒಕ್ಕಲಿಗರ ಹೆಣ್ಣು ಮಗಳು ತಲೆಯನ್ನು ಬಗ್ಗಿಸಿ 'ಇದು ನೋಡು, ಈ ಬಂಡಾಯದ ಕಾಲವಲ್ಲಿ ಜನರಿಗೆ ಗೊತ್ತಾಗದ ರೀತಿಯಲ್ಲಿ

ಮಾತನಾಡಿದರೆ ನಡೆಯುವದಿಲ್ಲ. ಹೀಗೆಯೇ ನೀನು ನಡೆದದ್ದಾದರೆ ಬಂಧ ನಕ್ಕೊಳಗಾಗುವಿ' ಎಂದು ಅವಳಿಗೆ ಹೇಳಿದಳು.

"ಆದರೆ ಲಾಟೋರ್ ಎಲ್ಲಿದೆ? ನಾನು ನಿನ್ನ ಕಾಲಿಗೆ ಬೀಳುತ್ತೇನೆ. ಬಿನ್ನವಿಸಿಕೊಳ್ಳುತ್ತೇನೆ. ದೇವರ ಆಣೆಯನ್ನು ತಿನ್ನುತ್ತೇನೆ, ದಯವಿಟ್ಟು ಲಾಟೋರ್ ಎಲ್ಲಿದೆ ಎಂಬದನ್ನಷ್ಟು ಹೇಳಬೇಕು."

ಆ ಒಕ್ಕಲಿಗರವಳು ಸಿಟ್ಟಿಗೆದ್ದು 'ನನಗೆ ಗೊತ್ತೇ ಇಲ್ಲ- ಅದೆಲ್ಲಿದೆ ಎಂಬುದು ಗೊತ್ತಿದೆ. ಎಂದರೂ ನಾನು ಹೇಳುವದೇ ಇಲ್ಲ. ಅದು ಕೆಟ್ಟ ಸ್ಥಳವಿದೆ. ಜನರು ಆ ಕಡೆ ಹೋಗುವದೇ ಇಲ್ಲ."

'ನಾನು ಮಾತ್ರ ಹೋಗಿಯೇ ತಿರುವವಳು--' ಎಂದೆನ್ನುತ್ತ ಆ ತಾಯಿಯು ಅಲ್ಲಿಂದ ಕಾಲ್ಕಿತ್ತಿದಳು. ಒಕ್ಕಲಿಗರವಳು ಅವಳನ್ನು ಹುಳು ಹುಳು ನೋಡುತ್ತ ನಿಂತು 'ನಿನಗೆ ತಿನ್ನಲೂ ಏನಾದರೂ ಬೇಕಲ್ಲ! ೨-೩ ರೊಟ್ಟಿ ತೆಗೆದುಕೋ. ರಾತ್ರಿಗೆ ಬೇಕಾಗಬಹುದು.' ಎನ್ನುತ್ತ ಓಡುತ್ತ ಹೋಗಿ ಅವಳಿಗೆ ಕೊಟ್ಟಳು. ಅವಳು ರೊಟ್ಟಿಯನ್ನು ತೆಗೆದುಕೊಂಡು ಆಕೆಯನ್ನು ನೋಡದೆ ಬಿರಬಿರನೆ ಮುಂದೆ ಸಾಗಿಯೇ ಬಿಟ್ಟಳು.

ಅವಳು ಊರ ಹೊರಗೆ ಬಂದಳು. ಆ ಹಳ್ಳಿಯ ಹದ್ದಿಯಲ್ಲಿ ಅವಳಿಗೆ ಎರಡು ಹೆಣ್ಣು ಹುಡುಗಿಯರು ಮತ್ತು ಒಬ್ಬ ಹುಡುಗ ಭೆಟ್ಟಿಯಾದರು. ಆ ಹುಡುಗರಿಗೆ ಕಾಲಲ್ಲಿರಲಿಲ್ಲ. ಬಟ್ಟೆಗಳೂ ಹರಿದು ಚಿಂದಿಯಾಗಿದ್ದವು. ಅವಳು ಹತ್ತಿರಹೋಗಿ ನೋಡಿದಳು. 'ಒಬ್ಬ ಹುಡುಗ. ಇಬ್ಬರು ಹುಡುಗಿಯರು' ಎಂದಂದು ತೆಪ್ಪಗಾದಳು. ಆ ಹುಡುಗರು ತನ್ನಕಡೆಗೆ ನೋಡುವದನ್ನು ಕಂಡು ಆ ತಾಯಿಯು ಅವರಿಗೆ ಆ ರೊಟ್ಟಿಯನ್ನು ಕೊಟ್ಟುಬಿಟ್ಟಳು ಅವು ರೊಟ್ಟಿಯನ್ನು ತೆಗೆದುಕೊಂಡವು. ಅವಳು ಅಡವಿಯನ್ನು ಸೇರಿದಳು-ತನ್ನ ಮಗುಗಳು ಅಲ್ಲವೆಂದು.

ಆ ಅಡವಿಯೊಳಗಿಂದ ಒಂದು ದಾರಿಯು ಲಾಟೋರಿಗೆ ಹೋಗಿತ್ತು. ಆ ಹಾದಿ ನಾಗಮುರಿಗೆಯಂತಿತ್ತು. ಆ ದಾರಿಯು ಎರಡೂ ಬದಿಗೆ ಬೇಲಿಯನ್ನು ಹಾಕಲಾಗಿತ್ತು. ಆದ್ದರಿಂದ ಆ ಸ್ಥಳವು ಅಡಗಿಕೊಂಡು ಕೊಡ್ರಲು ಬಲು ಅನುಕೂಲವಾಗಿತ್ತು. ಅಲ್ಲಿ ಮುಂಜಾನೆಯಿಂದ ಕೆಲವರು

ಕುಳಿತೇ ಬಿಟ್ಟಿದ್ದರು. ಗಿಡಗಂಟಿಗಳ ಝುಡುಪಿನಿಂದ ಅವರು ಯಾರಿಗೂ ಕಾಣಿಸುವಂತಿರಲಿಲ್ಲ. ಅವರು ಒಕ್ಕಲಿಗರಿದ್ದು, ಅವರ ಮೈಯಲ್ಲಿ ತೊಗಲಿನ ಉಡುಪಗಳಿದ್ದವು. ಕೆಲವರ ಕೈಯಲ್ಲಿ ಕೊಡಲಿ; ಕೆಲವರ ಕೈಯಲ್ಲಿ ಬಂದೂಕುಗಳಿದ್ದವು. ಯಾರ ಕೈಯಲ್ಲಿ ಕೊಡಲಿಗಳಿದ್ದುವೋ ಅಂಥವರು ಗಿಡಗಳ್ನು ಕಡಿಕಡಿದು ಕಟ್ಟಿಗೆಯ ರಾಶಿಯನ್ನೇ ಒಟ್ಟಿಬಿಟ್ಟಿದ್ದರು. ಅದಕ್ಕೆ ಬೆಂಕಿಯನ್ನು ಹಚ್ಚುವದೊಂದೇ ಉಳಿದಿತ್ತು ಯಾರ ಕೈಯಲ್ಲಿ ಕೊಡಲಿಗಳಿರಲಿಲ್ಲವೋ ಅಂಥವರು ಯಾರದೋ ಬರುವಿಕೆಯನ್ನು ನಿರೀಕ್ಷಿಸುತ್ತ ಕುಳಿತಿದ್ದರು ಬಂದೂಕು ಹಿಡಿದುಕೊಂಡವರು ಬಂದೂಕಿನ ಕುದುರೆಯ ಮೇಲೆ ಬೆರಳನ್ನಿಟ್ಟುಕೊಂಡು ಸಿದ್ಧರಾಗಿಯೇ ನಿಂತಿದ್ದರು. ಹೊತ್ತೇರಿದಂತೆ ಆ ಭಾಗವೆಲ್ಲವೂ ನಿಚ್ಚಳಾಗಿ ಕಾಣತೊಡಗಿತು.

ಅಲ್ಲಿದ್ದ ಶಾಂತ ವಾತಾವರಣವೆಲ್ಲ ಒಮ್ಮೆಲೆ ಭಂಗವಾಯಿತು. ಕುದುರೆಗಳ ಖುರಪುಟಧ್ವನಿಯೂ, ಗಾಡಿಯ ಗಾಲಿಗಳ ಸಪ್ಪಳವೂ ಕೇಳಬಂದಿತು. ಆ ಅಡಗಿ ಕುಳಿತವರಿಗೆ ಅಲ್ಲಿ ಬರುತ್ತಿರುವ ಕುದುರೆಗಳೂ, ಗಾಡಿಯೂ, ಗಾಡಿಯ ಮೇಲೆ ಹೇರಿದ ಏನೋ ಒಂದು ಪದಾರ್ಥವೂ ಸ್ಪಷ್ಟವಾಗಿ ಕಾಣಬಂದವು.

'ಓಹೋ! ಅಲ್ಲಿ ನೋಡಿರಿ-ಬರುತ್ತಿದೆ" ಎಂದು ಆ ತಂಡದ ಮುಖ್ಯಸ್ಥನು ಉಳಿದವರಿಗೆ ಹೇಳಿದನು.

"ಅವರು ಎಷ್ಟು ಜನರಿರಬಹುದು?"

"ಹನ್ನೆರಡು ಇರಬಹುದು."

"ನಾವಂತೂ ಇಪ್ಪತ್ತು ಜನರಿದ್ದೇವಲ್ಲವೆ?"

"ಹನ್ನೆರಡು ಅಥವಾ ಇಪ್ಪತ್ತು ತೆಗೆದುಕೊಂಡೇನು ಮಾಡುವದು? ಅವರನ್ನು ಹೊಡೆದು ಹಾಕಲೇ ಬೇಕು."

"ನಿಲ್ಲಿರಿ. ನಮ್ಮ ಆಟೋಪಿನಲ್ಲಿ ಬರಲಿ."

ಅಷ್ಟರಲ್ಲಿ ಆ ಗಾಡಿಯು ಸಮೀಪಕ್ಕೆ ಬಂದಿತು. ಗಿಡಗಂಟಿಯೊಳಗಿಂದ ರಾಜಸಿಗೆ ಜಯವಾಗಲಿ! ಎಂಬ ಧ್ವನಿಯೆದ್ದಿತು. ನೂರಾರು ಬಂದೂಕುಗಳು ಒಮ್ಮೆಲೆ ಹಾರಿದವು. ಅವರಲ್ಲಿಯ ಏಳು ಜನರು ಪ್ರಾಣಕ್ಕೆರವಾದರು;

ಐದು ಜನರು ಕಾಲಿಗೆ ಬುದ್ಧೀ ಹೇಳಿದರು. ಆದ್ದರಿಂದ ಈ ತಂಡದವರು ಆ ಗಾಡಿಯ ಸಮೀಪಕ್ಕೆ ತೆರಳಿದರು.

"ಓಹೋ ನಿಲ್ಲಿರಿ. ಇದು ನಿಚ್ಚಣಿಕೆ! ಇದು ಕುತ್ತಿಗೆಯನ್ನು ಕೊಯ್ಯುವ ಯಂತ್ರವಲ್ಲ. ಇದು ಲಾಟೋರಿಗೆ ಹೊರಟಂತೆ ಕಾಣುತ್ತದೆ."

'ಎಲ್ಲಿಗಾದರೂ ಹೋಗಲೊಲ್ಲದು. ಮೊದಲು ಇದನ್ನು ಸುಟ್ಟು ಹಾಕಿರಿ' ಎಂದೊಬ್ಬ ಒಕ್ಕಲಿಗನು ರಭಸದಿಂದ ಕೂಗಿದನು.

ಯಾವ ಗಾಡಿಯು ಈ ದಾರಿಯಿಂದ ಬರಬಹುದೆಂದು ಅವರು ಜಪ್ಪಿಸಿ ಕುಳಿತಿದ್ದರೋ ಆ ಗಾಡಿಯು ಎರಡನೆಯ ಹಾದಿಯಿಂದ ಹೊರಟು ಹೋಗಿತ್ತು. ಆ ದಾರಿ ಇಲ್ಲಿಗೆ ಎರಡು ಮೈಲುಗಳ ಮೇಲಿತ್ತು.



## ೧೫.

ಲಾಟೋರದ ದಾರಿಯನ್ನು ಹುಡುಕುತ್ತ ಆ ತಾಯಿಯು ಅಡವಿಯಲ್ಲಿ ನಡೆದಿದ್ದಳು. ಆ ಅಡವಿಯಲ್ಲಿ ಅನೇಕ ದಾರಿಗಳು ಒಡೆದಿದ್ದವು. ಯಾವ ದಾರಿಯಿಂದ ಹೋದರೆ ಆ ಲಾಟೋರ ಹತ್ತುತ್ತದೆಂಬದನ್ನು ಆಕೆಗೆ ಹೇಳುವ ವರಾರೂ ಇರಲಿಲ್ಲ. ಮನಸ್ಸಿಗೆ ಬಂದ ದಾರಿಯನ್ನು ಹಿಡಿದು ಅವಳು ಸಾಗಿದ್ದಳು. ತೀರ ದಣಿವಾಯಿತೆಂದರೆ ಕೂಡ್ರುವಳು. ಕುಳಿತು ಬೇಸತ್ತಳೆಂದರೆ ಮುಂದಕ್ಕೆ ಪ್ರಯಾಣ ಬೆಳೆಸುವಳು. ಇಷ್ಟೆಲ್ಲ ಶ್ರಮವನ್ನು ಪಡುತ್ತಿದ್ದರೂ ಅವಳಿಗೆ ಮಕ್ಕಳ ಬೆಟ್ಟಿಯು ಮುಂದೆ ಕಃಪದಾರ್ಥವೆಂದು ಅವಳ ಭಾವನೆಯಾಗಿತ್ತು. ಹೆಚ್ಚೆಚ್ಚು ತಡವಾದಂತೆಲ್ಲ ತನ್ನ ಹುಡುಗರ ಜೀವವನ್ನು ಹೆಚ್ಚು ಸಂಕಟಕ್ಕೀಡು ಮಾಡಿದಂತಾಗುವದೆಂದು ಅವಳು ಒತ್ತರದಿಂದ ದಾರಿಯನ್ನು ತುಳಿಯುತ್ತಿದ್ದಳು. ದಾರಿಯಲ್ಲಿ ಯಾವ ಹಳ್ಳಿಯೂ ಹತ್ತಲಿಲ್ಲ. ಒಂದು ನರಪಿಳ್ಳೆಯ ದರ್ಶನವೂ ಆಗಲಿಲ್ಲ ಎಲ್ಲಿಯೋ ದಾರಿ ತಪ್ಪಿತು. ದಟ್ಟ ಅರಣ್ಯದಲ್ಲಿ ಹೊಕ್ಕಳು. ಸೂರ್ಯನು ಪಶ್ಚಿಮದ ಕಡೆಗೆ ಸಾಗಿದ್ದನು.

ಅರಣ್ಯದಲ್ಲಿ ಕತ್ತಲು ಕವಿಯು ತೊಡಗಿತ್ತು. ಪರಮೇಶ್ವರನ ಆಶ್ರಯವೊಂದಲ್ಲದೆ ಬೇರಾವ ಆಶ್ರಯವೂ ಅವಳಿಗೆ ಉಳಿದಿರಲಿಲ್ಲ. ಹುಚ್ಚಿಯಂತೆ ಚೀರಾಡಿದಳು; ಕೂಗಾಡಿದಳು. ಅದೆಲ್ಲ ಅರಣ್ಯರೋದನವಾಯಿತು. ಆ ನಿರ್ಜನಾರಣ್ಯದಲ್ಲಿ ಅವಳ ಕೂಗಿಗೆ ಓ ಕೊಡುವರಾರು ? ಅತ್ತಿತ್ತ ಸುಳಿದಾಡಿದಳು. ಕೊನೆಗೆ ಗಿಡಗಳ ಸಂದಿಯೊಳಗಿಂದ ಬಯಲ ಪ್ರದೇಶವು ಅವಳಿಗೆ ಕಾಣಬಂದಿತು. ಆ ಗಿಡಗಳನ್ನು ದಾಟಿ ಬಂದಳು. ಅಲ್ಲಿ ಹಳ್ಳವು ಹರಿಯುತ್ತಲಿತ್ತು. ಆ ಹಳ್ಳದ ತಿಳಿ ನೀರನ್ನು ಕಂಡು ಅವಳಿಗೆ ನೀರಡಿಕೆಯು ನೆನಪಾಯಿತು. ಕೈಕಾಲು ಮೋರೆ ತೊಳೆದುಕೊಂಡು ಹೊಟ್ಟೆ ತುಂಬ ನೀರು ಕುಡಿದಳು. ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊಂಡವಳೆ ಮತ್ತೆ ಎದ್ದಳು. ಯಾವ ದಿಕ್ಕಿನಿಂದ ಹೊರಡಬೇಕೆಂಬದು ಅವಳಿಗೆ ದಿಗಿಲು ಬಿದ್ದಿತು. ಹಳ್ಳವನ್ನು ದಾಟಿ, ಎಷ್ಟೋ ದೂರ ಬಂದ ಮೇಲೆ ಅಭಾಗಿನಿಯಾದ ಆ ತಾಯಿಯು ‘ ಇಲ್ಲಿ ಯಾರಾದರೂ ಇರುವಿರಾ ? ’ ಎಂದು ಗಂಟಲು ಹರಿಯುವಂತೆ ಚೀರಿದಳು. ಆ ಕೂಗಿಗೆ ಉತ್ತರ ಬಂದೀತೆಂದು ಅವಳು ಸ್ವಲ್ಪ ಸಮಯ ದಾರಿ ಕಾಯ್ದಳು.ಮಾನವರ ಧ್ವನಿಯು ಉತ್ತರಗೊಡುವದು ಸಾಧ್ಯವೂ ಇರಲಿಲ್ಲ. ಎಷ್ಟೋ ದೂರಿನಿಂದ ಕೇಳಬರುವ ಪ್ರತಿಧ್ವನಿ ಮಾತ್ರ ಮಂದವಾಗಿ ಕೇಳಬರುತ್ತಿತ್ತು. ಅದನ್ನು ಲಕ್ಷ್ಯವಿಟ್ಟು ಕೇಳಿದಳು. ಆ ಪ್ರತಿಧ್ವನಿಯು ತೋಫಿನ ಗರ್ಜನೆಯದಿರಬೇಕೆಂದು ಅವಳ ಕಲ್ಪನೆಯಾಯಿತು. ಅದೇ ತನ್ನ ಕೂಗಿಗೆ ಉತ್ತರವೆಂದು ಅವಳ ನಂಬಿಗೆಯಾಯಿತು.

ಮತ್ತೆ ಮೊದಲಿನಂತೆ ಶಾಂತತೆ ಪಸರಿಸಿತು. ಆ ಪ್ರತಿಧ್ವನಿಯನ್ನು ಕೇಳಿ ಅವಳಲ್ಲಿ ಚೈತನ್ಯವುಂಟಾಯಿತು. ಈ ಅರಣ್ಯದಲ್ಲಿ ಯಾರಾದರೂ ಇರುವರು; ಅವರೊಡನೆ ಇಂದು ಮಾತನಾಡುವೆನು ಎಂದವಳಿಗೆನಿಸಿತು. ಅದೇ ನೀರು ಕುಡಿದುದರಿಂದ ಅವಳ ಮೈಯ್ಯಲ್ಲಿ ಶಕ್ತಿಯುಂಟಾಗಿತ್ತು. ಆ ಪ್ರತಿಧ್ವನಿ ಎತ್ತಲಿಂದ ಕೇಳಿಸಿತೋ ಆ ಕಡೆಗೆ ಮುಖ ತಿರುಗಿಸಿದಳು. ಕತ್ತಲೆ ಕವಿಯತೊಡಗಿದ್ದರೂ ಪುತ್ರ ಪ್ರೇಮದ ಸಲುವಾಗಿ ಅವಳಿಗೆ ಮಾರ್ಗದಲ್ಲಿ ಪ್ರಕಾಶ ಬಿದ್ದಂತೆ ಕಂಡು ಬಂದಿತು. ಅಷ್ಟರೊಳಗೆ ಬಹಳ ದೂರದಲ್ಲಿದ್ದ ದೊಡ್ಡ ಬುರುಜೊಂದು ಅವಳ ಕಣ್ಣಿಗೆ ಬಿದ್ದಿತು.

ಕಣ್ಣಿಗೆ ಬಿದ್ದರೂ ಅದು ಮೂರು ಮೈಲಿನಾಚೆಗಿತ್ತು. ಅದು ಗಿಡ ಗಂಟೆಗಳೊಳಗಿಂದ ಒಡೆದು ಕಾಣುವಷ್ಟು ಎತ್ತರವಾಗಿತ್ತು. ತನಗೆ ಕೇಳ ಬಂದ ಪ್ರತಿಧ್ವನಿಯು ಆ ಬುರುಜಿನಿಂದಲೇ ಬಂದಿರಬೇಕೆಂದು ಅವಳಿಗೆ ನಿಸಿತು ಆ ಪ್ರತಿಧ್ವನಿಯು ತನಗೆ ಆಹ್ವಾನವನ್ನು ಕೊಟ್ಟು ಕರೆಯಿಸಿ ಕೊಳ್ಳುತ್ತಿದೆ ಎಂದೆನ್ನುತ್ತ ಭರಭರಾಟಿಯಿಂದ ಆ ಕಡೆಗೆ ಧಾವಿಸಿದಳು.

* * * * *

ಹೊತ್ತು ಸಮೀಪಿಸುತ್ತ ಬಂದಿತ್ತು. ಸಿಮೋರೆಡಿನ್‌ನ ಕೈಯಲ್ಲಿ ಲ್ಯಾಂಟ್‌ನೆಕ್‌ನು ಸಿಕ್ಕಂತಾಗಿತ್ತು. ಸಿಂಹವನ್ನು ಅದರ ಗವಿಯಲ್ಲಿಯೇ ಹೋಗಿ ಹಿಡಿಯುವಂಥ ಪ್ರಸಂಗವೇ ಬಂದಂತಾಗಿತ್ತು. ಲ್ಯಾಂಟ್‌ನೆಕ್‌ನಿಗೆ ಓಡಿಹೋಗುವದು ಅಶಕ್ಯವಿತ್ತು. ಆದ್ದರಿಂದ ಅವನ ಸ್ವಂತ ಊರಿನಲ್ಲಿ ಅವನ ಪೂರ್ವಜರ ಕಟ್ಟಡದ ಎದುರಿನಲ್ಲಿ ಲ್ಯಾಂಟ್‌ನೆಕ್‌ನ ಶಿರಚ್ಛೇದ ವನ್ನು ಮಾಡಬೇಕೆಂದು ಸಿಮೋರೆಡಿನ್‌ನು ಹಂಚಿಕೆಯ ಹೊಂಚು ಹಾಕಿ ದ್ದನು. ಆ ಉದ್ದೇಶದಿಂದಲೇ ಅವನು ಕುತ್ತಿಗೆಯನ್ನು ಕತ್ತರಿಸುವ ಯಂತ್ರ ವನ್ನು ತರಬೇಕೆಂದು ಅಪ್ಪಣೆ ಮಾಡಿದ್ದನು.

ಲ್ಯಾಂಟ್‌ನೆಕ್‌ನನ್ನು ಹೊಡೆಯುವದೆಂದರೆ ಬಂಡಾಯದ ಇತಿ ಶ್ರೀಯನ್ನೇ ಮಾಡಿದಂತಿತ್ತು. ವೆಂಡಿಯನ್ನು ನಾಶಗೊಳಿಸುವದೆಂದರೆ ಫ್ರಾನ್ಸವನ್ನು ರಕ್ಷಿಸಿದಂತಾಗುತ್ತಿತ್ತು. ಸಿಮೋರೆಡಿನ್‌ನು ದಯೆ-ಮಾಯೆ ಯನ್ನು ತೋರಿಸುವಂಥ ಮನುಷ್ಯನಾಗಿರಲಿಲ್ಲ. ಅವನ ಅಂತಃಕರಣವು ಪವಿತ್ರವಿತ್ತು. ಆದರೆ ಕರ್ತವ್ಯ ಪಾಲನೆಯ ಮೂಲಕ ಇಂಥ ಕರಾಳ ಕೃತ್ಯ ವನ್ನು ಮಾಡುವ ಪ್ರಸಂಗವು ಅವನಿಗೆ ಬಂದಿತ್ತು.

ಲ್ಯಾಂಟ್‌ನೆಕ್‌ನ ಪರಿಸ್ಥಿತಿಯು ಚಿಂತಾಜನಕವಾಗಿತ್ತು. ಅವರೂ ಖಡೆಯ ಕುಸ್ತಿಯು ಖಡಕಾಗುವದರಲ್ಲಿ ಸಂದೇಹವೇ ಇರಲಿಲ್ಲ ಗಾವೆ ನ್‌ನೇ ಅದರ ಸೂತ್ರಧಾರಕನು. ಅವನು ಹುಟ್ಟು ಶೂರನಾಗಿದ್ದನು. ಅವನೇ ಈ ಯುದ್ಧದಲ್ಲಿ ಸತ್ತರೆ ? ಗಾವೆನ್‌ನು ಅವನ ಮಗನಾಗಿದ್ದನು. ಇಷ್ಟೊತ್ತಿನವರೆಗೆ ದೈವವು ಗಾವೆನ್‌ನಿಗೆ ಒಲಿದಿತ್ತು. ಆದರೆ ದೈವವು

ಯಾವಾಗ ತಿರುಗಿ ಬೀಳುವದೋ ಹೇಳಬಲ್ಲವರಾರು ? ಸಿಮೋರೆಡಿನ್‌ನ ಮನಸ್ಸಿನಲ್ಲಿ ಈ ತರದ ವಿಚಾರಗಳು ತಾಕಲಾಟ ನಡೆಸಿದ್ದವು. ಅವನು ಈ ಗಾವೆನ್‌ದ್ವಯರಲ್ಲಿ ಸಿಕ್ಕು ಪೇಚಾಡುತ್ತಿದ್ದನು. ಅವರಿಬ್ಬರಲ್ಲಿ ಒಬ್ಬನು ಮಾರಿಗೆ ಆಹುತಿಯಾಗಬೇಕು; ಮತ್ತೊಬ್ಬನು ಪ್ರಸಾದವಾಗಬೇಕೆಂದು ಸಿಮೋರೆಡಿನ್‌ನ ಇಚ್ಛೆಯಾಗಿತ್ತು.

ಒಪ್ಪಂದದ ಕರಾರಿನ ವೇಳೆ ಮುಗಿಯ ಬಂದಿತು ಎಂಬ ಎಚ್ಚರಿಕೆಯನ್ನು ಕೊಡುವ ಸಲುವಾಗಿ ಈ ತೋಫು ಹಾರಿಸಲಾಗಿತ್ತು. ಆದರಿಂದ ಆ ತಾಯಿ ಈ ಕಡೆಗೆ ಬರುವಂತೆ ಮಾಡಿತು ಇತ್ತ ಜಾರ್ಜಿಟ್ ಎದ್ದಿತು. ಅದು ಆ ಕಬ್ಬಿಣದ ಬಾಗಿಲಿಗೆ ಅಪ್ಪಳಿಸಿದ್ದರಿಂದ ಆ ಬಾಗಿಲವು ಅರ್ಧ ಮರ್ಧ ಮುರಿದೇ ಹೋಗಿತ್ತು. ಒಳಗಿದ್ದ ಜನರಿಗೆ ಆ ಬಾಗಿಲವನ್ನು ನೆಟ್ಟಗೆ ಮಾಡಲು ಸಮಯವೇ ಇರಲಿಲ್ಲ.

ಒಳಗಿದ್ದ ಆ ೧೯ ಜನರು ಸೆಡವಿನಿಂದಲೇ ಇದ್ದರು. ಆದರೆ ಅವರ ಹತ್ತಿರ ಮದ್ದು-ಗುಂಡುಗಳು ನಾಕಷ್ಟಿರಲಿಲ್ಲ. ಇದ್ದದ್ದಾಗಿದ್ದರೆ ಆ ಲಾಟೋರ ಕಿಲ್ಲೆಯನ್ನು ಯಾವಾಗಲೋ ಉಧ್ವಸ್ತ ಮಾಡಿ ಬಿಡಬಹುದಾಗಿತ್ತು. ಶತ್ರುಗಳನ್ನು ಹಣ್ಣುಗಾಯಿ ನೀರುಗಾಯಿ ಮಾಡುತ್ತಿದ್ದರು. ಒಬ್ಬೊಬ್ಬರು ೩೦ ಸುತ್ತು ಹಾರಿಸುವಷ್ಟು ಮದ್ದಿನ ಸಂಗ್ರಹವಿತ್ತು. ಅವರ ಹತ್ತಿರ ಕತ್ತಿ-ಕಠಾರಿಗಳ ಸಂಗ್ರಹವು ಬಹಳಿದ್ದುದರಿಂದ ಕೈಗೆ ಕೈ ಹತ್ತಿದರೆ ಅಲ್ಲಿ ತಮ್ಮ ಕಾರ್ಯವ ಪ್ರದರ್ಶನ ಮಾಡಬೇಕೆಂದು ತವಕಪಡುತ್ತಿದ್ದರು. ಇದರಿಂದಲೇ ತಮಗೆ ಜಯವು ಬಂದರೂ ಬಂದೀತೆಂದು ಆಶೆಯನ್ನು ಹಿಡಿದು ಕುಳಿತಿದ್ದರು.

ಬುರುಜಿನೊಳಗಿನ ಭಾಗವು ಅಜಿಂಕ್ಯವಾಗಿತ್ತು. ಕೆಳಬದಿಗಿರುವ ದಿವಾಣಖಾನೆಯಲ್ಲಿ ಸುರಂಗದ ಹೊಡೆತದಿಂದ ತೂತುಬಿದ್ದ ಸ್ಥಳವಲ್ಲಿ ಬಲು ಕುಶಲತೆಯಿಂದ ರಚಿಸಿದ ಸ್ಥಳವು ತಾನಾಗಿಯೇ ಸುರಕ್ಷಿತವಾಗಿತ್ತು. ಇದರ ಹಿಂಬದಿಯಲ್ಲಿ ಒಂದು ದೊಡ್ಡ ಮೇಜಿನ ಮೇಲೆ ಆಯುಧಗಳ ಸಂಗ್ರಹವಿತ್ತು. ಬುರುಜನ್ನು ಹಾರಿಸಿ ಬಿಡಲು ಮದ್ದು ಇಲ್ಲದ್ದರಿಂದ ಒಳಗಿರುವ ಕತ್ತಲೆ ಕೋಣೆಯ ಬಾಗಿಲವು ನಿರುಪಯುಕ್ತವಾದ್ದರಿಂದ

ಅದನ್ನು ಮುಚ್ಚಲಾಗಿತ್ತು. ಕೆಳಗಿನ ಅಂತಸ್ತಿನಲ್ಲಿ ಒಂದು ಹಾಳು ಕೋಣೆ ಯಿತ್ತು. ಅದರಲ್ಲಿ ಸರ್ಪಾಕಾರದ ಇಕ್ಕಟ್ಟಿನ ಪಾವಟಿಗೆಗಳಿದ್ದವು. ಅಲ್ಲಿಯೂ ಶಸ್ತ್ರಾಸ್ತ್ರಗಳ ಸಂಗ್ರಹವನ್ನಿರಿಸಲಾಗಿತ್ತು. ಆ ಪಾವಟಿಗೆಗಳಿಂದ ಎರಡನೆಯ ಅಂತಸ್ತಿನೊಳಗಿನ ದುಂಡನ್ನ ಕೋಣೆಗೆ ಹೋಗಲು ಬರುತ್ತಿತ್ತು. ಅಲ್ಲಿಂದ ಕಬ್ಬಿಣ ಬಾಗಿಲದೊಳಗಿಂದ ಪೂಲಿಸ ಕಡೆಗೆ ಹೋಗುವ ಹಾದಿಯಿತ್ತು. ಈ ಕೋಣೆಯೊಳಗೆ ಶತ್ರುಗಳು ಬಂದರೆ ಒಳಗಿದ್ದ ಜನರು ಶರಣಾಗತರಾ ಗದೆ ಬೇರೆ ಗತಿಯೇ ಇರಲಿಲ್ಲ. ಇಲ್ಲಿಯವರೆಗೆ ಶತ್ರುಗಳು ಬರದಂತೆ ಏನು ಮಾಡಬೇಕೆಂಬ ವಿಚಾರದಲ್ಲಿ ಅವರು ಮಗ್ನರಾಗಿದ್ದರು.

ಮೇಲೆ ವರ್ಣಿಸಿದ ದುಂಡಗಿನ ಕೋಣೆಯಲ್ಲಿ ಬೆಳಕಿತ್ತು. ಬೆಂಕಿ ಯನ್ನು ಹೊತ್ತಿಸಲಾಗಿತ್ತು ಇಮಾನಸನು ಅಷ್ಟು ದಕ್ಷತೆಯಿಂದ ಈ ಕೆಲಸ ವನ್ನು ಮಾಡಿಟ್ಟಿದ್ದನು. ಆ ಬೆಂಕಿಯ ಹತ್ತಿರ ಗಂಧಕದ ಒಂದು ಬತ್ತಿ ಯನ್ನು ಇಟ್ಟಿದ್ದನು. ಕೆಳಗಿನ ಅಂತಸ್ತಿನಲ್ಲಿ ಮೇಜಿನ ಮೇಲೆ ಅನ್ನ, ರೊಟ್ಟಿ, ಪಲ್ಯ, ಹಣ್ಣು, ಮದ್ಯ ಮೊದಲಾದ ಪದಾರ್ಥಗಳಿದ್ದವು. ಹೊಟ್ಟೆ ಹಸಿವೆ ಯಾದರೆ ತಿನ್ನಲುಬೇಕೆಂದು ಈ ವ್ಯವಸ್ಥೆಯನ್ನೂ ಮಾಡಿಕೊಂಡಿದ್ದರು

ತೋಫಿನ ಗರ್ಜನೆಯಾದೊಡನೆಯೇ ಸುತ್ತೂ ಕಡೆಗೆ ಗೊಂದಲವೆ ದ್ದಿತು ವಿಶ್ರಾಂತಿಗೆ ಅರ್ಧ ತಾಸಾದರೂ ಉಳಿದಿರಲಿಲ್ಲ. ಬುರುಜಿನ ಮೇಲೆ ನಿಂತುಕೊಂಡು ಇಮಾನಸನು ಏರಿ ಬರುವಂಥ ಶತ್ರುಗಳನ್ನು ನೋಡ ತೊಡಗಿದ್ದನು. ಶತ್ರುಗಳು ಮುಂದೆ ಬಾರದ ಹೊರತು ಗುಂಡು ಹಾರಿಸಬಾರ ದೆಂದು ಲ್ಯಾಂಟ್‌ನಕ್‌ನ ಆಜ್ಞೆಯಾಗಿತ್ತು. “ ಅವರು ನಾಲ್ಕೂವರೆ ಸಾವಿರ ಇರುತ್ತಾರೆ. ಅವರನ್ನು ಬಹಿರಂಗವಾಗಿ ಎದುರಿಸುವದು ಅಶಕ್ಯ. ಅವರು ಒಳಹೊಕ್ಕು ಏರಿ ಬರುತ್ತಾರೆ. ಆಗ ನಾವು ಮತ್ತು ಅವರು ಸಮಬಲರಾಗು ತ್ತೇವೆ.” ಎಂದು ಅವನನ್ನುತ್ತಿದ್ದನು.

ಶತ್ರುಗಳು ಮುಂದೆ ಬರತೊಡಗಿದರೆಂದರೆ ಇಮಾನಸನು ತನ್ನ ತುತೂರಿಯನ್ನು ಊದಬೇಕೆಂದು ಗೊತ್ತಾಗಿತ್ತು. ಆ ಚಿಕ್ಕ ಸೈನ್ಯವು ಸರ್ವ ಸಿದ್ಧತೆಯನ್ನು ಮಾಡಿಕೊಂಡು ಯುದ್ಧಕ್ಕೆ ಸನ್ನದ್ಧವಾಗಿತ್ತು.

ಇತ್ತ ಗಾವೆನ್‌ನೂ ತನ್ನ ಸಿದ್ಧತೆಯನ್ನು ದಕ್ಷತೆಯಿಂದ ಮಾಡಿ ಕೊಂಡಿದ್ದನು. ಅವನು ಸಿಮೋರೆಡಿನ್‌ನಿಗೆ ಕೊನೆಯ ಸೂಚನೆಯನ್ನು ಕೊಟ್ಟುಬಿಟ್ಟನು. ಅವನ ಕಡೆಗೆ ಬುರುಜಿನ ಹತ್ತಿರವಿರುವ ಬಯಲಿನ ಸಂರಕ್ಷಣೆಯ ಹೊಣೆಯನ್ನು ಹೊರಿಸಲಾಗಿತ್ತು. ಗುಶಿಪ್‌ನಿಗೂ ಎಚ್ಚರಿಗೆ ಕೊಡಲಾಯಿತು. ಅವನಿಗೆ ಮುಖ್ಯ ಸೈನ್ಯದ ಭಾರವನ್ನು ಹೊರಿಸಲಾಗಿತ್ತು. ಶತ್ರುಗಳು ಹೊರಗೆ ಬರುವ ವರೆಗೆ ಗುಂಡುಗಳನ್ನು ಹಾರಿಸಕೂಡದೆಂದು ಗಾವೆನ್‌ನು ಆ ಸೈನ್ಯದ ತಂಡಕ್ಕೆಲ್ಲ ಆಜ್ಞೆ ವಿಧಿಸಿದ್ದನು. ಈ ಮಾತೇ ಸಿಮೋರೆಡಿನ್‌ನಿಗೆ ತಾಪದಾಯಕವಾಗಿತ್ತು.

ಸೂರ್ಯನು ಅದೇ ಮುಳುಗಿದ್ದನು.

ಬುರುಜಿನ ತಳಕ್ಕೆ ಗುಂಡು ಹಾರಿಸಿದರೆ ಲಾಭದಾಯಕವಿರಲಿಲ್ಲ. ಯಾಕೆಂದರೆ ಅದರ ಗೋಡೆಗಳು ಬಹಳ ದಪ್ಪವಾಗಿದ್ದವು. ಅಂಥ ಗಟ್ಟಿ ಮುಟ್ಟಿಯಾದ ಗೋಡೆಗೆ ತೋಫುಗಳೇನು ಮಾಡಬಲ್ಲವು? ಆದರೆ ಎರಡನೆಯ ಹಾದಿಯೇ ಇರಲಿಲ್ಲ. ಹನ್ನೊಂದು ತಾಸಿಗೆ ಬಂದರೆ ಶುದ್ಧ ಪಾಶವೀವೃತ್ತಿಯನ್ನು ಅವಲಂಬಿಸದೆ ವಿಧಿಯಿಲ್ಲೆಂದು ಗಾವೆನ್‌ನ ಅಭಿಪ್ರಾಯ:ವಾಗಿವಾಗಿತ್ತು.

ಈ ಪ್ರಕಾರವಾಗಿ ಅವನು ವಿಚಾರ ತಂದ್ರಿಯಲ್ಲಿರುವಾಗ ಗುಶಿಪ್‌ನು ಅವನ ಹತ್ತಿರದಲ್ಲಿದ್ದನು. ಅವನ ಕಣ್ಣಿನ ಮೇಲೆ ದುರ್ಬೀನವಿತ್ತು. ಅದರಿಂದ ಸುತ್ತೂ ಕಡೆಗೆ ಚನ್ನಾಗಿ ನಿರೀಕ್ಷಿಸಿ ' ಕೊನೆಯ ಗಳಿಗೆ ' ಬಂದಿತೆಂದು ಕೂಗಿದನು.

ವಿಚಾರ ತಂದ್ರಿಯಲ್ಲಿದ್ದ ಗಾವೆನ್‌ನು ಎಚ್ಚತ್ತು ' ಏನಾಯಿತು ಗುಶಿಪ್ ? ' ಎಂದು ಅವನನ್ನು ವಿಚಾರಿಸಿದನು.

" ಸೇನಾಪತಿಗಳೇ, ನಿಚ್ಚಣಿಕೆ ಬರುತ್ತಿದೆ. "

" ಏನು ? ಇನ್ನೂ ನಿಚ್ಚಣಿಕೆ ಬಂದಿರುವದಿಲ್ಲವೇ ? "

" ಇಲ್ಲ, ಮಹಾರಾಜರೇ. ನನಗೆ ಬಹಳ ಚಿಂತೆಯುಂಟಾಗಿತ್ತು. ಅದೀಗ ಸಿಕ್ಕಿತು. "

' ಅದು ನನಗೆ ಗೊತ್ತಾಗಿದೆ. '

'ಆ ಹಳ್ಳಿಯ ಕಂಬಾರನ ಅಂಗಡಿಯಲ್ಲಿ ನಮಗೆ ಬೇಕಾದಷ್ಟು ಎತ್ತರದ ನಿಚ್ಚಣಿಕೆಯಿದೆ ಎಂದು ಅವರು ನನಗೆ ಹೇಳಿದರು. ಅದನ್ನು ತೆಗೆ ದುಕೊಂಡು ಗಾಡಿಯ ಮೇಲೆ ಹೇರಿದರು. ಅದರೊಡನೆ ೧೨ ಜನರು ಸಾಕೆಂದು ಹೇಳಿದರಂತೆ. ಅದೆಲ್ಲವನ್ನು ನೋಡಿಕೊಂಡು ಬಂದ ನಮ್ಮ ಕುದುರೆ ಸವಾರನು ನನಗೆ ತಿಳಿಸಿದನು. ಕುದುರೆಗಳೂ ಚನ್ನಾಗಿವೆ. ಗಾಡಿಯೂ ನಿನ್ನೆ ಮಧ್ಯರಾತ್ರಿಯಲ್ಲಿಯೋ ಹೊರಟದ್ದರಿಂದ ವೇಳೆಗೆ ಸರಿ ಯಾಗಿ ಬರುವದೆಂದು ಅವನು ನನಗೆ ಹೇಳಿದನು.'

'ಮುಂದೇನಾಯಿತು ?'

'ಮಹಾರಾಜ, ಸೂರ್ಯನು ಈಗ ಮುಳುಗಿದ್ದಾನೆ. ಹೊತ್ತಾಗುತ್ತ ಬಂದಿದೆ ನಾವು ಹೆಚ್ಚು ಹೊತ್ತು ಕಳೆದೆವಾದರೆ ಶತ್ರುಗಳು ನಾವು ಅಂಜಿ ರುವೆವೆಂದು ಅಂದುಕೊಳ್ಳಬಹುದು.'

'ಹಲ್ಲೆಯನ್ನು ಆರಂಭಿಸಲು ಆತಂಕಗಳೇನಿವೆ ?'

'ಆದರೆ ನಿಚ್ಚಣಿಕೆಯ ಆವಶ್ಯಕತೆ ಬಹಳಿದೆ.'

'ನಿಜವಾಗಿಯೂ.'

'ಆದರೆ ನಿಚ್ಚಣಿಕೆ ಇಲ್ಲವಲ್ಲ !'

'ಇದೆ, ಮಹಾರಾಜರೇ.'

'ಎಲ್ಲಿ ?'

'ಆದ್ದರಿಂದಲೆ ನಾನು ಆಗಲೆ ಅಂದದ್ದು 'ಕೊನೆಗೊಮ್ಮೆ ಬಂದಿತು' ಎಂದು. ಗಾಡಿಯು ಇನ್ನೂ ಬರಲಿಲ್ಲೆಂದು ದುರ್ಬೀನಿನಿಂದ ಆ ದಾರಿಯ ಕಡೆಗೆ ನೋಡುತ್ತಿದ್ದೆ. ಅಷ್ಟರಲ್ಲಿ ನನಗೆ ಕಾಣಿಸಿತು. ಅಲ್ಲಿ ನೋಡಿರಿ. ದಾರಿಯನ್ನು ಇಳಿದು ಬರುತ್ತಿದೆ.'

ಗೂವೆರ್‌ನು ದುರ್ಬೀನವನ್ನು ಇಸಿದುಕೊಂಡು 'ಅಹುದು' ಬರು ತ್ತಿದೆ. ನೀನು ಹೇಳಿದಷ್ಟು ಜನರು ಅದರ ಬೆಂಬಲಕ್ಕೆ ಇಲ್ಲ. ಮುಕ್ಕಾಲು ಮೈಲಿನಾಚೆಗೆ ಇದೆ.'

'ನಿಚ್ಚಣಿಕೆಯು ಇನ್ನು ಕಾಲು ತಾಸಿನಲ್ಲಿ ಇಲ್ಲಿಗೆ ಬಂದೇ ಬರು ವದು.'

‘ ಹಾಗಾದರೆ ಹಲ್ಲೆಯನ್ನು ಆರಂಭಿಸಿರಿ. ’

ನಿಜವಾಗಿಯೇ ಗಾಡಿಯು ಬರುತ್ತಲಿತ್ತು. ಆದರೆ ಯಾವ ಗಾಡಿಯು ಇವರಿಗೆ ಬೇಕಾಗಿತ್ತೋ ಆ ಗಾಡಿ ಮಾತ್ರ ಈ ಗಾಡಿಯಾಗಿರಲಿಲ್ಲ. ಗಾವೆನ್‌ನು ಪುನಃ ನೋಡಿದನು. ಅವನ ಹಿಮ್ಮೆಗ್ಗಲು ರೇಡೋ ನಿಂತಿದ್ದನು. ಅವನು ತಲೆ ಕೆಳಗೆ ಹಾಕಿಕೊಂಡು ನಿಂತಿರುವದು ಗಾವೆನ್‌ನ ಲಕ್ಷ್ಯದಲ್ಲಿ ಬಂದಿತು.

‘ ಏನು ಸಾರ್ಜೆಂಟ್ ರೇಡೋ ? ’

‘ ನಾಗರಿಕ ಸೇನಾಪತಿಗಳೇ, ನಮ್ಮ ತಂಡದ ವಿನಂತಿಯೊಂದಿದೆ— ’

‘ ಏನದು ಹೇಳು. ’

‘ ನಮಗೆ ಸಾಯಲು ಅಪ್ಪಣೆ ಕೊಡಿರಿ. ’

‘ ಏನು ? ಅದೇಕೆ ? ’

‘ ನೀವು ನಮಗೆ ಅಷ್ಟು ಕೃಪೆಯನ್ನು ತೋರಿಸಬೇಕು. ’

‘ ಅವನ್ನೇನು ಹೇಳಬೇಕೇ ? ಹೊತ್ತು ಹೇಗೆ ಬರುತ್ತದೆಯೋ ಹಾಗೆ ಮಾಡಬೇಕಾಗುವದು. ’

‘ ಮಹಾರಾಜರೇ ಕೇಳಿರಿ. ಡೋಲದಲ್ಲಿ ಜರುಗಿದ ಸಂಗತಿಯ ನಂತರ ನೀವು ನಮ್ಮನ್ನು ಬಹಳ ಲಕ್ಷ್ಯಪೂರ್ವಕವಾಗಿ ನೋಡುತ್ತ ಬಂದಿರುವಿರಿ. ಈಗ ನಾವು ೧೨ ಜನರಿದ್ದೇವೆ. ’

‘ ಹುಂ ! ’

‘ ಅದಕ್ಕಾಗಿ ನಮಗೆ ಅಪಮಾನವೆನಿಸುತ್ತಿದೆ. ’

‘ ನೀವು ಹಿಮ್ಮೆಗ್ಗಲಿನ ಸಂರಕ್ಷಣೆಯ ಭಾರವನ್ನು ಹೊರಬೇಕು. ’

‘ ಪ್ರತ್ಯಕ್ಷ ಯುದ್ಧದಲ್ಲಿಯೇ ಸುಗ್ಗಬೇಕೆಂದು ನಮಗೆ ಇಚ್ಛೆಯಾಗಿದೆ. ’

‘ ಜಯಾಪಜಯದ ನಿರ್ಣಯ ಹೊರಬೀಳುವ ಹೊತ್ತಿಗೆ ನಿಮ್ಮ ಆವಶ್ಯಕತೆ ಬಹಳಿದೆ. ಆದ್ದರಿಂದಲೇ ನಾನು ನಿಮಗೆ ಆ ಕೆಲಸವನ್ನು ಬೇಕೆಂತಲೆ ಕೊಟ್ಟಿದ್ದೇನೆ. ’

‘ ಪ್ಯಾರಿಸದವರಾದ ನಮಗೆ ನಾವೇ ಮುಂದೆ ಹೋಗಬೇಕೆಂದಿದೆ. ’

'ಒಳ್ಳೇದು, ನಾನು ವಿಚಾರ ಮಾಡಿ ಹೇಳುತ್ತೇನೆ.

'ಹೊತ್ತು ಬಂದಿದೆ. ಆದ್ದರಿಂದ ಬೇಗನೆ ಹೇಳಿರಿ. ಒಂದು ಕೈ ನೋಡಬೇಕೆಂದಿದ್ದೇವೆ. ಲಾಟೋರಿಗೆ ಯಾರು ಕೈ ಹಚ್ಚುತ್ತಾರೋ ಅಂಥ ವರನ್ನು ಸುಟ್ಟು ಭಸ್ಮಮಾಡುತ್ತೇವೆ. ಅದರಲ್ಲಿ ಭಾಗಿಯಾಗಲು ನಮಗೆ ಅಪ್ಪಣೆಯನ್ನು ಕೊಡಿರಿ.'

ಸಾರ್ಜಂಟ್ ರೇಡೋನು ಮೀಸೆಯ ಮೇಲೆ ಕೈ ಹಾಕಿ ಗಡಸು ಧ್ವನಿ ಯಿಂದ 'ಈ ಕಿಲ್ಲೆಯಲ್ಲಿ ನಮಗೆ ದೊರೆತ ಮೂರು ಮಗುಗಳಿವೆ ಎಂಬ ದನ್ನು ಲಕ್ಷ್ಯದಲ್ಲಿಡಿರಿ. ಒಳಗಿರುವ ಚಾಂಡಾಲರು ಆ ಮಗುಗಳ ಜೀವಕ್ಕೆ ಅಪಾಯವನ್ನು ಮಾಡುತ್ತೇವೆಂದು ಅನ್ನುತ್ತಿದ್ದಾರೆ. ನಮ್ಮ ಮೇಲೆ ಆಕಾಶವು ಕಡಕೊಂಡು ಬಿದ್ದರೂ, ಭೂಮಿಯು ಬಿರಿದರೂ ನಾವು ನಮ್ಮ ಮಗುಗಳನ್ನು ಪಡೆಯಲೇ ಬೇಕು. ಕೆಲ ಸಮಯದ ಮೊದಲು ನಾನು ನಿಮ್ಮ ಆಜ್ಞೆಗೆ ಬಿದಿರಿನ ಮೇಲೆ ಹತ್ತಿ ಕಿಡಿಕಿಯೊಳಗಿಂದ ಆ ಮಗು ಗಳ ದರ್ಶನವನ್ನು ತೆಗೆದುಕೊಂಡಿದ್ದೇನೆ ನೋಡಿರಿ, ಅವು ಅಲ್ಲಿವೆ. ಬೇಕಾ ದರೆ ತೋರಿಸುತ್ತೇನೆ ನಡೆಯಿರಿ. ನಾನು ಅವುಗಳನ್ನು ನೋಡಿದೆ. ಅವು ನನ್ನನ್ನು ನೋಡಿ ಗಾಬರಿಯಾದವು. ಮಹಾರಾಜರೇ, ನಿಮಗೊಂದು ಮಾತು ಹೇಳಬಯಸುತ್ತೇನೆ. ಏನೆಂದರೆ—ಈ ಮೂರೂ ಮಗುಗಳಲ್ಲಿ ಒಂದು ಮಗುವಿಗಾದರೂ ಕೂದಲು ಕೊಂಕಿದರೆ—ದೇವರ ಆಣೆಯನ್ನು ಮಾಡಿ ಹೀಗೆ ಪ್ರತಿಜ್ಞೆ ಮಾಡುತ್ತೇನೆ:-ಈ ಕರಾಳ ಕೃತ್ಯದ ಸೇಡನ್ನು ತೀರಿಸದೆ ಎಂದಿಗೂ ನಾನು ಬಿಡುವವನಲ್ಲ. ಒಂದು ಮಗುವನ್ನಾದರೂ ನಾವು ಬದುಕಿಸಲು ಅಸಮರ್ಥರಾದರೆ—ನಾವು ಬದುಕಿ ಉಪಯೋಗ ವೇನು ? ಎಲ್ಲರೂ ಸತ್ತು ಹೋಗೋಣ ಇದು ನಮ್ಮ ಜನ್ಮಸಿದ್ಧ ಹಕ್ಕು" ಎಂದು ಹೇಳಿ, ಗಾವೆನ್‌ನಿಗೆ ನಮಸ್ಕರಿಸಿ ಹೊರಟು ಹೋಗತೊಡಗಿದನು.

ಗಾವೆನ್‌ನು ಕೈಮಾಡಿ ರೇಡೋನನ್ನು ಕರೆದು 'ನೀವೆಲ್ಲರೂ ಶೂರರೇ ಇರುವಿರಿ. ನಿಮಗೆ ಎಲ್ಲಕ್ಕೂ ಮುಂದಿನ ಸ್ಥಳವನ್ನೇ ಕೊಡುತ್ತೇನೆ. ನಿಮ್ಮ ಲ್ಲಿಯ ಆರು ಜನರನ್ನು ಮುಂದೆ ನಿಲ್ಲಿಸಿ ಸೈನ್ಯವು ಮುಂದೆ ಬರುತ್ತಿದೆಯೋ ಇಲ್ಲವೋ ಎಂಬದನ್ನು ನೋಡುವದಕ್ಕಾಗಿ ನೇಮಿಸುತ್ತೇನೆ. ಉಳಿದ ಆರು

ಜನರನ್ನು ಯಾರೂ ಓಡಿ ಹೋಗದಂತೆ ನೋಡಿಕೊಳ್ಳಲು ನೇಮಿಸು-
ತ್ತೇನೆ' ಎಂದು ಹೇಳಿದನು.

'ನಾನು ಇವರ ಮೇಲೆ ಕಣ್ಣಿಡಬಹುದೇ?'

'ಅರ್ಥಾತ್ ನೀನೇ ಅವರ ಅಧಿಕಾರಿ.'

'ಸೇನಾಪತಿಗಳೇ, ನಮಸ್ಕರಿಸುತ್ತೇನೆ. ನಾನು ಮುಂದೆ ಹೋಗ
ಬೇಕಾದ್ದರಿಂದ ಈಗಲೇ ಹೊರಡುತ್ತೇನೆ.'

ರೇಡೋನು ಪುನಃ ನಮಸ್ಕರಿಸಿ ತನ್ನ ತಂಡದಲ್ಲಿ ಸೇರಿದನು. ಗಾವೆ
ನ್‌ಸು ಗಡಿಯಾಳ ತೆಗೆದನು. ಗುಶೆಪ್‌ನ ಕಿವಿಯಲ್ಲಿ ಏನನ್ನೋ ಹೇಳಿದನು.
ಹಲ್ಲೆಯನ್ನು ಹೂಡಿಯೇ ಬಿಟ್ಟನು.



## ೧೬.

ಸಿಮೋರೇಡಿನ್‌ನು ಇನ್ನೂ ತನ್ನ ಸ್ಥಳಕ್ಕೆ ಹೋಗಿರಲಿಲ್ಲ; ಇನ್ನೂ
ಒಪ್ಪಂದದ ಪ್ರಯತ್ನವನ್ನು ಮಾಡಿ ನೋಡಿದರಾಯಿತೆಂದು ಅವನು ಕಾಳಿ
ಊದುವವನ ಕಡೆಗೆ ಹೋಗಿ 'ಕಾಳಿಯನ್ನು ಊದು, ನೋಡೋಣ'
ವೆಂದಂದನು.

ಕಾಳಿಯು ಊದಿತು. ಅದಕ್ಕೆ ಉತ್ತರವೂ ಬಂದಿತು.

"ಇದರರ್ಥವೇನು? ಸಿಮೋರೆಡಿನ್‌ನಿಗೆ ಬೇಕಾಗಿದ್ದೇನು?"
ಎಂದು ಗಾವೆನ್‌ನು ಗುಶೆಪ್‌ನನ್ನು ವಿಚಾರಿಸಿದನು. ಸಿಮೋರೆಡಿನ್‌ನು
ಕೈಯಲ್ಲಿ ಬಿಳಿ ಬಾವುಟವನ್ನು ಹಿಡಿದುಕೊಂಡು ಬುರುಜಿನ ಕಡೆಗೆ ಸಾಗಿ
'ಬುರುಜಿನೊಳಗಿರುವ ಜನರೇ, ನಾನು ಯಾರು ಎಂಬದು ನಿಮಗೆ
ಗೊತ್ತಿದೆಯೋ?' ಎಂದು ಗಟ್ಟಿಯಾಗಿ ಕೂಗಿದನು. ಅದಕ್ಕೆ ಉತ್ತರ
ವಾಗಿ ಇಮಾನಸನ ಧ್ವನಿಯು 'ಗೊತ್ತಿದೆ' ಎಂದು ಕೇಳಬಂದು ಕೆಳಗಿ-
ನಂತೆ ಸಂವಾದವೇ ನಡೆಯಿತು.

'ನಾನು ಪ್ರಜಾಪಕ್ಷದ ವಕೀಲನಿದ್ದೇನೆ.'

'ಇದಕ್ಕೂ ಮೊದಲು ನೀನೇನಿದ್ದಿ ಎಂಬದೂ ಗೊತ್ತಿದೆ.'

'ನಾನೀಗ ಕಾಯದೇಶೀರ ಪ್ರತಿನಿಧಿಯಿದ್ದೇನೆ.'

'ನೀನು ಓಡಿಹೋದ ಹೇಡಿಯಿರುವಿ.'

'ನಾನು ಸಿಮೋರೆಡಿನ್ ಇದ್ದೇನೆ.'

'ನೀನು ರಾಕ್ಷಸನಾಗಿರುವಿ.'

'ನನ್ನ ಗುರುತು ನಿನಗಿದೆಯೆ?'

'ನಾವು ನಿನ್ನನ್ನು ತಿರಸ್ಕರಿಸುತ್ತೇವೆ.'

'ನಾನು ನಿಮ್ಮ ಹತ್ತಿರ ಬಂದರೆ ನಿಮಗೆ ಸರಿಕಾಣುವದೋ?'

'ನಾವು ೧೯ ಜನರಿದ್ದೇವೆ; ನಮ್ಮ ಶಿರಚ್ಛೇದವಾಗುವ ಮೊದಲೇ ನಿನ್ನ ಶಿರಚ್ಛೇದ ಮಾಡುವೆವು.'

'ಒಳ್ಳೇದು. ಹಾಗಾದರೆ ನಾನು ನಿಮ್ಮ ಕಡೆಗೆ ಬರುತ್ತೇನೆ.'

ಇದನ್ನು ಕೇಳಿ ಒಬ್ಬ ವ್ಯಕ್ತಿಯು ವಿಕಟಹಾಸ್ಯವನ್ನು ಬೀರಿ 'ಬಾ' ಎಂದು ಕೂಗಿದನು. ಇವರಿಬ್ಬರ ಸಂವಾದ ನಡೆದಿರುವಾಗ ಸೈನಿಕರೆಲ್ಲರೂ ತಟಸ್ಥರಾಗಿದ್ದರು.

'ಒಂದು ಕರಾರಿನ ಮೇಲೆ ಬರುತ್ತೇನೆ' ಎಂದು ಸಿಮೋರೆಡಿನ್‌ನು ಕೂಗಿದನು.

'ಯಾವ ಕರಾರು?'

'ಕೇಳಿರಿ.'

'ಹೇಳು.'

'ನೀವು ನನ್ನನ್ನು ದ್ವೇಷಿಸುತ್ತೀರಿ. ಆದರೆ ನಾನು ನಿಮ್ಮನ್ನು ಪ್ರೀತಿಸುತ್ತೇನೆ. ನಾನು ನಿಮ್ಮ ಬಂಧುವಿದ್ದೇನೆ. ನೀವು ನನ್ನ ಅಪಮಾನ ಮಾಡಿರಿ. ಆದರೆ ನನ್ನ ಮಾತನ್ನು ಮಾತ್ರ ಕೇಳಿರಿ. ನಾನು ಒಪ್ಪಂದದ ಮಾತುಕತೆಯಾಡಲು ಬಂದಿದ್ದೇನೆ. ದುರ್ದೈವದಿಂದ ನೀವು ಹಾದಿ ತಪ್ಪಿದ ಜನರಾಗಿದ್ದೀರಿ. ನಾನು ನಿಮ್ಮ ಗೆಳೆಯನಾಗಿದ್ದೇನೆ. ನಾನು ನಿಮ್ಮ ಅಜ್ಞಾನವನ್ನು ದೂರುಮಾಡಲು ಬಂದಿದ್ದೇನೆ. ನಾವೆಲ್ಲರೂ ಒಬ್ಬ ತಾಯಿಯ

ಮಕ್ಕಳಲ್ಲವೇ ? ಅಂದಬಳಿಕ ನನ್ನ ಮಾತು ಕೇಳಿರಿ. ನಿಮಗೆ ಹಿಂದುಗಡೆ ಯಿಂದ ತಿಳಿದೀತು. ಅಥವಾ ನಿಮ್ಮ ಮಕ್ಕಳು ಮರಿಮಕ್ಕಳಿಗೆ ತಿಳಿದೀತು. ಏನೆಂದರೆ ರಾಜ್ಯಕ್ರಾಂತಿಯು ಈಶ್ವರೇಚ್ಛೆಯಿಂದ ಸಂಭವಿಸಿದುದಾಗಿದೆ. ಈ ಸಂಗತಿಯು ನಿಮಗೆ ಗೊತ್ತಾಗಲೆಂದು ನಾನು ನಿಮ್ಮ ಕಡೆಗೆ ಬರಲಿಚ್ಛಿ ಸುತ್ತೇನೆ. ಅದರ ಪ್ರೀತ್ಯರ್ಥವಾಗಿ ನಾನು ನನ್ನ ಪ್ರಾಣವನ್ನು ಅರ್ಪಣ ಮಾಡುತ್ತಿದ್ದೇನೆ. ನಾನು ನನ್ನ ಸ್ನೇಹ ಹಸ್ತಗಳನ್ನು ಚಾಚಿದ್ದೇನೆ. ನಿಮ್ಮ ರಕ್ಷಣವಾಗಲೆಂದು ನಾನು ಮರಣಕ್ಕೆ ಸಿದ್ಧನಾಗಿದ್ದೇನೆ. ನನ್ನ ಅಧಿಕಾರವು ಅಮರ್ಯಾದಿತವಾಗಿದ್ದು ನಾನು ಏನೇನ್ನುವೆನೋ ಅದೆಲ್ಲವೂ ಸಿದ್ಧಿಯಾಗು ವಂತಿದೆ. ಈ ಸಮಯವು ಬಹು ಬಿಕ್ಕಟ್ಟಿನದಾಗಿದೆ. ಕೊನೆಯ ಪ್ರಯತ್ನ ವೆಂದು ನಾನೀಗ ಮುಂದೆ ಬಂದಿದ್ದೇನೆ. ನಿಮ್ಮಲ್ಲನೇಕರಿಗೆ ಹೆಂಡಿರು-ಮಕ್ಕಳು ಮರಿಗಳುಂಟು. ನಿಮ್ಮ ಇಚ್ಛೆಯ ವಿರುದ್ಧವಾಗಿ ನಾನು ನಿಮ್ಮ ಹೆಂಡಿರು-ಮಕ್ಕಳ ಸಂರಕ್ಷಣೆ ಮಾಡಬೇಕಾಗುತ್ತದೆ. ನನ್ನ ಬಾಂಧವರೇ-' ಎಂದು ಮಾತಿನ ಮಳೆಗರೆದನು.

' ಹುಂ, ನಡೆಯಲಿ ನಿನ್ನ ಮಾತುಗಳು. "

' ಬಂಧುಗಳೇ, ಯುದ್ಧದ ಕರ್ಕಶವಾದ ಗರ್ಜನೆಗೆ ಅವಕಾಶ ಕೊಡ ಬೇಡಿರಿ. ಛಲಕ್ಕೆ ಬಲಿಯಾಗಬೇಡಿರಿ. ನಿಮ್ಮಲ್ಲಿಯ ಎಷ್ಟೋ ಜನರಿಗೆ ನಾಳಿನ ಸೂರ್ಯನ ದರ್ಶನವಾಗಲಿಕ್ಕಿಲ್ಲ. ಎಷ್ಟೋ ಜನರು ಪರಲೋಕ ವಾಸಿಗಳಾಗುವಿರಿ. ನಿಮ್ಮ ಮೇಲೆ ನೀವೇ ದಯೆತೋರಿಸಿರಿ. ವ್ಯರ್ಥವಾಗಿ ರಕ್ತಪ್ರವಾಹವನ್ನು ಹರಿಸಬೇಡಿರಿ. ಇಬ್ಬರ ವಧೆಯಾದರೆ ಕೆಲಸವು ಕೈಗೂ ಡುತ್ತಿರಲಿಕ್ಕೆ ಅನೇಕರ ಬಲಿಯನ್ನು ಕೊಡಬೇಡಿರಿ.

' ಇಬ್ಬರೇ ? ಅವರಾರು ? ' ಎಂದು ಇಮಾನಸನು ವಿಚಾರಿಸಿದನು.

' ಲ್ಯಾಂಟನೆಕ್ ಮತ್ತು ನಾನು. ನಾನು ನಿಮ್ಮ ಸಲುವಾಗಿ, ಲ್ಯಾಂಟ್ ನೆಕ್‌ನು ನಮ್ಮ ಸಲುವಾಗಿ ಸತ್ತರೆ ತೀರಿತು. ಇದೇ ನನ್ನ ಕರಾರು. ನೀವೆ ಲ್ಲರೂ ಯಾಕೆ ಸಾಯುವದು ? ಲ್ಯಾಂಟ್‌ನೆಕ್‌ನು ನಮ್ಮ ,ಕಡೆಗೆ ಬರಲಿ, ನಾನು ನಿಮ್ಮ ಕಡೆಗೆ ಬರುತ್ತೇನೆ. ಲ್ಯಾಂಟ್‌ನೆಕ್‌ನನ್ನು ಕೊಲ್ಲುವ ಕಂಬಕ್ಕೆ ಆಹುತಿ ಕೊಡಲಾಗುವದು. ನೀವು ನನಗೆ ಬೇಕಾದ್ದನ್ನು ಮಾಡಿರಿ. '

'ಹೇಡಿಯೇ, ನೀನು ನಮ್ಮ ಕೈಗೆ ಸಿಕ್ಕಿದ್ದಾದರೆ ನಿನ್ನನ್ನು ಬೆಂಕಿಯಲ್ಲಿ ಹುರಪಳಿಸಿ ಬಿಡುತ್ತೇವೆ' ಎಂದು ಇವಾನಸನೆಂದನು.

'ನಾನು ಅದಕ್ಕೂ ಒಪ್ಪುತ್ತೇನೆ.' ಎಂದೆಂದು ಸಿವೋರೆಡಿನ್‌ನು. ದೈವಗೇಡಿಗಳೇ, ಒಂದು ತಾಸಿನೊಳಗಾಗಿ ನೀವೆಲ್ಲರೂ ಮುಕ್ತರಾಗುವಿರಿ. ನಾನು ನಿಮ್ಮನ್ನು ಬಿಡಿಸಲು ಬಂದಿದ್ದೇನೆ. ನಿಮಗೆ ಒಪ್ಪಿಗೆ ಇದೆಯೇ' ಎಂದು ವಿಚಾರಿಸಿದನು.

'ನೀನು ಮೋಸಗಾರನಿರುವದಲ್ಲದೆ ನಿನಗೆ ಹುಚ್ಚೂ ಹಿಡಿದಿದೆ. ನಿನಗೆ ಈ ತೊಂದರೆಯನ್ನು ತೆಗೆದುಕೊಳ್ಳಲು ಯಾರು ಹೇಳಿದ್ದರು? ನೀನೇ ಬಂದು ನಮ್ಮೊಡನೆ ಮಾತುಗಳನ್ನೇಕೆ ಆರಂಭಿಸಿದಿ? ನಾವು ಲ್ಯಾಂಟ್‌ನೆಕ್‌ನನ್ನು ನಿನ್ನ ವಶಕ್ಕೆ ಹೇಗೆ ಕೊಟ್ಟೇವು? ನಿನಗೆ ಬೇಕಾಗಿರುವದೇನು?' ಎಂದು ಇವಾನಸನು ಉತ್ತರವಿತ್ತನು.

'ನನಗೆ ಅವನ ತಲೆಯು ಬೇಕಾಗಿದೆ. ನಾನು ನನ್ನದನ್ನು ಕೊಡಲು—'

'ನಾವು ನಿನ್ನ ಚರ್ಮವನ್ನು ಸುಲಿಯುತ್ತೇವೆ. ಆದರೆ ಅದು ನಮಗೆ ಬೇಡ. ಹೋಗು ನಡೆ ಇಲ್ಲಿಂದ'

'ಪರಿಣಾಮವು ಒಳಿತಾಗಲಾರದೆಂಬದನ್ನು ಲಕ್ಷ್ಯದಲ್ಲಿಟ್ಟುಕೊಳ್ಳಿರಿ. ಕೊನೆಯವರೆಗೂ ವಿಚಾರ ಮಾಡಿರಿ.'

ಈ ರೀತಿ ಸಂಭಾಷಣವು ನಡೆಯಿತು. ರಾತ್ರಿಯೂ ಹೆಚ್ಚಾಯಿತು. ಲ್ಯಾಂಟ್‌ನೆಕ್‌ನು ಅಲ್ಲಿ ನಡೆದುದನ್ನೆಲ್ಲ ನೋಡುತ್ತ ಗಪ್ಪುಚಿಪ್ಪಾಗಿ ಕುಳಿತುಕೊಂಡಿದ್ದನು.

ಇವಾನಸನು ಕಿಲ್ಲೆಯ ಕೆಳಬದಿಗಿರುವ ಜನರನ್ನು ಉದ್ದೇಶಿಸಿ 'ನಮ್ಮ ಮೇಲೆ ಹಲ್ಲೆಯನ್ನು ಮಾಡುವ ಸೈನಿಕರೇ, ನಾವು ನಮ್ಮ ಕರಾರುಗಳನ್ನು ನಿಮಗೆ ತಿಳುಹಿದ್ದೇವೆ. ಅದರಲ್ಲಿ ಯಾವ ಬದಲಾವಣೆಯೂ ಆಗಲಾರದು. ನಮ್ಮದಕ್ಕೆ ಒಪ್ಪಿಕೊಳ್ಳಿರಿ. ಇಲ್ಲದಿದ್ದರೆ ನಮ್ಮಂತೆ ನಿಮಗೂ ಸಂಕಟ ತಪ್ಪುವಂತಿಲ್ಲ. ನಾವು ಮೂರೂ ಮಗುಗಳನ್ನು ನಿಮ್ಮ ಸ್ವಾಧೀನ

ಮಾಡುವೆವು. ನೀವು ನಮ್ಮನ್ನು ಹೋಗಗೊಡಿರಿ" ಎಂದು ಆಹ್ವಾನವನ್ನಿತ್ತನು.

ಸಿವೋರೆಡಿನ್‌ನು 'ಒಬ್ಬನ ಹೊರತಾಗಿ ಎಲ್ಲರನ್ನೂ ಹೋಗುಗೊಡುವೆವು' ಎಂದು ತನ್ನ ನಿರ್ಧಾರವನ್ನು ತಿಳಿಸಿದನು.

'ಒಬ್ಬನೆಂದರೆ ಯಾರು?'

'ಲ್ಯಾಂಟ್‌ನೆಕ್.'

'ಇಲ್ಲ. ಅವನನ್ನು ನಿಮ್ಮ ಸ್ವಾಧೀನ ಮಾಡುವದು ಎಂದಿಗೂ ಸಾಧ್ಯವಿಲ್ಲ.'

'ಇಲ್ಲದಿದ್ದರೆ ಒಪ್ಪಂದವಾಗುವದು ಶಕ್ಯವಿಲ್ಲ.'

'ಅಂದಮೇಲೆ ಯುದ್ಧವಾರಂಭವಾಗಿ ಬಿಡಲಿ.'

ಇಷ್ಟಾದನಂತರ ಕೆಲ ಸಮಯ ಶಾಂತತೆ ನೆಲೆಸಿತು. ಕಹಳೆಯೂದಿದ ಮೇಲೆ ಇಮಾನಸನು ಕೆಳಗಿಳಿದನು. ಲ್ಯಾಂಟ್‌ನೆಕ್‌ನು ಕೈಯಲ್ಲಿ ಕತ್ತಿಯನ್ನು ಹಿಡಿದನು. ಉಳಿದವರೂ ತಮ್ಮ ಸಂರಕ್ಷಣೆಯ ವ್ಯವಸ್ಥೆಯನ್ನು ಮಾಡಿಕೊಂಡರು. ಹೊರಬದಿಯಲ್ಲಿಯ ಪ್ರಜಾಪಕ್ಷದ ಜನರು ಮುಂದೆ ನುಗ್ಗತೊಡಗಿದರು. ಒಳಗಿನವರೂ ಶಸ್ತ್ರಾಸ್ತ್ರಗಳಿಂದ ಸಜ್ಜಾಗುವಷ್ಟರಲ್ಲಿ ಧರ್ಮ ಗುರುವು ಅವರ ಸಮೀಪಕ್ಕೆ ಬಂದನು. ಶಸ್ತ್ರಾಸ್ತ್ರಗಳನ್ನು ಹಿರಿಯರೆಂದು ಹೇಳಿ ದೇವರಿಗೆ ಪ್ರಾರ್ಥನೆಯನ್ನು ಸಲ್ಲಿಸಿ ಯುದ್ಧವನ್ನಾರಂಭಿಸಲು ಧರ್ಮಗುರುವು ಅನುಜ್ಞೆಯನ್ನಿತ್ತನು. ಬಂದೂಕುಗಳು ಸುತ್ತೂ ಕಡೆಯಿಂದ ಹಾರತೊಡಗಿದವು. ಯುದ್ಧವು ಆರಂಭವಾಗಿಯೇ ಬಿಟ್ಟಿತು.



## ೧೭.

ಅಲ್ಪಾವಧಿಯಲ್ಲಿಯೇ ಘೋರವಾದ ಕದನವೇ ನಡೆಯಿತು. ಈ ರಣ ರಂಗದ ವರ್ಣನೆಯನ್ನು ಮಾಡುವದು ಕಠಿಣವೇ ಸರಿ. ಹಲ್ಲೈ-ಪ್ರತಿ ಹಲ್ಲೈ ನಡೆದಿರುವ ಸ್ಥಳವು ಭೀಕರವಾಗಿತ್ತು. ಕಿಲ್ಲೆಯೊಳಗಿದ್ದ ಮದ್ದಿಗೆ ಬೆಂಕಿ ಹತ್ತಿ ಬುರುಜಿನ ಗೋಡೆ ಳಂ ಫೂಟಿನ ವರೆಗೆ ಬಿರುಕುಬಿಟ್ಟಿತು. ಈ ಬಿರು ಕಿನ ಉಪಯೋಗವೇನೂ ಶತ್ರುಗಳಿಗೆ ಆಗುವಂತಿರಲಿಲ್ಲ. ಕಿಲ್ಲೆಯ ಕೆಳ ಭಾಗದಲ್ಲಿ ಸುರಂಗದ ಹೊಡೆತದಿಂದ ದೊಡ್ಡದೊಂದು ಬೋಕು ಬಿದ್ದಿತು. ಅದರೊಳಗಿಂದ ಒಳಗೆ ಪ್ರವೇಶಿಸಲು ಮಾರ್ಗವಾದಂತಾಗಿತ್ತು. ಈ ಸ್ಥಳ ದಲ್ಲಿ ಕತ್ತಲು ಗವಿದಿತ್ತು. ಹಲ್ಲೆಗಾರರ ದೃಷ್ಟಿಗೆ ಈ ಬೋಕು ಕಾಣಿಸಿತು. ಈ ಸ್ಥಳದಲ್ಲಿ ಒಬ್ಬರ ಮೇಲೊಬ್ಬರು ಬಿದ್ದು ಒಬ್ಬರೊಬ್ಬರ ಪ್ರಾಣವನ್ನು ತೆಗೆದುಕೊಳ್ಳುವದು ಅಸಾಧ್ಯವಾಗಿತ್ತು. ಸೈನಿಕರ ಕತ್ತಿಯ ಖಣಖಣಾ ಟವು ಮೊದಲಿಗೆದ್ದಿತು. ಗಾವೆರ್ನ್‌ನು 'ಒಳನುಗ್ಗಿರಿ' ಎಂದು ಕೂಗತೊಡ ಗಿದನು. ಲ್ಯಾಂಟ್‌ನೆಕ್‌ನು 'ಶತ್ರುಗಳನ್ನು ಒಳಗೆ ಬರಗೊಡಬೇಡಿರಿ' ಎಂದು ಆಜ್ಞಾಪಿಸುತ್ತಿದ್ದನು. ಕತ್ತಿಯ ಹೊಡೆತಕ್ಕೆ ರುಂಡಗಳು ಉರುಳಿ ಬೀಳತೊಡಗಿದವು. ಒಳಗೆ ಹೋದವರೆಲ್ಲರೂ ಬಲವಾದ ಹೊಡೆತ ತಿಂದು ಹಿಂದಿರುಗುತ್ತಿದ್ದರು. ಆ ರಣಕರ್ಕಶ ಧ್ವನಿಯಿಂದ ಕಿವಿಗಳು ಗಡಚಿಕ್ಕಿ ದ್ದವು. ಹೊಗೆಯಿಂದ ಕಣ್ಣುಗಳು ಮಂಜುಗವಿದಿದ್ದವು.

ರಣಧುರಂಧರರು ಹೆಣಗಳನ್ನು ತುಳಿಯುತ್ತ ಸಾಗುತ್ತಿದ್ದರು. ಗಾಯ ಗೊಂಡವರನ್ನು ಹೆಚ್ಚು ಗಾಯಗೊಳಿಸುತ್ತ ಮುನ್ನುಗ್ಗುತ್ತಿದ್ದರು. ಗಾಯಾಳು ಗಳ ಚೀತ್ಕಾರವನ್ನು ಕೇಳಲು ಗತಿಯಿಲ್ಲದಾಗಿತ್ತು. ಆ ಬುರುಜುರೂಪೀ ರಾಕ್ಷಸನಿಗೆ ಗಾಯವಾಗಿ ನೆತ್ತರವು ಹರಿಯುತ್ತಿರುವಂತೆ ಕಾಣುತ್ತಿತ್ತು.

ಈ ಗೊಂದಲದಲ್ಲಿ ಕಿಲ್ಲೆಯ ಹೊರಮುಗ್ಗಲು ಯಾವ ಸದ್ದು ಕೇಳ ಬರುತ್ತಿರಲಿಲ್ಲ. ಕತ್ತಲುಗವಿದ ರಾತ್ರಿಯಾದ್ದರಿಂದ ಸ್ಮಶಾನ ಶಾಂತತೆಯು ಅಲ್ಲಿ ಪಸರಿಸಿತ್ತೆನ್ನಬಹುದು. ಒಳಗೆ ನಡೆಯುತ್ತಿದ್ದ ಕೋಲಾಹಲವು ಕ್ರಮೇಣವಾಗಿ ಕಡಮೆಯಾಗುತ್ತ ನಡೆದಿತ್ತು. ಒಳಗೇನು ನಡೆದಿದೆ ಎಂಬು

ದರ ಅರಿವು ಹೊರಗಿನವರಿಗೆ ಆಗುವದು ಶಕ್ಯವೇ ಇರಲಿಲ್ಲ. ಆ ಮಗುಗಳು ಮಾತ್ರ ಗಾಢವಾಗಿ ಮಲಗಿಬಿಟ್ಟಿವೆ. ಉಭಯಪಕ್ಷಗಳಲ್ಲಿಯೂ ಸೈನಿಕರ ಸಂಹಾರ ನಡೆದೇ ಇತ್ತು.

ಗಾಪೆನ್‌ನು ತರುಣನಾದ್ದರಿಂದ ಅವನಲ್ಲಿ ಬಿಸಿನೆತ್ತರವು ಹರಿಯು ತ್ತಿತ್ತು. ಅವನು ಈ ಕಗ್ಗೊಲೆಯ ನಟ್ಟನಡುವೆ ಸಿಕ್ಕಿದ್ದನು. ತಲೆಯ ಮೇಲೆ ಬಂದೂಕಿನ ಗುಂಡುಗಳು ಹಾರಾಡುತ್ತಿದ್ದವು. ಗಾವೆನ್‌ನು ಸಾಹ ಸಿಯೂ ಶೂರನೂ ಆಗಿದ್ದನಲ್ಲದೆ ಈ ವರೆಗೆ ಅವನಿಗೆ ಯಾವ ಗಾಯಗಳೂ ಆಗಿರಲಿಲ್ಲ. ಸೈನಿಕರಿಗೆ ಆಜ್ಞೆಮಾಡಬೇಕೆಂದು ಹೊರಳುವಷ್ಟರಲ್ಲಿ ಬಂದೂ ಕಿನ ಗುಂಡುಗಳಿಂದ ಅವನ ಕಣ್ಣು ಕುಕ್ಕಿದವು. ಗಾವೆನ್‌ನು 'ಏನು ಮಾಡುತ್ತಿರುವಿರಿ' ಎಂದು ಸಿಮೋರೆಡಿನ್‌ನನ್ನು ವಿಚಾರಿಸಿದನು.

'ನಾನು ನಿನ್ನ ಹತ್ತಿರವಿರಬೇಕೆಂದು ಬಂದಿರುವೆನು.'

'ಆದರೆ ನೀವು ಮರಣಕ್ಕೀಡಾಗಬಹುದು.'

'ನೀನೇನು ನಡೆಸಿರುವಿ.'

'ನಾನು ಅವಶ್ಯವಾಗಿಲ್ಲಿರಬೇಕು. ನಿಮ್ಮ ಅಗತ್ಯವಿಲ್ಲಿಲ್ಲ.'

'ನೀನು ಎಲ್ಲೆಲ್ಲಿರುವಿಯೋ ಅಲ್ಲಲ್ಲಿ ನಾನಿದ್ದೇತಿರಬೇಕು.'

'ಬೇಡ ಗುರುಗಳೇ.'

'ಅದೇಕೆ,' ಎಂದು ಸಿಮೋರೆಡಿನ್‌ನು ಅಲ್ಲಿಯೇ ನಿಂತನು.

ದಿವಾಣಖಾನೆಯು ಹೆಣಗಳಿಂದ ತುಂಬಿತ್ತು. ಹೊರಗಿನ ಹತ್ತು ಜನರಿಗೆ ಒಳಗಿನವನೊಬ್ಬನು ಬಲಿಯಾಗುತ್ತಿದ್ದನು. ಆದರೆ ಹೊರಗಿನ ಜನರ ಸಂಖ್ಯೆ ಹೆಚ್ಚಾಗುತ್ತಿತ್ತು. ಒಳಗಿನ ಸಂಖ್ಯೆ ಕಡಿಮೆಯಾಗುತ್ತಿತ್ತು. ಮಾನವರ ಹತ್ಯಾಕಾಂಡವು ಅವ್ಯಾಹತವಾಗಿ ನಡೆದುದನ್ನು ಕಂಡು ಸಿಮೋರೆಡಿನ್‌ನು 'ಹೆಚ್ಚಿಗೆ ರಕ್ತಪಾತವು ಬೇಡ. ಶರಣುಬನ್ನಿರಿ. ನಾವು ೪|| ಸಾವಿರ; ನೀವು ೧೯ ಜನರು. ಇದರ ವಿಚಾರ ಮಾಡಿ ಶರಣಾಗತರಾ ಗಿರಿ' ಎಂದು ಸಿಮೋರೆಡಿನ್‌ನು ಕೂಗಿದನು.

'ಈ ತಕ್ಕರ ಬಾಯಿ ಬಂದುಮಾಡೋಣ' ವೆಂದು ಲ್ಯಾಂಟ್‌ನೆಕ್‌ನು ಸಿಮೋರೇಡಿನ್ನನ ಮೇಲೆ ಗುಂಡಿನ ಮಳೆಗರೆದನು.

'ಹಲ್ಲೆಯನ್ನು ಜೋರುಮಾಡಿರಿ. ಅವನೇ ಸಂರಕ್ಷಣ ಮಾಡುತ್ತಿದ್ದಾನೆ. ಮೇಲೇರಿ ಹೋಗುವವರು ಯಾರೂ ಇಲ್ಲವೆ' ಎಂದು ಗಾವೆನ್‌ನು ಘೂತ್ಕರಿಸಿದನು.

ಆ ಘೂತ್ಕಾರವನ್ನು ಕೇಳಿ ರೇಡೋನು 'ನಾನಿದ್ದೇನೆ' ಎಂದು ಉತ್ತರವಿತ್ತನು. ಹಲ್ಲೆಯನ್ನು ಮಾಡುವವರ ಮೈಯಲ್ಲಿ ರಣೋನ್ಮಾದ ತುಂಬಿತ್ತು. ರೇಡೋನು ಆ ನಿಕರದ ಹಲ್ಲೆಯಲ್ಲಿ ತನ್ನ ನಂಬಿಗೆಯ ಆರು ಜನರೊಂದಿಗೆ ನುಗ್ಗಿದನು. ಆದರೆ ಅವರಲ್ಲಿ ಇಬ್ಬರೆ ಮಾತ್ರ ಬದುಕಿದ್ದರು. ರೇಡೋ ತಾನು ಮೇಲೇರಿ ಹೋಗುತ್ತೇನೆಂದು ಗಾವೆನ್‌ನಿಗೆ ಹೇಳಿದಷನೆ, ಹತ್ತಬೇಕಾಗಿದ್ದ ಗೋಡೆಯ ಕಡೆಗೆ ದೃಷ್ಟಿಯನ್ನು ಬೀರಿದನು. ಸುರಂಗದ ಹೊಡೆತದಿಂದ ೨ನೆಯ ಅಂತಸ್ತಿನ ವರೆಗೂ ಬೋಕು ಬಿದ್ದಿತ್ತು. ಕಿಡಿಕಿಯ ಕಬ್ಬಿಣದ ಸಳಿಗಳೂ ಮುರಿದುಬಿದ್ದಿದ್ದವು. ಅದರಿಂದ ಯಾರಾದರೂ ಒಳಗೆ ಹೋಗಲು ಬರಬಹುದಾಗಿತ್ತು. ರೇಡೋನ ವಯಸು ೪೦ ರೊಳಗಿತ್ತು. ಆದರೂ ಅವನ ಮೈಯಲ್ಲಿ ತರತರಿತ ತರುಣನ ಉತ್ಸಾಹವು ತುಂಬಿತ್ತು. ಗೋಡೆಯಲ್ಲಿ ಬಿರುಕು ಬಿದ್ದುದರಿಂದ ಮೇಲೇರಿಹೋಗಲು ಅನುಕೂಲವೇ ಆಗಿತ್ತು. ರೇಡೋನು ತನ್ನ ಬಂದೂಕನ್ನು ಕೆಳಗಿಟ್ಟು, ಕೋಟು ಜಾಕೀಟು ತೆಗೆದು, ಚಣ್ಣದ ಕಿಸೆಯಲ್ಲಿ ಪಿಸ್ತೂಲನ್ನಿಟ್ಟುಕೊಂಡು ಬಾಯಲ್ಲಿ ಕಿರುಗತ್ತಿಯನ್ನು ಹಿಡಿದುಕೊಂಡು ಮೇಲೆ ಹತ್ತತೊಡಗಿದನು. ಕಾಲಲ್ಲಿ ಇಲ್ಲದ್ದರಿಂದ ಮೇಲೇರುವದು ಸುಲಭವಾದರೂ ಅಷ್ಟು ಎತ್ತರ ಏರಿಹೋಗುವದೆಂದರೆ ಜೀವದ ಸುತ್ತು ಬಂದಂತೆ ಇತ್ತು.

'ಸುದೈವದಿಂದ ಮೇಲಂತಸ್ತಿನಮೆಲೆ ಯಾರೂ ಇಲ್ಲದ್ದರಿಂದ ಒಳ್ಳೆಯದಾಯಿತು; ಇಲ್ಲವಾದರೆ ನನ್ನನ್ನು ಹತ್ತಿಸಿಯೇಗೊಡುತ್ತಿದ್ದಿಲ್ಲ' ಎಂದು ತನ್ನಷ್ಟಕ್ಕೆ ತಾನೇ ಅಂದುಕೊಂಡು ಸಾಗಿದನು. ಇನ್ನೂ ಸುಮಾರಾಗಿ ೪೦ ಫೂಟು ಏರಿಹೋಗಬೇಕಾಗಿತ್ತು. ಕಿಸೆಯಲ್ಲಿಯ ಪಿಸ್ತೂಲಿನ ಹಿಡಿಕೆಯು ಒಮ್ಮೊಮ್ಮೆ ಅಡ್ಡಬಂದು ತೊಂದರೆ ಕೊಡುತ್ತಿತ್ತು. ಮೇಲೆಮೇಲೆ ಹತ್ತುತ್ತ ಹೋದಂತೆ ಸ್ಥಳವು ಸಂಕುಚಿತವಾಗತೊಡಗಿದ್ದರಿಂದ ಕೆಳಗೆ ಬಿದ್ದುಬಿಡುವ ಸಂಭವ ಹೆಚ್ಚಾಗಿದ್ದಿತು. ಬಹುಪ್ರಯಾಸದಿಂದ ಕೊನೆ

ಗೊವೆ್ಕ್ರ ಅವನು ಕಿಡಿಕಿಯ ಹತ್ತಿರ ಬಂದು ತಲುಪಿದನು. ಅಡ್ಡಾತಿಡ್ಡಾ ಬಿದ್ದಂಥ ಕಬ್ಬಿಣದ ಸಳಿಗಳನ್ನು ಸರಿಸುತ್ತ ಒಳಗೆ ಹೋಗಲು ಅನುಕೂಲ ಮಾಡಿಕೊಂಡನು. ಕಿಡಿಕಿಯಲ್ಲಿ ತಲೆಯನ್ನು ಹಾಕಿ ಕೆಳಗಿಳಿಯಬೇಕೆನ್ನು ವಷ್ಟರಲ್ಲಿ ಅವನಿಗೆ ಅಸ್ತವ್ಯಸ್ತವಾಗಿ ಬಿದ್ದುಕೊಂಡಂಥ ಮನುಷ್ಯನೊಬ್ಬನು ಕಾಣಿಸಿದನು. ಅವನ ಕಣ್ಣು ಒಡೆದಿದ್ದವು ದವಡೆ ಹರಿದಿತ್ತು. ಬಾಯಿಂದ ನೆತ್ತರವು ಹರಿಯುತ್ತಿತ್ತು. ಆದರೂ ಆ ವ್ಯಕ್ತಿಯು ಟಣ್ಣನೆ ರೇಡೋನ ಮೇಲೆ ಹಾರಿ ಅವನ ಕಿಸೆಯಲ್ಲಿಯ ಪಿಸ್ತೂಲನ್ನೂ ಬಾಯಲ್ಲಿಯ ಕಿರುಗ ತ್ತಿಯನ್ನೂ ಕಸಿದುಕೊಂಡನು. ರೇಡೋ ಶಸ್ತ್ರರಹಿತನಾದನು.

ಕೆಳಗಿದ್ದ ರೌನ-ಟಿನ್-ಹಿವರ್‌ನಿಗೆ ಹೊಗೆಯಿಂದ ಉಸಿರುಕಟ್ಟಿ ದಂತಾಗಿ ಅವನು ಈ ಅಂತಸ್ತಿಗೆ ಧಾವಿಸಿ ಬಂದಿದ್ದರಿಂದ ಸ್ವಲ್ಪ ಆರಾಮ ವೆನಿಸಿತ್ತು. ನೆತ್ತರ ಹರಿವುದೂ ನಿಂತಿತ್ತು ಇಷ್ಟರಲ್ಲಿಯೇ ರೇಡೋ ಏರಿ ಬರುವದು ಅವನ ಕಣ್ಣಿಗೆ ಬಿದ್ದಿತು. ರೇಡೋ ಬಿಕ್ಕಟ್ಟಿನ ಸ್ಥಿತಿಯಲ್ಲಿದ್ದು ರಿಂದ ಅವನ ಪ್ರಾಣವನ್ನು ತೆಗೆದುಕೊಳ್ಳುವದೂ ಅಥವಾ ಬಿಡುವದೂ ಒಳಗಿದ್ದ ಮನುಷ್ಯನ ಕೈಯೊಳಗಿತ್ತು. ಇಬ್ಬರೂ ತೆಕ್ಕಿಮುಕ್ಕಿ ಬಿದ್ದು ಗುದ್ದಾಡಹತ್ತಿದರು. ಕರ್ಮಧರ್ಮ ಸಂಯೋಗದಿಂದ ರೌನ್-ಟಿನ್-ಹಿವ ರನು ಎರಡು ಪಿಸ್ತೂಲಗಳನ್ನು ಒಂದೊಂದು ಕೈಯಲ್ಲಿ ಹಿಡಿದಿದ್ದನು. ಅವನಿಗೆ ಒಂದೂ ಪಿಸ್ತೂಲು ಹಾರಿಸಲು ಸಾಧ್ಯವಾಗದ್ದರಿಂದ ಅವನು ಕತ್ತಿಯಿಂದ ರೇಡೋನ ಹೆಗಲಿಗೆ ಹೊಡೆದನು. ಆ ಹೊಡೆತವನ್ನು ಸೈರಿಸಿ ಕೊಂಡು ರೇಡೋನು ಅವನ ಮೇಲೆ ಹದ್ದಿನಂತೆ ಎರಗಬೇಕೆನ್ನುವಷ್ಟ ರಲ್ಲಿ ರೌನ್-ಟಿನ್-ಹಿವರನು ಪಿಸ್ತೂಲನ್ನು ಹೊಡೆಯಬೇಕೆಂದು ರೇಡೋನ ತೊಡೆಗೆ ಗುರಿಯಿಟ್ಟಿದ್ದನಾದರೂ ಅವನ ಕೈಗಳು ಥರಥರ ನಡುಗುತ್ತಿದ್ದವು. ಅದರಿಂದ ಒಮ್ಮೆಲೆ ಪಿಸ್ತೂಲು ಹಾರಿಸಲು ಅವನಿಂದಾಗ ಲಿಲ್ಲ. ಅವನ ಈ ಸ್ಥಿತಿಯನ್ನು ಕಂಡು ರೇಡೋ ಖೊಖ್ ಎಂದು ನಕ್ಕು 'ನೀಚಾ, ಆ ಸಣ್ಣ ಪಿಸ್ತೂಲಿನಿಂದ ನನ್ನನ್ನು ಹೆದರಿಸಬೇಕೆನ್ನುತ್ತೀಯಾ? ದೇವರು ನಿನಗೀಗಾಗಲೆ ಸಾಕಷ್ಟು ಶಿಕ್ಷೆಯನ್ನು ಕೊಟ್ಟೇಬಿಟ್ಟಿರುವನಲ್ಲಾ' ಎಂದು ಹಂಗಿಸಿದನು. ಅವನು ಮತ್ತೆ ಗುರಿಯನ್ನು ಸಾಧಿಸುವಷ್ಟರಲ್ಲಿ

ರೇಡೋ 'ಹುಂ, ಹಾರಿಸು ನಿನ್ನ ಪಿಸ್ತೂಲನ್ನು. ಯಾತಕ್ಕಾಗಿ ದಾರಿ ನೋಡುತ್ತಿರುವಿ?' ಎನ್ನುವಾಗ ಅವನು ಪಿಸ್ತೂಲಿನ ಕುದುರೆಯನ್ನು ಒತ್ತಿಯೇ ಬಿಟ್ಟನು. ಪಿಸ್ತೂಲಿನ ಗುಂಡು ರೇಡೋನ ಕಿವಿಗೆ ತಾಕಿ ಪಾರಾಯಿತು. ಅವನು ಎರಡನೆಯ ಪಿಸ್ತೂಲನ್ನು ತೆಗೆದುಕೊಳ್ಳುವ ಹವಣಿಕೆಯಲ್ಲಿರುವಾಗ ರೇಡೋನು ಅಡ್ಡಬಂದು 'ನನ್ನ ಒಂದು ಕಿವಿಯನ್ನಂತೂ ತೆಗೆದುಕೊಂಡಿ. ನೀನು ಎರಡು ಸಲ ನನ್ನನ್ನು ಹೊಡೆದಿ. ಈಗ ನನ್ನ ಸಳತಿಯಿದೆ' ಎಂದು ಅವನ ಮೇಲೆ ಬಿದ್ದು, ಅವನನ್ನು ಕೆಳಗೆ ಕೆಡವಿದನು. ಅದರಿಂದ ಆ ಪಿಸ್ತೂಲು ಹಾರಿ, ಗುಂಡು ಮೇಲಿನ ಛತ್ತಿಗೆ ಬಡಿಯಿತು. ರೇಡೋನು ರೌನ್-ಟನ್-ಹಿವರನ ಗೋಣು ಹಿಡಿದು ತಿರುವಲಾಗಿ ಅವನು ಮೂರ್ಛೆ ಬಂದು ಕೆಳಗೆ ಬಿದ್ದನು. ರೇಡೋ ಅವನನ್ನು ಕಾಲಿನಿಂದ ತುಳಿಯುತ್ತ 'ಎಚ್ಚರಿಕೆ' ಇಲ್ಲಿಂದೆದ್ದರೆ. ನಿನ್ನನ್ನು ಕೊಲ್ಲುವ ಹೊಲ್ಲದ ಆಟವನ್ನು ಆಡಲಾರೆ. ನಿನ್ನ ಬೆಲೆಯೆಷ್ಟೆಂದರೆ ಕಾಲಿನಿಂದ ತುಳಿಸಿಕೊಳ್ಳುವಷ್ಟು. ಸಾಯಿ. ನಿನಗೆ ಸಾವು ತಪ್ಪಿದ್ದಲ್ಲ.' ಎಂದಂದು, ಅವನು ಎರಡನೆಯ ಕೋಣೆಯೊಳಗೆ ಹೊಕ್ಕನು. ಅಷ್ಟರಲ್ಲಿ ರೌನ್-ಟನ್-ಹಿವರನು ಏನೇನೋ ಒಟಗುಡತೊಡಗಿದನು. ಅದನ್ನು ಕೇಳಿ, ರೇಡೋ ಹಿಂತಿರುಗಿ 'ನಾಲಿಗೆಯನ್ನು ಬಿಗಿಹಿಡಿ. ನನ್ನನ್ನು ಇನ್ನಷ್ಟು ಸಿಟ್ಟಿಗೆಬ್ಬಿಸಬೇಡ. ನಿನ್ನ ಜೀವ ತೆಗೆದುಕೊಳ್ಳುವದೆಂದರೆ ನನ್ನ ಮಾನಕ್ಕೆ ಸಾಲದು' ಎಂದು ಗದ್ದರಿಸಿದನು. ಅಸ್ತವ್ಯಸ್ತವಾಗಿ ಹರವಿದ್ದ ತನ್ನ ತಲೆಗೂದಲನ್ನು ಸರಿಪಡಿಸಿಕೊಳ್ಳುತ್ತ ರೇಡೋ 'ಮುಂದೇನು ಮಾಡಲಿ ನಾನು? ಇಷ್ಟೆಲ್ಲ ಒಳಿತಾಯಿತು. ಆದರೆ ನಾನು ನಿಶಸ್ತ್ರನಾಗಿದ್ದೇನೆ. ಈ ನಾಯಿ ಎರಡೂ ಗುಂಡು ಹಾಳು ಮಾಡಿದನೆಂ'ದುಕೊಳ್ಳುತ್ತ, ಕಿವಿಯ ಮೇಲೆ ಕೈಯಾಡಿಸಿಕೊಂಡನು.

'ಅಯ್ಯೋ ಮೂರ್ಖಾ! ಮೂರ್ಖಾ, ನೀನು ನನ್ನ ಒಂದು ಕಿವಿಯನ್ನು ಕತ್ತರಿಸಿ ಬೇಕಾದಷ್ಟು ಕೀರ್ತಿಯನ್ನು ಸಂಪಾದಿಸಿರುವಿ. ಕಿವಿಯೇನು ಒಂದು ಅಲಂಕಾರವಲ್ಲವೇ? ಒಂದಿದ್ದರೂ ನಡೆಯುವದು.

ಹೆಗಲಿಗೆ ಕತ್ತಿಯಿಂದಲೂ ಹೊಡೆವೆ. ಇದಲ್ಲೊಲ್ಲದು. ಈಗ ಸತ್ತು ಹೋಗು' ಎಂದೆಂದು ಮತ್ತೆ ಹೊರಳಿದನು.

ಕೆಳಗೆ ಗೊಂದಲವೇ ಗೊಂದಲವೆದ್ದಿತ್ತು. ಯುದ್ಧವು ಘನಘೋರ ವಾಗಿ ನಾಗಿತ್ತು. 'ರಾಜನಿಗೆ ಜಯವಾಗಲಿ' ಎಂದು ಹೇಗೆ ಚೀರಾ ಡುತ್ತಿದ್ದಾರೆ! ಏನೇ ಇದ್ದರೂ ಅವರು ಬಹಳ ಶೌರ್ಯದಿಂದ ಕಾದುತ್ತಿದ್ದಾರೆಂಬ ಮಾತು ಮಾತ್ರ ನಿಜ ಎಂದು ರೇಡೋ ತನ್ನ ಮನಸಿನಲ್ಲಿಯೇ ಗೊಣಗುಟ್ಟಿಕೊಂಡನು. ಅಷ್ಟರಲ್ಲಿ ಅವನ ಕಾಲಿಗೆ ಕತ್ತಿಯು ತಾಕಿತು; ಅದನ್ನೆತ್ತಿಕೊಂಡನು ರೌನ್-ಟಿನ್-ಹಿವರನ ಚಲನ ವಲನವು ಶಾಂತವಾಗಿತ್ತು ಅದರಿಂದ ಅವನ ಅಂತ್ಯವಾಗಿರಬೇಕೆಂದು ರೇಡೋ ಭಾವಿಸಿ, ದಿವಾಣಖಾನೆಯಲ್ಲಿ ಹೊಕ್ಕು ಹಾದಿಯನ್ನು ಹುಡುಕ ತೊಡಗಿದನು. ಅಷ್ಟರಲ್ಲಿ ಅವನಿಗೆ ನಡುವಿರುವ ಕತ್ತಲೆಕೋಣೆಯಲ್ಲಿ ಹೊಳೆಯುವ ಪದಾರ್ಥಗಳು ಕಾಣಿಸಿದ್ದರಿಂದ ಆ ಕಡೆಗೆ ಅವನು ತೆರಳಿ ದನು. ಅಲ್ಲಿ ಬಂದೂಕು, ಪಿಸ್ತೂಲು, ಮದ್ದು-ಗುಂಡುಗಳು ಕೈಗೆ ಹತ್ತಿದವು. ವೈರಿಗಳು ಕೊನೆಯ ಅಂಕವನ್ನು ಇಲ್ಲಿ ಮುಗಿಸಬೇಕೆಂದು ಇಷ್ಟೆಲ್ಲ ಸಂಗ್ರಹ ವನ್ನಿಲ್ಲಿ ಮಾಡಿರಬೇಕೆಂದು ಅವನು ಊಹಿಸಿದನು.

ಈ ಯುದ್ಧ ಸಾಮಗ್ರಿಯನ್ನು ನೋಡಿ ಅವನಿಗೆ ಆನಂದವಾಗಿ, ಶಸ್ತ್ರಾ ಸ್ತ್ರಗಳನ್ನು ಎತ್ತಿಕೊಂಡು ತೂರಾಡಿದನು. ಅವನ ಮೈಯಲ್ಲಿ ನೂರುಪಟ್ಟು ಶಕ್ತಿ ಹೆಚ್ಚಿಗೆ ಬಂದಂತಾಗಿತ್ತು. ಅಲ್ಲಿದ್ದ ಮೇಜಿನ ಹಿಂದೆ ಅವನಿಗೆ ಸಾವಟಿ ಗೆಗಳು ಕಾಣಿಸಿದವು. ಆ ಸಾವಟಿಗೆಗಳು ಕೆಳಗಿನ ಅಂತಸ್ತಿಗೂ, ಮೇಲಿನ ಅಂತಸ್ತಿಗೂ ಹೋಗತಕ್ಕಂಥವಾಗಿದ್ದವು. ರೇಡೋ ಪಿಸ್ತೂ ಲೊಂದನ್ನು ತೆಗೆದುಕೊಂಡು ಬಾಗಿಲಿಗೆ ಗುರಿಯಿಟ್ಟು ಹೊಡೆದನು ಬಂದೂಕನ್ನು ಹಾರಿಸಿ ಢಡಲ್ ಎಂಬ ಶಬ್ದವನ್ನುಂಟು ಮಾಡಿದನು. ಆ ಮೇಲೆ 'ಪ್ಯಾರಿಸಕ್ಕೆ ಜಯವಾಗಲಿ' ಎಂದು ಕೂಗಿ ಎಲ್ಲಕ್ಕೂ ದೊಡ್ಡದಾದ ಬಂದೂಕನ್ನು ತೆಗೆದುಕೊಂಡು ಆ ಸಾವಟಿಗೆ ಹಾರಿಸಿ, ಅದರ ಪರಿಣಾಮ ವೇನಾಗುತ್ತದೆಂಬದನ್ನು ನೋಡುತ್ತ ನಿಂತನು. ಕೆಳಗಂತೂ ವಿಪರೀತ ಗೊಂದಲವೆದ್ದಿತ್ತು. ಮೇಲಿನ ಪ್ರಹಾರವನ್ನು ಕೇಳಿ ಕೆಳಗಿನವರು ಗಾಬರಿ

ಗೊಂಡಿದ್ದರು. ರೇಡೋ ಹಾರಿಸಿದ ದೊಡ್ಡ ಬಂದೂಕಿಗೆ ಇಬ್ಬರು ಆಹುತಿ ಯಾದರು.

ಲ್ಯಾಂಟ್‌ನೆಕ್‌ನು 'ಶತ್ರುಗಳು ಮೇಲಿನಂತಸ್ತಿಗೆ ಬಂದಿದ್ದಾರೆ' ಎಂದಂದನು. ಅದನ್ನು ಕೇಳಿ ಕೆಳಗಿನ ಸ್ಥಳವನ್ನು ಬಿಟ್ಟು, ಓಡುತ್ತ ಪಾವಟಿ ಗೆಗಳ ಕಡೆಗೆ ಬಂದರು. ಲ್ಯಾಂಟ್‌ನೆಕ್‌ನು ಒಂದೇ ಸಮನೆ ಅವರಿಗೆ ಪ್ರೋತ್ಸಾಹವನ್ನೀಯುತ್ತಿದ್ದನು. ಅವರೂ ಅವನು 'ತಡೆಯಿರಿ ! ತಡೆಯಿರಿ! ಈಗ ಓಡಿ ಹೋಗುವುದರಲ್ಲಿಯೇ ಶೌರ್ಯವಿದೆ; ಹಿತವಿದೆ. ನಡೆಯಿರಿ ಎರಡ ನೆಯ ಅಂತಸ್ತಿಗೆ. ಅಲ್ಲಿ ಎಲ್ಲರೂ ಕೂಡಿಯೇ ಕೊಲೆಯನ್ನು ಆರಂಭಿಸೋಣ' ಅನ್ನುತ್ತಿದ್ದನು. ಅವನು ಎಲ್ಲಕ್ಕೂ ಹಿಂದಿರುತ್ತಿದ್ದುದರಿಂದಲೇ ಎಷ್ಟೋ ಕೆಲಸಗಳಾಗುತ್ತಿದ್ದವು. ಪಾವಟಿಗೆಗಳ ಬಾಯಿಗೆ ಇದ್ದ ರೇಡೋನಿಗೆ ಈ ಜನರು ಬರುವದು ಕಾಣಿಸಿತು. ಅವನ ಬೆರಳು ಬಂದೂಕಿನ ಕುದುರೆಯ ಮೇಲೆಯೇ ಇತ್ತು. ಮೊಟ್ಟ ಮೊದಲು ಬಂದವನಿಗೆ ಬಂದೂಕಿನ ಪ್ರಸಾದ ದೊರೆಕಿತು. ಲ್ಯಾಂಟ್‌ನೆಕ್‌ನೇ ಮೊದಲು ಬಂದಿದ್ದರೆ ಅವನ ಅಂತ್ಯವೇ ಆಗಬಹುದಿತ್ತು.

ರೇಡೋ ಎರಡನೆಯ ಬಂದೂಕು ತೆಗೆದುಕೊಳ್ಳುವಷ್ಟರಲ್ಲಿ ಆ ಜನರೆ ಲ್ಲರು ಮೇಲೆ ಬಂದುಬಿಟ್ಟರು. ಲ್ಯಾಂಟ್‌ನೆಕ್‌ನು ಎಲ್ಲರ ಹಿಂದೆ ಸಾವಕಾಶ ವಾಗಿ ಬೆನ್ನು ಹತ್ತಿ ಬರುತ್ತಿದ್ದನು. ಮೊದಲನೆಯ ಅಂತಸ್ತಿನ ಕೋಣೆಯಲ್ಲಿ ವೈರಿಗಳು ತುಂಬಿರಬೇಕೆಂದು ಅವನು ಅಲ್ಲಿ ನಿಲ್ಲದೆ, ಎರಡನೆಯ ಅಂತಸ್ತಿಗೆ ಬಂದನು. ಅಲ್ಲಿ ಕಬ್ಬಿಣದ ಬಾಗಿಲವೂ, ಗಂಧಕದ ಪುಡಿಯೂ ಇದ್ದವು. ಅಲ್ಲಿಯೇ ಅವನು ಮರಣ ಇಲ್ಲವೆ ಶರಣವಾಗುವ ಉದ್ದೇಶವನ್ನಿಟ್ಟುಕೊಂಡಿ ದ್ದನು. ಹಲ್ಲೆಗಾರರು ಮೇಲಿನಿಂದಾಗುತ್ತಿರುವ ಪ್ರತಿ ಹಲ್ಲೆಯನ್ನು ಕಂಡು ಗಾಬರಿಯಾಗುವದಕ್ಕಿಂತಲೂ ಹೆಚ್ಚಾಗಿ ಗಾವೆನ್‌ನು ಗಾಬರಿಯಾಗಿ ದ್ದನು. ಆದರೆ ಅವನು ವಿಚಾರದ ತಂದ್ರಿಯಲ್ಲಿ ಬಹಳ ಹೊತ್ತನ್ನು ಕಳೆ ಯದೆ ಒಮ್ಮಿಗೆಲೆ ತನ್ನ ಜನರೊಂದಿಗೆ ಮೊದಲನೆಯ ಅಂತಸ್ತನ್ನು ಮುತ್ತಿದನು. ಅಲ್ಲಿದ್ದ ರೇಡೋ ಅವನಿಗೆ ಸಲಾಮು ಸಲ್ಲಿಸಿ 'ಸೇನಾಪತಿ ಸಾಹೇಬ, ನಾನು ಹೀಗೆ ಮಾಡಿದ್ದೇನೆ. ನಾನು ನಿಮ್ಮ ಯೋಜನೆಯಂತೆ

ವೈರಿಗಳನ್ನು ಅಡಕೊತ್ತಿನಲ್ಲಿ ಸಿಕ್ಕ ಅಡಿಕೆಯಂತೆ ಸಿಗಿಸಿದ್ದೇನೆ' ಎಂದು ಹೇಳಿದನು.

'ಒಳ್ಳೇ ಕೆಲಸ ಮಾಡಿದೆ. ನೀನು ಬುದ್ಧಿವಂತ' ಎಂದು ನಗು ನಗುತ್ತ ಗಾವೆನ್‌ನು ಅವನನ್ನು ಹುರಿದುಂಬಿಸಿದನು. ಕತ್ತಲೆಯಲ್ಲಿ ಕೆಲಸಮಯ ಗಳು ಕಳೆದ ಮೇಲೆ ಕಾಣಿಸುವಂತೆಯಾದಾಗ ಗಾವೆನ್‌ನು ಅವನನ್ನು ನೋಡಿ 'ಗೆಳೆಯನೇ, ನೀನು ಗಾಯಗೊಂಡಿರುವಿಯಲ್ಲ—ಮೈಯೆಲ್ಲ ನೆತ್ತರವಾಗಿದೆಯಲ್ಲ' ಎಂದು ಸಮಾಧಾನಮಾಡಲೆಳಿಸಿದನು. ರೇಡೋ 'ಅದರದೇನು ಮಹಾ! ಒಂದು ಕಿವಿ ಕಡಮೆ ಏನು, ಹೆಚ್ಚು ಏನು? ಒಂದು ಕತ್ತಿಯ ಹೊಡೆತ ಬಿತ್ತು. ಆದರಿಂದ ನೆತ್ತರ ಸ್ವಲ್ಪ ಹೋಯಿತು ಎಂದು ನೋವಿನ ಪರಿವೆಯಿಲ್ಲದೆ ಉತ್ತರವಿತ್ತನು.

ಈ ಅಂತಸ್ತಿನಲ್ಲಿ ಹಳ್ಳಿಗಾರರು ಮೇಲೇರಿ ಹೋಗುವ ಮೊದಲು ಸ್ವಲ್ಪ ಹೊತ್ತು ತಡೆದರು. ಕೂಡಲೇ ಕಂದೀಲನ್ನು ತಂದು ದೀಪಹಚ್ಚ ಲಾಯಿತು. ಸಿಮೋರೆಡಿನ್‌ನು ಬಂದು ಗಾವೆನ್‌ನ್ನು ಕೂಡಿಕೊಂಡನು. ಒಬ್ಬರಿಗೊಬ್ಬರು ವಿಚಾರವಿನಿಮಯ ನಡೆಸಿದರು. ಆ ಸಂದರ್ಭವೇ ಹಾಗಿತ್ತು. ಒಳಗಿರುವ ವೈರಿಗಳ ಹತ್ತಿರ ಮದ್ದು, ಗುಂಡುಗಳು ಇದ್ದ ವೆಂಬದು ಗಾವೆನ್‌ನಿಗೆ ಗೊತ್ತಾಗಿದ್ದಿಲ್ಲ. ಎರಡನೆಯ ಅಂತಸ್ತಿನಲ್ಲಿಯೇ ಕೊನೆಯ ಅಂಕು ಆಗುವದೆಂದೂ ಅವನಿಗೆ ಹೊಳೆದಿರಲಿಲ್ಲ. ಆದರೂ ಪಾವಟಿಗೆಗಳನ್ನು ಸುರಂಗ ಹಚ್ಚಿ, ಹೊಡೆಯಬೇಕೆಂಬದು ಮಾತ್ರ ಅವ ನಿಗೆ ಗೊತ್ತಾಗಿತ್ತು. ಶತ್ರುಗಳು ಒಳಗೆ ಸಿಕ್ಕದ್ದರಿಂದ ಓಡಿಹೋಗುವದು ಸಾಧ್ಯವಿಲ್ಲೆಂದು ಅವನಿಗೆ ಮನದಟ್ಟಾಗಿತ್ತು. ಅದೇನು ಕೀಲಿಯಲ್ಲಿ ಕೈಯ ನ್ನಿಟ್ಟಷ್ಟು ಸ್ಪಷ್ಟವಾಗಿತ್ತೆಂಬದರಲ್ಲಿ ಸಂಶಯವೇ ಇರಲಿಲ್ಲ. ಈ ಮಾತು ನಿಶ್ಚಿತವಿದ್ದುದರಿಂದಲೇ ಗಾವೆನ್‌ನು ವಿಚಾರಮಾಡಲು ಕೆಲ ಸಮಯ ತೆಗೆದು ಕೊಂಡನು. ಅವನ ಕಡೆಗೆ ಎಷ್ಟೋ ಜನರು ಆಹುತಿಯಾಗಿದ್ದರೂ, ಬದುಕಿಸಿಕೊಳ್ಳಲು ಎಷ್ಟು ಸಾಧ್ಯವೋ ಅಷ್ಟು ಜನರನ್ನಾದರೂ ಬದುಕಿಸಿ ಕೊಳ್ಳಬೇಕೆಂದು ಅವನ ಪ್ರಯತ್ನ ನಡೆದಿತ್ತು. ಆದರೆ ಈ ಕೊನೆಯ ಅಂಕಿನ ನಿಕರದ ಹೋರಾಟವು ಭೀಕರ ಸ್ವರೂಪದ್ದಿತ್ತು. ಹಳ್ಳಿಗಾರರು

ಸೇನಾಪತಿಯ ಆಜ್ಞೆಗಾಗಿ ಕುತೂಹಲವುಳ್ಳವರಾಗಿ ದಾರಿ ಕಾಯುತ್ತಿದ್ದರು. ಸಿವೋರೆಡಿನ್, ಗಾವೆನ್‌ರ ವಿಚಾರ ನಡೆದಿತ್ತು. ರೇಡೋ ಸಮೀಪದಲ್ಲಿಯೇ ಇದ್ದನು. ಸ್ವಲ್ಪ ಸಮಯ ಗತಿಸಿದನಂತರ ರೇಡೋ ಸಲಾಮು ಮಾಡಿ 'ಸೇನಾಪತಿ ಸಾಹೇಬ, ನನ್ನ ಮೇಲೆ ಒಂದಿಷ್ಟು ದಯವನ್ನು ತೋರಿಸುವಿರಾ?' ಎಂದು ಕೇಳಿಯೇ ಬಿಟ್ಟನು. ಅದನ್ನು ಕೇಳಿ ಗಾವೆನ್‌ನು 'ಏನದು ದಯಾ?' ಎಂದು ವಿಚಾರಿಸಲಾಗಿ ರೇಡೋ 'ಮೇಲೆ ಹೋಗಲು ಮೊದಲಿಗೆ ನನಗೆ ಅಪ್ಪಣೆ ಮಾಡಬೇಕು' ಎಂದು ಶ್ರುತಪಡಿಸಿದನು. ಈ ಯಾಚನೆಯನ್ನು ಮನ್ನಿಸದ ಹೊರತು ವಿಧಿಯಿಲ್ಲವಾಗಿತ್ತು ಗಾವೆನ್‌ನಿಗೆ. ಯಾಕೆಂದರೆ ಅಪ್ಪಣೆ, ದೊರೆಯದಿದ್ದರೂ ಅವನೇನು ಬಿಟ್ಟಪ್ಪನಲ್ಲವೆಂಬದನ್ನು ಗಾವೆನ್‌ನು ಪೂರ್ಣ ಬಲ್ಲವನಾಗಿದ್ದನು!

ಈ ಪ್ರಕಾರವಾಗಿ ಇಲ್ಲಿ ಹಲ್ಲೆಯ ವಿಚಾರ ನಡೆದಿರುವಾಗ ಮೇಲಿನಂತಸ್ತಿನಲ್ಲಿ ತಮ್ಮ ಸಂರಕ್ಷಣೆಯನ್ನು ಹೇಗೆ ಮಾಡಿಕೊಳ್ಳಬೇಕೆಂಬ ಸಿದ್ಧತೆ ಸಾಗಿತ್ತು. ಮಾನವನಿಗೆ ಯಶಸ್ಸು ದೊರಕಿತೋ ತ್ವೇಷವುಂಟಾಗುತ್ತದೆ; ಅಪಯಶಸ್ಸು ಬಂದರೆ ಹುಚ್ಚನಾಗುತ್ತಾನೆ. ಕೆಳಗಿನ ಅಂತಸ್ತಿನಲ್ಲಿದ್ದವರು ಪೂರ್ಣ ಆಶಾವಾದಿಗಳಾಗಿದ್ದರು. ಮೇಲಿನವರು ಪೂರ್ಣ ನಿರಾಶೆರಾಗಿದ್ದರು. ಒಳಗಿದ್ದವರು ಮೇಲಿನ ಅಂತಸ್ತಿಗೆ ಹೋದಾಗ, ವೈರಿಗಳು ಬರುವ ಮಾರ್ಗವನ್ನು ಮೊದಲು ಬಂದು ಮಾಡಬೇಕೆಂದು ನಿರ್ಧರಿಸಿ, ಬಾಗಿಲವನ್ನಿಕ್ಕಿದರೆ ಸಾಕಾಗದೆಂದು ಭಾವಿಸಿ ಪಾವಟಗೆಯ ಮಾರ್ಗವನ್ನೇ ಬಂದು ಮಾಡುವದು ಅತ್ಯವಶ್ಯಕವೆಂದು ಅದರ ವ್ಯವಸ್ಥೆಗೆ ತೊಡಗಿದರು. ಇಮಾನಸನು ಅಲ್ಲಿ ಪಂಜು ಹೊತ್ತಿಸಿ ಬೆಳಕು ಮಾಡುವ ಯತ್ನ ನಡೆಸಿದ್ದನು. ಆ ಕೋಣೆಯಲ್ಲಿ ದೊಡ್ಡದಾದ ಅರಿವೆಯ ಕಪಾಟೊಂದಿತ್ತು. ಅದನ್ನು ಬಹು ಪ್ರಯಾಸದಿಂದ ಹೊತ್ತು ತಂದು ಪಾವಟಿಗೆಗಳ ಬಾಯಲ್ಲಿರಿಸಿದರು. ಅದು ಗಟ್ಟಿಯಾಗಿ ಕುಳಿತದ್ದರಿಂದ ಆ ಮಾರ್ಗದ ಅಂಜಿಕೆಯು ತಪ್ಪಿತೆಂದು ಅವರು ಸಮಾಧಾನಪಟ್ಟಿರಲು ಸಾಕು. ಆ ಕಪಾಟಿನ ಮೇಲೆ ಸಣ್ಣ ಭಾಗ ಮುಚ್ಚದೆ ಇದ್ದುದರಿಂದ ವೈರಿಗಳು ಒಬ್ಬೊಬ್ಬರೇ ಅಲ್ಲಿಂದ ಬರಲು ಅವಕಾಶವಿತ್ತು. ಆದರೂ ಅಂಥ ಹುಚ್ಚುತನ ಮಾಡಿ ಬಂದು

ಪಕ್ಷಕ್ಕೆ ಬಂದಿದ್ದರೆ ಅವರ ಅಂತ್ಯವನ್ನು ಸಹಜವಾಗಿ ಮಾಡಬಹುದೆಂಬ ಕಲ್ಪನೆಯಿಂದ ಅವರು ಅದರ ಗೊಡವೆಗೆ ಹೋಗದೆ ಹಾಗೆಯೇ ಬಿಟ್ಟರು.

ಹೀಗೆ ಮಾರ್ಗವನ್ನು ಮುಚ್ಚಿದ್ದರಿಂದ ಕೆಲವೊಂದು ಸಮಯ ದೊರೆತಿತ್ತು. ಅವರು ತಮ್ಮ ೧೯ ಮಂದಿಯಲ್ಲಿ ಉಳಿದವರೆಷ್ಟು ಮಂದಿ ಎಂಬುದನ್ನು ಎಣಿಸಿಕೊಳ್ಳಲಾಗಿ ಏಳೇ ಜನರೆಂದು ಗೊತ್ತಾಯಿತು. ಆ ಏಳರಲ್ಲಿ ಲ್ಯಾಂಟ್‌ನೆಕ್ ಮತ್ತು ಇಮಾನಸನನ್ನು ಬಿಟ್ಟು ಉಳಿದ ಐವರು ಗಾಯಗೊಂಡವರಾಗಿದ್ದರು. ಅವರ ಮದ್ದು-ಗುಂಡುಗಳ ಪೆಟ್ಟಿಗೆಗಳು ಬರಿದಾಗಿದ್ದವು ನಾಲ್ಕೆ ನಾಲ್ಕು ಗುಂಡುಗಳು ಮಾತ್ರ ಉಳಿದಿದ್ದವು ನಾವು ಶೇಷವಾಗಲು ಮಾತ್ರ ಆ ಏಳು ಜನರು ಉಳಿದಿದ್ದರು ಅವರ ಅಂತ್ಯಕಾಲವು ಸಮೀಪಿಸಿತ್ತು. ಆ ಹೊತ್ತಿಗಾಗಿ ಮೃತ್ಯುವು 'ಆ' ಯೆಂದು ಬಾಯ್ತೆರೆದು ನಿಂತಂತೆ ಭಾಸವಾಗುತ್ತಿತ್ತು.

ಹಲ್ಲೆಯು ಆರಂಭವಾಗುವುದರಲ್ಲಿತ್ತು. ಬಂದೂಕಿನ ಸಪ್ಪಳವು ಕೇಳಬರುತ್ತಲಿತ್ತು. ಓಡಿಹೋಗಲು ಮಾರ್ಗವೇ ಇಲ್ಲದಂತಾಗಿತ್ತು. ಇದ್ದುಬಿದ್ದ ಮಾರ್ಗವೆಂದರೆ ಮೇಲಿಸಿಂದ ಕೆಳಗೆ ಹಾರಿಕೊಂಡು ಕಪಾಳ ಮೋಕ್ಷ ಮಾಡಿಕೊಳ್ಳುವದು. ಅದನ್ನೊಂದನ್ನು ಬಿಟ್ಟರೆ ಬೇರೆ ಗತಿಯೇ ಇರಲಿಲ್ಲ. ಅಷ್ಟರಲ್ಲಿ ಲ್ಯಾಂಟ್‌ನೆಕ್‌ನು 'ಎಲ್ಲಾ ಮುಗಿಯಿತೇ' ಎಂದು ಕೇಳಿ, ಅವರಲ್ಲೊಬ್ಬನಿಗೆ 'ಧರ್ಮೋಪದೇಶಕನಾಗು' ಎಂದು ಹೇಳಿದನು. ಆಮೇಲೆ ಮೊಣಕಾಲ ಮಂಡೆಯನ್ನೂರಿ ಪ್ರಾರ್ಥಿಸತೊಡಗಿದನು. ಅತ್ತ ಬಂದೂಕಿನ ಧಡ್ ಧಡಲ್ಲೆಂಬ ಸದ್ದು ತೀರ ಹತ್ತಿರದಲ್ಲಿ ಬರತೊಡಗಿತ್ತು. ರಕ್ತದಿಂದ ಸ್ನಾನ ಮಾಡಿದ ಆ ಧರ್ಮೋಪದೇಶಕನು ಪ್ರಾರ್ಥನೆಗಳನ್ನು ಹೇಳತೊಡಗಿದನು. ಸ್ವಭಾವತಃ ನಾಸ್ತಿಕವಾದ ಲ್ಯಾಂಟ್‌ನೆಕನೂ ಈ ಹೊತ್ತಿನಲ್ಲಿ ಮೊಣಕಾಲ ಮಂಡೆಯೂರಿ ಕುಳಿತುಕೊಂಡಿದ್ದನು.

"ಹುಂ, ಪ್ರತಿಯೊಬ್ಬರೂ ನಿಮ್ಮ ನಿಮ್ಮ ಅಪರಾಧಗಳನ್ನು ಒಪ್ಪಿಕೊಳ್ಳಬೇಕು" ಎಂದು ಧರ್ಮೋಪದೇಶಕನು ಹೇಳಿದನು. ಎಲ್ಲರೂ ತಮ್ಮ ತಮ್ಮ ಪಾಪಕೃತ್ಯಗಳನ್ನು ಪಠಿಸಿದರು. ಆಮೇಲೆ ಆ ಧರ್ಮೋಪದೇಶಕನು 'ನಾನು ದೇವರ ಹೆಸರಿನಿಂದ ನಿಮ್ಮೆಲ್ಲರನ್ನೂ ಎಲ್ಲ ಪಾಪಗಳಿಂದ ಮುಕ್ತ

ಮಾಡುತ್ತೇನೆ. ನಿಮ್ಮೆಲ್ಲರ ಆತ್ಮಗಳು ಸುಖದಿಂದ ಪಾರಾಗಿ ಹೋಗಲಿ' ಎಂದು ಅವರಿಗೆ ಹೇಳಿದನು. ಎಲ್ಲರೂ ಏಕಕಂಠದಿಂದ 'ಶಾಂತಿಃ ಶಾಂತಿಃ, ಶಾಂತಿಃ' ಎಂದು ಕೂಗಿದರು.

'ಇನ್ನು ನಾವು ಸಾಯೋಣ' ಎಂದು ಲ್ಯಾಂಟ್‌ನೆಕ್‌ನೆಂದನು.

'ಹೊಡೆಹೊಡೆಯುತ್ತಾ ಸಾಯೋಣ' ಎಂದು ಇಮಾನಸನೆಂದನು. ಅಷ್ಟರಲ್ಲಿ ಕಪಾಟಿಗೆ ಆಗುತ್ತಿರುವ ಆಘಾತವು ಅವರಿಗೆ ಕೇಳಬಂದಿತು. ಧರ್ಮಾಧ್ಯಕ್ಷನು 'ಈಶ್ವರ ಚಿಂತನೆಯನ್ನು ಮಾಡಿರಿ. ಈ ಜಗತ್ತಿನ ವಿಚಾರ ಮಾಡಬೇಡಿರಿ' ಎಂದು ಉಪದೇಶಿಸಿದನು. ಲ್ಯಾಂಟ್‌ನೆಕ್‌ನು 'ಇನ್ನೇನು ನಾವು ಮೃತ್ಯುಮುಖದಲ್ಲಿಯೇ ಸಿಕ್ಕಿದ್ದೇನೆ' ಎಂದನು.

ಐವರು ಮಂಡೆಯೂರಿದ್ದರು. ಧರ್ಮೋಪದೇಶಕನೂ ಲ್ಯಾಂಟ್‌ನೆಕ್‌ನೂ ನೆಟ್ಟಗೆ ನಿಂತಿದ್ದರು ಧರ್ಮೋಪದೇಶಕನು ಅಧೋದೃಷ್ಟಿಯನ್ನು ಮಾಡಿ ಪ್ರಾರ್ಥನೆ ಮಾಡುತ್ತಿದ್ದನು ಲ್ಯಾಂಟ್‌ನೆಕ್‌ನು ವಿಚಾರಮಗ್ನನಾಗಿದ್ದನು. 'ಆ' ಎಂದು ಬಾಯಿತೆರೆದ ಮೃತ್ಯುವು ಮುಂದಿನ ಕ್ಷಣಕ್ಕಾಗಿ ಕಾದು ಕುಳಿತಿತ್ತು. ಇಷ್ಟರಲ್ಲಿ ಏಕಾಏಕಿಯಾಗಿ ಅವರಿಗೆ 'ನಾನು ನಿಮಗೆ ಹೇಳಿದ್ದಿಲ್ಲವೇ ?' ಎಂಬ ಗಾಬರಿಗೊಂಡ ಧ್ವನಿಯೊಂದು ಕೇಳಬಂದಿತು. ಎಲ್ಲರೂ ಸ್ತಂಭಿತರಾಗಿ ಆ ಸ್ವರ ಕೇಳಿಸಿದತ್ತ ಹುಳುಹಳು ನೋಡತೊಡಗಿದರು. ಗೋಡೆಯಲ್ಲಿ ಹೊರಗೆ ಹೋಗುವ ಮಾರ್ಗವುಂಟಾಗುತ್ತಿರುವ ದೃಶ್ಯವು ಅವರಿಗೆ ಸ್ಪಷ್ಟವಾಗಿ ಕಾಣಬಂದಿತು. ಕಲ್ಲಿನ ಮೇಲಿರುವ ಕಲ್ಲೊಂದು ತಿರುಗಿತು. ಅದರಿಂದ ಗೋಡೆಯೊಳಗೆ ಮಾರ್ಗವುಂಟಾಯಿತು. ಅದರಿಂದ ಹೊರಗೆ ಹೋಗಲು ಅನುಕೂಲವಾಯಿತು. ಅಕಸ್ಮಾತ್ತಾಗಿ ಉಂಟಾದ ಈ ಮಾರ್ಗದಾಚೆಗೆ ಪಾವಟಿಗೆಗಳಿದ್ದವು. ಆ ಗೋಡೆಯಲ್ಲಾದ ಕಿಂಡಿಯಲ್ಲಿ ಒಂದು ಆಕೃತಿಯು ಕಾಣಿಸಿತು. ಆ ಆಕೃತಿಯ ಮುಖಚರ್ಯೆಯ ಮೇಲಿಂದ ಅವನು 'ಹಲಮಲೋನನೇ ಆಗಿರಬೇಕೆಂದು ಲ್ಯಾಂಟ್‌ನೆಕ್‌ನು ಕೂಡಲೇ ಗುರುತಿಸಿದನು.



# ೧೮.

‘ ಹಲಮಲೋ, ನೀನೋ ! ’

‘ ಅಹುದು, ಮಹಾರಾಜ. ನೋಡಿರಿ, ನಿಜವಾಗಿಯೇ ಅಲೆದಾಡುವ ಕಲ್ಲೇ ಇಲ್ಲಿದೆ. ಹೊರಗೆ ಬನ್ನಿರಿ. ನಾನು ಹೊತ್ತಿಗೆ ಸರಿಯಾಗಿ ಬಂದೆ. ಬೇಗ ಬೇಗನೆ ಹೊರಬೀಳಿರಿ. ಹತ್ತೇ ನಿಮಿಷಗಳೊಳಗಾಗಿ ನಿಮ್ಮನ್ನು ಘೋರವಾದ ಅರಣ್ಯದಲ್ಲಿ ಒಯ್ದು ಬಿಡುತ್ತೇನೆ. ”

‘ ಈಶ್ವರನ ಶಕ್ತಿಯು ಅಗಮ್ಯವೂ ಅಗಾಧವೂ ಆಗಿದೆ. ’

‘ ಸರದಾರರೇ, ಮೊದಲು ತಮ್ಮ ಪ್ರಾಣವನ್ನು ರಕ್ಷಿಸಿಕೊಳ್ಳಿರಿ ’ ಎಂದು ಎಲ್ಲರೂ ಏಕಕಂಠದಿಂದ ಪ್ರಾರ್ಥಿಸಿಕೊಂಡರು.

‘ ಇಲ್ಲ, ಮೊದಲು ನೀವು; ಆಮೇಲೆ ನಾನು. ’

ಪರಸ್ಪರರಲ್ಲಿಯ ಪ್ರೇಮದ ಆಗ್ರಹವು ಉಭಯತರಿಗೂ ಅನ್ವಯಿಸಿದ್ದರಿಂದ ಎಲ್ಲರೂ ಹೊರಬೀಳುವ ಸಿದ್ಧತೆ ನಡೆಸಿದರು. ಲ್ಯಾಂಟ್‌ನೆಕ್‌ನು ಮಾತ್ರ ಹಿಂದುಳಿಯುವದೆಂದು ಗೊತ್ತು ಮಾಡಿಕೊಂಡಿದ್ದನು.

‘ ಸರದಾರರೇ, ನಾವೆಲ್ಲಿಗೆ ಹೋಗಬೇಕು ? ’

‘ ಆ ಅಡವಿಯಲ್ಲಿರುವ ಆ ಬೈಲು ಜಾಗೆಗೆ. ನಿಮಗೆ ಆ ಸ್ಥಳವು ಗೊತ್ತಿದೆಯಲ್ಲವೆ? ನೀವು ಅಲ್ಲಿಗೆ ಹೋಗಿರಿ. ನಾನು ನಾಳೆ ಮಧ್ಯಾಹ್ನ ಬರುತ್ತೇನೆ ಮತ್ತೆ ನಾವು ಯುದ್ಧವನ್ನು ಆರಂಭಿಸೋಣ. ’

ಹಲಮಲೋ ಆ ಕಲ್ಲನ್ನು ಮೊದಲಿನಂತೆ ಕೂಡ್ರಿಸಲು ಯತ್ನಿಸಿದನು. ಆದರೆ ಅದು ಕೂಡದಾಯಿತು. ಆಗ ಅವನು ಲ್ಯಾಂಟ್‌ನೆಕ್‌ನಿಗೆ ‘ ಸರದಾರರೇ, ಬೇಗ ಮುಗಿಸಿರಿ. ಕಲ್ಲು ಸರಿಯಲೊಲ್ಲದು. ನಾನು ದಾರಿಯನ್ನು ಮಾಡಿದೆ. ಮುಚ್ಚಲು ಬಾರದಾಗಿದೆ. ’ ಎಂದನು. ಎಷ್ಟೋ ದಿನಗಳಿಂದ ಆ ಕಲ್ಲು ಹಾಗೆಯೇ ಬಿದ್ದಿತ್ತಾದ್ದರಿಂದ ಅದು ಅಗಳಾಡದಾಗಿತ್ತು.

‘ ನನಗೆ ಈ ಕಲ್ಲನ್ನು ಕೂಡ್ರಿಸಲು ಬರಬಹುದೆಂದೆನಿಸಿತ್ತು. ಕಲ್ಲು ಮೊದಲಿನಂತೆ ಸರಿಯಾಗಿ ಕೂಳಿತಿದ್ದರೆ ವೈರಿಗಳಿಗೆ ನಮ್ಮ ಸುಳಿವು ಗೊತ್ತಾ

ಗುವ ಸಂಭವವಿದ್ದಿಲ್ಲ. ನಾವು ಬೆಂಕಿಯಲ್ಲಿ ನಾಶವಾಗಿರಬೇಕೆಂದು ಅವರು ಭಾವಿಸಬಹುದಾಗಿತ್ತು. ಆದರೆ ಕಲ್ಲು ಸರಿದಾಡಲೊಲ್ಲದು. ಆದ್ದರಿಂದ ವೈರಿಗಳಿಗೆ ಈ ಮಾರ್ಗವು ಕಣ್ಣಿಗೆ ಬಿದ್ದೇಬೀಳುವದು. ಅವರು ನಮ್ಮ ಬೆನ್ನುಹತ್ತದೆ ಎಂದಿಗೂ ಬಿಡರು. ಆದ ಕಾರಣ ಒಂದು ನಿಮಿಷವನ್ನು ಕೂಡ ಕಳೆಯದೆ ಎಲ್ಲರೂ ಪಾವಟಿಗೆಗಳ ಕಡೆಗೆ ಧಾವಿಸಿರಿ ' ಎಂದು ಹಲಮುಲೋನು ಹೇಳಿಕೊಂಡನು.

ಇಮಾನಸನು ಹಲಮುಲೋನ ಹೆಗಲ ಮೇಲೆ ಕೈಯಿಟ್ಟು ' ಗೆಳೆಯಾ, ಇಲ್ಲಿಂದ ಅರಣ್ಯದೊಳಗೆ ಸುರಕ್ಷಿತವಾಗಿ ಹೋಗಿ ಮುಟ್ಟಲು ಎಷ್ಟು ಹೊತ್ತು ಹಿಡಿಯುವದು ' ಎಂದು ವಿಚಾರಿಸಿದನು.

' ಯಾರಿಗಾದರೂ ಹೆಚ್ಚು ಗಾಯಗಳೇನಾದರೂ ಆಗಿವೆಯೋ? ' ಎಂದು ಹಲಮುಲೋನು ವಿಚಾರಿಸಲಾಗಿ ' ಯಾರಿಗೂ ಏನೂ ವಿಶೇಷ ವಾಗಿಲ್ಲ. '

' ಅಂದಮೇಲೆ ಕಾಲು ತಾಸಾದರೆ ಸಾಕು. '

' ಆದರೆ ಅವರು ಐದಾರು ನಿಮಿಷಗಳಲ್ಲಿ ಮುತ್ತಿ ಬಿಡುವರು. ಈ ಕಪಾಟು ಎಷ್ಟು ಹೊತ್ತು ತಡೆದೀತು! ೧೦-೧೫ ನಿಮಿಷವಾದರೆ ಪರಮಾವಧಿಯಾಯಿತು. ೧೦-೧೫ ನಿಮಿಷ ಅವರನ್ನು ಎದುರಿಸುವ ಸಾಮರ್ಥ್ಯ ಯಾರಲ್ಲಿದೆ? ' ಎಂದು ಸರದಾರನು ವಿಚಾರಿಸಿದನು.

' ನಾನು ನಾನು ' ಎಂದು ಪ್ರತಿಯೊಬ್ಬರೂ ಉತ್ತರವಿತ್ತರು. ಇಮಾನಸನು ತನ್ನ ಜೊತೆಗಾರರ ಕಡೆಗೆ ಹೊರಳಿ ' ಗೆಳೆಯರೇ, ಶತ್ರುಗಳನ್ನು ಇಲ್ಲಿ ಎಷ್ಟು ಹೊತ್ತು ಹೆಚ್ಚಿಗೆ ತಡೆಹಿಡಿಯಲು ಬರುವದೋ ಅಷ್ಟು ಹೊತ್ತು ತಡೆಹಿಡಿಯಬೇಕು. ಅಂದರೆ ಓಡಿಹೋಗುವವರ ಬೆನ್ನುಹತ್ತದಂತೆ ಮಾಡಬೇಕು ಕೇಳಿರಿ! ನನ್ನ ಮೈಯಲ್ಲಿಯ ಒಂದೂ ನೆತ್ತರದ ಹನಿ ಬಿದ್ದಿರುವದಿಲ್ಲ. ಆದ್ದರಿಂದ ನಿಮ್ಮೆಲ್ಲರಿಗಿಂತ ಹೆಚ್ಚು ಹೊತ್ತು ನಾನು ಶತ್ರುಗಳನ್ನು ಎದುರಿಸಬಲ್ಲೆನು. ಅರ್ಧ ತಾಸಾದರೂ ಅವರೊಡನೆ ನಿಕರದಿಂದ ಹೋರಾಡದೆ ಬಿಡೆನು. ನಮ್ಮೆಲ್ಲರ ಹತ್ತಿರ ತುಂಬಿದ ಪಿಸ್ತೂಲುಗಳಿಷ್ಟಿವೆ?'

'ನಾಲ್ಕು' ಎಂಬ ಉತ್ತರ ಬಂದಿತು. ಇಮಾನಸನು 'ಅವೆಲ್ಲವು ಗಳನ್ನು ಇಲ್ಲಿಡಿರಿ' ಎಂದು ಹೇಳಿದೊಡನೆ ಅವರು ಹಾಗೆ ಮಾಡಿದರು. ನಂತರ 'ಹೂಂ, ಇನ್ನು ಹೊರಡಿರಿ. ಹೊತ್ತುಗಳೆಯ ಬೇಡಿರಿ' ಎಂದು ಆಜ್ಞೆಮಾಡುವವರಂತೆ ಹೇಳಿದನು. ಬದುಕುವದು ಇಲ್ಲವೆ ಸಾಯುವದು ತಕ್ಕಡಿಯಲ್ಲಿ ಹಾಕಿ ತೂಗಿದಂತಿದೆ. ಆದ್ದರಿಂದ ಏನೂ ವೇಳೆ ಕಳೆಯದೆ ಎಲ್ಲರೂ ಹೊರಬಿದ್ದರು.

'ನಾವೆಲ್ಲರೂ ಬೇಗನೆ ಬೆಟ್ಟೆಯಾಗೋಣ' ಎಂದು ಲ್ಯಾಂಟ್‌ನೆಕ ನೆಂದನು.

'ಇಲ್ಲ, ಸರದಾರರೇ, ನಾನು ಬೆಟ್ಟೆಯಾಗಲಾರೆ. ನಾನು ಸಾಯು ವವನೇ' ಎಂದು ಇಮಾನಸನೆಂದನು. ಆ ಮೇಲೆ ಅವರು ಪಾವಟಿಗೆ ಇಳಿಯ ತೊಡಗಿದರು. ಅವರು ಪಾವಟಿಗೆ ಇಳಿಯುತ್ತಿರುವಾಗ ಲ್ಯಾಂಟ್‌ ನೆಕ್‌ನು ಸೀಸ ಕಡ್ಡಿಯನ್ನು ತೆಗೆದುಕೊಂಡು ಒಂದು ಕಲ್ಲಿನಮೇಲೆ ಏನೋ ಬರೆದು, ಸಾವಕಾಶವಾಗಿ ಕೆಳಗಿಳಿಯ ತೊಡಗಿದನು. 'ಮಹಾ ರಾಜ, ಅವರೆಲ್ಲರೂ ಹೋದರು. ನಡೆಯಿರಿ, ನಾವೂ ಹೋಗೋಣ' ಹಲಮಲೋನು ಬಿನ್ನವಿಸಿಕೊಂಡನು. ಇಬ್ಬರೂ ಹೊರಟರು. ಇತ್ತ ಇಮಾನಸನೊಬ್ಬನೇ ಅಲ್ಲುಳಿದನು.

* * * * * *

ಅಲ್ಲಿಯ ಸ್ಥಳವೂ ಸಂಕುಚಿತವಿತ್ತು. ಇಮಾನಸನು ಎರಡೂ ಕೈಯಲ್ಲಿ ಒಂದೊಂದು ಪಿಸ್ತೂಲನ್ನು ಕುದುರಿ ಏರಿಸಿಯೇ ಹಿಡಿದು ಕೊಂಡನು. ಪಾವಟಿಗೆಗಳ ಕಡೆಗೆ ಹೊರ್ತಹೊರಳಿ ನೋಡಿದನು. ಅವರು ಪಾರಾಗಿ ಹೋದರೆಂದು ತಿಳಿದು ಸಮಾಧಾನ ಹೊಂದಿದನು.

ಹಳ್ಳಿಗಾರರು ಅನಪೇಕ್ಷಿತವಾಗಿ ಏನಾದರೂ ಸಂಭವಿಸಬಹು ದೆಂದು ಭೀತರಾಗಿದ್ದರು. ಇದೇ ಕೊನೆಯ ಪ್ರಸಂಗವಾಗಬಹುದಾದ್ದರಿಂದ ಮೊದಲಿನಷ್ಟು ಮನುಷ್ಯ ಹಾನಿಯಾಗಬಾರದೆಂದು ಬಹಳ ಸಾವಧರಾಗಿ ದ್ದರು. ಅವರಿಗೆ ಆ ಕಪಾಟು ಸರಿಸಲಾಗಲಿಲ್ಲ. ಅಥವಾ ಅದನ್ನು

ದೂಡುವ ಇಚ್ಛೆಯೋ ಅವರಿಗೆ ಇರಲಿಲ್ಲವೇನೋ.- ಅವರು ಬಂದೂಕಿನಿಂದ ಕಪಾಟಿನ ಬುಡವನ್ನು ಒಡೆದು ಹಾಕಿದರು. ಮೇಲ್ಪದಿಯನ್ನು ಬಂದೂಕಿನ ಸಂಗಿನಿಯಿಂದ ಚುಚ್ಚಿ ಮುರಿದುಹಾಕಿದರು. ಅದರಿಂದ-ಂಟಾದ ಬಿರುಕಿ ನೊಳಗಿಂದ ದಿವಾಣಖಾನೆಯೊಳಗೆ ನೋಡಲು ಅವರಿಗೆ ಆಸ್ಪದವಾಯಿತು. ಅಲ್ಲಿ ಉರಿಯುತ್ತಿದ್ದ ಪಂಜಿನ ಬೆಳಕು ಅವರಿಗೆ ಕಂಡಿತು. ಈ ಬಿರುಕಿನೊ ಳಗೆ ಯಾರೋ ನೋಡುತ್ತಿರುವರೆಂಬದನ್ನು ಕಂಡು ಇಮಾನಸನು ಪಿಸ್ತೂಲಿನ ಕುದುರೆಯನ್ನು ಒತ್ತಿದನು. 'ಅಯ್ಯೋ ಸತ್ತೆ' ಎಂಬ ಚಿತ್ಕಾ ರವೂ ಅವನಿಗೆ ಸ್ಪಷ್ಟವಾಗಿ ಕೇಳಿಸಿತು. ಆ ಪಿಸ್ತೂಲಿನ ಗುಂಡು ಆ ನೋಡು ತ್ತಿರುವ ಸೈನಿಕನ ಕಣ್ಣೊಳಗೆ ನಟ್ಟು, ಮೆಂದುವಿನೊಳಗಿಂದ ಪಾರಾಗಿ ಸತ್ತುಬಿದ್ದಿರಬೇಕೆಂದು ಭಾವಿಸಿ ಇಮಾನಸನು ಆನಂದತುಂದಿಲನಾದನು.

ಶತ್ರುಗಳು ಕಪಾಟಿನಲ್ಲಿ ಎರಡು ದೊಡ್ಡ ತುತೂಗಳನ್ನು ಕೆಡವಿ ದ್ದರು. ಇಮಾನಸನು ಅವುಗಳೊಳಗೆ ಎರಡು ಪಿಸ್ತೂಲು ಹಾರಿಸಿದನು. ಈ ಹೊಡೆತದಿಂದ ಅಲ್ಲಿ ಗೊಂದಲವೆದ್ದಿತು. ಮೂರು ನಾಲ್ಕು ಜನರಿಗೆ ಗಾಯಗಳಾದವೋ ಅಥವಾ ಮರಣಪಟ್ಟರೋ ಏನೋ. ಇಮಾನಸನು ಬರಿದಾದ ಪಿಸ್ತೂಲುಗಳನ್ನು ಬಿಸಾಡಿಬಿಟ್ಟನು. ಮತ್ತೆರಡು ಪಿಸ್ತೂಲುಗ ಳನ್ನು ತೆಗೆದುಕೊಂಡು ಆ ತೂತುಗಳೊಳಗೆ ನೋಡತೊಡಗಿದನು: ಆ ಪಿಸ್ತೂಲುಗಳ ಪ್ರಭಾವವನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ಯಾಕೆಂದರೆ ವೈರಿಗಳು ಮೇಲೇರಿಬರುವದನ್ನು ಬಿಟ್ಟು ಹಿಂದಿರುಗಹತ್ತಿ ದರು. ಆ ಪಾವಟಿಗೆಗಳು ಸರ್ಪಾಕೃತಿಯುವಿದ್ದುದರಿಂದ ೩-೪ ಪಾವಟಿಗೆ ಗಳಿಗಿಂತ ಹೆಚ್ಚಿಗೇನೂ ಅವನಿಗೆ ಕಾಣಬರಲಿಲ್ಲ. ತನ್ನ ಹೊಡೆತಕ್ಕೆ ಹರಣ ಹಾರಿಬಿದ್ದ ಸೈನಿಕರನ್ನು ಕಂಡು 'ಎಷ್ಟೋ ಹೊತ್ತನ್ನು ತಡೆದೆ' ನೆಂದು ಕೊಂಡನು.

ಆ ಮೇಲೆ ಒಬ್ಬ ಮನುಷ್ಯನು ಹೊಟ್ಟೆಹೊಸೆಯುತ್ತ ಬರುವದೂ, ಮತ್ತೊಬ್ಬ ಮನುಷ್ಯನ ತಲೆಯೂ ಇಮಾನಸನಿಗೆ ಕಂಡವು. ಕೂಡಲೇ ಅವನು ಆ ತಲೆಗೆ ಗುರಿಯಿಟ್ಟು ಹೊಡೆದನು. ಆ ಹೊಡೆತಕ್ಕೆ ಆ ಮನು

ಷ್ಯನು ಸತ್ತುಬಿದ್ದನು. ಇಮಾನಸನು ಇನ್ನುಳಿದ ಒಂದೇ ಒಂದು ಪಿಸ್ತೂಲನ್ನು ಕೈಯಲ್ಲಿ ತೆಗೆದುಕೊಂಡನು. ಪಿಸ್ತೂಲು ಹಿಡಿಯುವಷ್ಟರಲ್ಲಿ ಅವನಿಗೆ ಬಯಂಕರ ವೇದನೆಯುಂಟಾದ್ದರಿಂದ ಗಟ್ಟಿಯಾಗಿ ಚೀರಿದನು. ಅವನ ಮೈಯಲ್ಲಿ ಕತ್ತಿಯು ನೆಟ್ಟು ಹೊಟ್ಟೆಹರಿದು ಪಾರುಗಂಡಿತ್ತು. ಹೊಟ್ಟೆ ಹೊಸೆದು ಬರುತ್ತಿರುವ ಮನುಷ್ಯನು ಸಾವಕಾಶ ಪಾರಾಗಿ ಬಂದು ಇಮಾನಸನನ್ನು ಭಯಂಕರವಾಗಿ ಗಾಯಗೊಳಿಸಿದ್ದನು. ಇಮಾನಸನು ಕೆಳಗೆ ಕಡಕೊಂಡು ಬೀಳದೆ ಬಹು ಕಷ್ಟದಿಂದ 'ಒಳ್ಳೇದು' ಎಂದು ಉದ್ಗಾರ ತೆಗೆದನು. ನಂತರ ಅವನು ಬಹು ಪ್ರಯಾಸಪಡುತ್ತ ಕಬ್ಬಿಣದ ಬಾಗಿಲವರೆಗೆ ಹೇಗೋ ಬಂದನು. ಅಲ್ಲಿ ಪಂಜು ಉರಿಯುತ್ತಿತ್ತು. ಎಡಗೈಯಿಂದ ಹರಿದ ಹೊಟ್ಟೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ಬಲಗೈಯಿಂದ ಪಂಜು ಹಿಡಿದುಕೊಂಡು ಬಂದು ಗಂಧಕದ ಬತ್ತಿಗೆ ಬೆಂಕೀ ಕೊಟ್ಟು ಬಿಟ್ಟನು. ಒಮ್ಮೆಲೆ ಬೆಂಕಿಯು ಹೊತ್ತಿಬಿಟ್ಟಿತು. ಪಂಜನ್ನು ಬೀಸಾಡಿದನು. ಕೈಲಿ ಪಿಸ್ತೂಲು ತೆಗೆದುಕೊಂಡು, ಆ ಗಂಧಕದ ಬತ್ತಿಗೆ ಗಾಳಿಹಾಕಿದ್ದರಿಂದ ಅದು ಬೇಗನೆ ಉರಿಯಹತ್ತಿತು. ಆ ಬತ್ತಿಯು ಆ ಕಬ್ಬಿಣದ ಬಾಗಿಲಿನ ಬುಡದಿಂದ ಪೂಲಿನ ಕಡೆಗೆ ಹೋಗಿತ್ತು. ಬೆಂಕಿಯು ಆ ಮಾರ್ಗದಿಂದ ಉರಿಯುತ್ತ ಸಾಗಿತು.

ತಾನು ತೋರಿಸಿದ ಶೌರ್ಯಕ್ಕಿಂತಲೂ ಈ ದುಷ್ಟ ಕೃತ್ಯವು ಹೆಚ್ಚು ಒಳ್ಳೇಯದಾಯಿತೆಂದು ಚಪ್ಪಾಳೆಯಿಕ್ಕಿ ನಗತೊಡಗಿದನು. 'ಅವರಿಗೆ ನನ್ನ ಹೆಸರು ಎಂದಿಗೂ ನೆನಪಿನಲ್ಲುಳಿಯುವದು. 'ನಮ್ಮ ರಾಜನನ್ನು ಬಂಧಿಸಿದ ಸೇಡು ತೀರಿಸುವದಕ್ಕಾಗಿ ಈ ಮಗುಗಳನ್ನು ಬಲಿತೆಗೆದುಕೊಂಡೆನು' ಎಂದು ಅವನು ಉದ್ಗಾರ ತೆಗೆದನು. ಅಷ್ಟರಲ್ಲಿ ಮತ್ತೆ ಸಪ್ಪಳವು ಕೇಳಿಸಿತು. ಆ ಕಪಾಟು ಒಬ್ಬ ಮನುಷ್ಯನು ಪಾರಾಗಿ ಬರುವಷ್ಟು ಸರಿಸಲ್ಪಟ್ಟಿತು. ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡವನೊಬ್ಬನು ಬಂದು 'ನೋಡು ನಾನು ರೇಡೋ. ನೀನು ನನಗೇನು ಮಾಡಬಲ್ಲೆ? ನನಗೆ ಇನ್ನು ಸಹಿಸುವದು ಸಾಧ್ಯವಿಲ್ಲ. ಈಗಂತೂ ಒಬ್ಬನ ಚರ್ಮವನ್ನು ಸುಲಿದಿದ್ದೇನೆ. ಇನ್ನು ನಿಮ್ಮೆಲ್ಲರ ಪಾರುಪತ್ಯಮಾಡುತ್ತೇನೆ. ನಮ್ಮ ಜನರು

ನನ್ನ ನೆರವಿಗೆ ಬರಲಿ. ಅಥವಾ ಬಿಡಲಿ. ನಾನಂತೂ ಇಲ್ಲಿ ಧುತ್ತೆಂದು ನಿಂತಿದ್ದೇನೆ. ನೀವೆಷ್ಟು ಜನರಿದ್ದೀರಿ ' ಎಂದು ಚೀರಾಡಿದನು.

ಇಮಾನಸನು ತೋರಿಸಿದ ಪರಾಕ್ರಮವನ್ನು ಕಂಡು ಗಾವೆನ್‌ನಿಗೆ ಪಾವಟಿಗೆಗಳ ಹತ್ತಿರ ಸುರಂಗ-ಗಿರಂಗವಿರಬೇಕೆಂದೆನಿಸಿ, ಸಿವೋರೆಡಿನ್‌ನೊಡನೆ ವಿಚಾರವಿನಿಮಯಮಾಡಲು ಹೋದನು. ತಮ್ಮ ಜನರಿಗೆ ಮುಂದೆ ಹೋಗಬಾರದೆಂದು ಹೇಳಿದನು. ರೇಡೋನ ಕೈಯಲ್ಲಿ ಕತ್ತಿಯು ಝಳಪಿಸುತ್ತಿತ್ತು. ರೇಡೋನ ಪಶ್ನೆಗೆ ಉತ್ತರ ಬರಲೇ ಇಲ್ಲ. ರೇಡೋನು ಕನ್ನಡಿಯಲ್ಲಿ ಮುಖವನ್ನು ನೋಡಿಕೊಂಡನು. ಅವನ ಮೈ ಕೈ ಎಲ್ಲ ರಕ್ತಮಯವಾಗಿತ್ತು. ಕಿವಿಯು ಹರಿದಿತ್ತು. ' ಆದದ್ದು ಇಷ್ಟೇನೆ ' ಅಂದಂದುಕೊಂಡು ಹೊರಳಿದನು. ಆ ದಿವಾಣಖಾನೆಯಲ್ಲಿ ಯಾರೂ ಇಲ್ಲದ್ದನ್ನು ಕಂಡು ಅವನಿಗೆ ಆಶ್ಚರ್ಯವೆನಿಸಿತು. ' ಯಾರೂ ಇಲ್ಲವೇ? ' ಎನ್ನುತ್ತ ಅತ್ತಿತ್ತ ನೋಡಿದನು. ತಿರುಗಿದ ಕಲ್ಲು ಮತ್ತು ಪಾವಟಿಗೆಗಳು ಕಂಡವು. ' ಅಯ್ಯೋ, ಈಗ ತಿಳಿಯಿತು. ಎಲ್ಲರೂ ಮೇಲೆ ಬನ್ನಿರಿ. ' ಎಂದು ಕೂಗಿದನು.

" ಸಿಪಾಯಿಗಳೇ, ಅವರೆಲ್ಲರೂ ಓಡಿಹೋಗಿದ್ದಾರೆ. ಬುರುಜಿನಲ್ಲಿರುವ ಬಿರುಕಿನೊಳಗಿಂದ ಪಾರಾಗಿರಬೇಕು. ಇಲ್ಲಿ ಯಾರೂ ಉಳಿದಿಲ್ಲ. " ಅಷ್ಟರಲ್ಲಿ ಪಿಸ್ತೂಲು ಹಾರಿದ್ದು ಸದ್ದಾಯಿತು. ಅದು ರೇಡೋನಿಗೆ ಬಡಿಯದೆ ಗೋಡೆಗೆ ಅಪ್ಪಳಿಸಿತು.

' ಯಾರೋ ಇರುವರು. ಯಾರು ನನಗೆ ದಯೆ ತೋರಿಸಿದವರು? ' ಎಂದು ರೇಡೋನು ವಿಚಾರಿಸಲಾಗಿ ' ನಾನು ' ಎಂಬ ಶಬ್ದವು ಕೇಳಬಂದಿತು. ರೇಡೋನ ದೃಷ್ಟಿಗೆ ಇಮಾನಸನು ಬಿದ್ದನು. ' ಕೊನೆಗೆ ನೀನಂತೂ ನನ್ನ ಕೈಯಲ್ಲಿ ಸಿಕ್ಕಿಯಲ್ಲ! ಉಳಿದವರು ಓಡಿಹೋದಂತೆ ನೀನು ಮಾತ್ರ ಹೋಗಲಾರಿ ಎಂದು ನಾನು ನಂಬಿದ್ದೇನೆ ' ಎಂದಂದು ಮುಂದೆಹೋಗಿ ನಿಂತನು.

' ನೆಲದ ಮೇಲೆ ಬಿದ್ದು ಹೊರಳಾಡುವವನು ಯಾರು ನೀನು ? '

' ನಾನು ನಿನ್ನನ್ನು ನೋಡಿ ನಗುವ ಒಂದು ಪ್ರಾಣಿ. '

' ನಿನ್ನ ಬಲಗೈಯಲ್ಲಿ ಏನಿದೆ ? '

'ಪಿಸ್ತೂಲ್.'

'ನೀನು ನನ್ನ ಸೆರೆಯಾಳಾಗಿರುವಿ.'

'ಹೋಗಲಿ ಹೋಗು, ಮಳ್ಳ!' ಎಂದಂದು ಇಮಾನಸನು ಗಂಧಕದ ಬತ್ತಿಯು ಹೊತ್ತಲೆಂದು ಊದಿದನು. ಅದೇ ಉಸಿರು ಕೊನೆಯದೆನುವಂತೆ ಪ್ರಾಣವನ್ನು ನೀಗಿದನು.

ಸ್ವಲ್ಪ ಹೊತ್ತಿನಲ್ಲಿ—ಸಿಮೋರೆಡಿನ್, ಗಾವೆನ್ ಮತ್ತು ಸೈನಿಕರು ಅಲ್ಲಿ ಬಂದು ಆ ಸ್ಥಳವನ್ನು ನಿರೀಕ್ಷಿಸಿದರು. ಕೋಣೆಯ ತುಂಬೆಲ್ಲ ಹುಡುಕಿದರು. ಪಾವಟಿಗೆಗಳನ್ನು ನೋಡಿದರು. ಪಾವಟಿಗೆಗಳು ಹೊರಗೆ ಹೋಗಲು ದಾರಿಯಾಗಿದ್ದವು. ಆ ಜನರೆಲ್ಲರೂ ಈ ಮಾರ್ಗದಿಂದ ಪಾರಾಗಿ ಅರಣ್ಯದೊಳಗೆ ಹೋಗಿದ್ದರು. ಅವರು ಇಮಾನಸನನ್ನು ಎತ್ತಿದರು. ಅವನು ಸತ್ತಿದ್ದನು. ಗಾವೆನ್‌ನ ಕಣ್ಣಿಗೆ ಆ ತಿರುಗಿದ ಕಲ್ಲು ಬಿದ್ದಿತು. ಅವನು ಈ ತಿರುಗುವ ಕಲ್ಲಿನ ಬಗ್ಗೆ ಕೇಳಿದ್ದನೇ ಹೊರತು ಪ್ರತ್ಯಕ್ಷ ನೋಡಿರಲಿಲ್ಲ. ನೋಡ ನೋಡುತ್ತಿರುವಾಗ ಅವನಿಗೆ ಅಕ್ಷರಗಳು ಕಾಣಿಸಿದವು. ಗಾವೆನ್‌ನು ಅದರ ಹತ್ತಿರ ಹೋಗಿ ಓದತೊಡಗಿದನು. 'ನಮಸ್ಕಾರ! ಈ ಹೊತ್ತಿಗಂತೂ ಪಾರಾಗಿದ್ದೇನೆ. ಮತ್ತೆ ಬೆಟ್ಟಿಯಾಗೋಣ-ಲ್ಯಾಂಟ್‌ನೆಕ್' ಎಂದು ಬರೆಯಲಾಗಿತ್ತು.

'ಆ ನಿಚ್ಚಣಿಕೆಯದೇನಾಯ್ತು?'

'ಸರದಾರರೇ, ಇನ್ನೂ ಬರಲಿಲ್ಲ.'

'ಮತ್ತೆ ಆ ಗಾಡಿ ಕಾಣಿಸುತ್ತಿತ್ತಲ್ಲ! ಅದರದೇನಾಯಿತು?'

'ಅದು ನಿಚ್ಚಣಿಕೆಯನ್ನು ತರಲಿಲ್ಲ.'

'ಹಾಗಾದರೆ ತಂದದ್ದಾದರೂ ಏನು?'

'ಕುತ್ತಿಗೆಯನ್ನು ಕತ್ತರಿಸುವ ಯಂತ್ರ!' ಎಂದು ಸಿಮೋರೆಡಿನ್‌ನು ಹೇಳಿದನು.

'ಲ್ಯಾಂಟ್‌ನೆಕ್‌ನು ಬಹಳ ದೂರ ಹೋಗಿರಲಾರ. ಅವನು ಭದ್ರವಾದ ಸ್ಥಳಕ್ಕೆ ಹೋಗಿದ್ದಾನೆ. ಅದು ಅಳತೆಯೊಳಗಿಲ್ಲ' ಎಂದು ಅವರಿಗೆನಿಸದೆ ಇರಲಿಲ್ಲ. ಹಲಮುಲೋನ ಬೆನ್ನುಹತ್ತಿ ಲ್ಯಾಂಟ್‌ನೆಕ್‌ನು ಸಾಗಿ

ದ್ದನು. ಆ ಪಾವಟಗೆಗಳಲ್ಲಿ ಎರಡು ದಾರಿಗಳಿದ್ದವು. ಒಂದು ಅರಣ್ಯದೊಳಗೆ, ಇನ್ನೊಂದು ಕಮಾನಿನ ಪೂಲಿನ ಕಡೆಗೆ ಮುಟ್ಟುತ್ತಿದ್ದವು. ಅರಣ್ಯದ ಕಡೆಗೆ ಹೋಗಿರುವ ದಾರಿಯು ಮುಳ್ಳುಕಂಟಿಗಳಿಂದ ಮುಚ್ಚಿ ಹೋಗಿತ್ತು.

ಲ್ಯಾಂಟ್‌ನೆಕ್‌ನಿಗೆ ಮುಂದೆ ಹೋಗುವದೇ ಬೇಕಾಗಿತ್ತು. ಅವನ ಮೈಯಲ್ಲಿ ಒಕ್ಕಲಿಗರಂಥ ಬಟ್ಟೆಗಳಿದ್ದವು. ಆದರಿಂದ ಅವನಿಗೆ ತೊಂದರೆಯೆನಿಸುವಂತಿರಲಿಲ್ಲ. ಉಳಿದವರೆಲ್ಲರೂ ಅಷ್ಟರಲ್ಲಿ ಪಾರಾಗಿ ಹೋಗಿದ್ದರು. 'ಅವರು ಹೋಗಿ ಬಹಳ ಹೊತ್ತಾಗಿದ್ದಿಲ್ಲ ದೂರ ಹೋಗಿರಲಾರರು' ಎಂದು ಹಲಮಲೋನು ಅನ್ನಲಾಗಿ ಲ್ಯಾಂಟ್‌ನೆಕ್‌ನು 'ಹಾಗಾದರೆ ನಡೆ. ನಾವೂ ಅವರ ಹಿಂದಿಂದೆ ಹೋಗೋಣ' ವೆಂದನು.

'ನಾನು ನಿಮ್ಮನ್ನು ಬಿಟ್ಟು ಹೋಗಲೇಬೇಕೇನು ?'

'ಅಹುದು. ನಾನು ನಿನಗೆ ಮೊದಲೇ ಹೇಳಿದ್ದೇನೆ. ತಮ್ಮ ತಮ್ಮ ಜೀವವನ್ನು ಕಾಯ್ದುಕೊಳ್ಳುವದಕ್ಕಾಗಿ ಪ್ರತಿಯೊಬ್ಬರೂ ಬೇರೆ ಬೇರೆಯಾಗಿಯೇ ಹೋಗಬೇಕು. ಇಬ್ಬರೂ ಒತ್ತಟ್ಟಿಗೆ ಇರುವದೆಂದರೆ ಸಂಕಟಕ್ಕೀಡಾದಂತಿದೆ ನೀನು ನನ್ನ ಜೊತೆಗಿದ್ದರೆ ನನ್ನ ಪ್ರಾಣವೂ, ನಿನ್ನ ಪ್ರಾಣವೂ ಆಪತ್ತಿಗೀಡಾಗುವದು'

'ಮಹಾರಾಜರೇ—ಈ ಭಾಗದ ಸಂಗತಿಗಳೆಲ್ಲವೂ ನಿಮಗೆ ಗೊತ್ತಿವೆಯೇ ?'

'ಎಲ್ಲವೂ ಗೊತ್ತಿದೆ.'

'ನಾಳೆ ಮಧ್ಯಾಹ್ನ ಈ ಮೊದಲು ತಿಳಿಸಿದ ಸ್ಥಳಕ್ಕೆ ಬರಬೇಕಲ್ಲವೇ?'

'ಅಹುದು. ಅದೇ ಸ್ಥಳಕ್ಕೆ.'

'ನಿಮ್ಮ ಬೆಟ್ಟಿ ಅಲ್ಲಿ ಆಗುವದು ಖಂಡಿತವಲ್ಲವೇ ?'

'ಅದರಲ್ಲೇನು ಸಂಶಯ !'

ಆ ನಂತರ ಹಲಮಲೋನು 'ಮಹಾರಾಜರೇ, ನನಗೆ ಸಮುದ್ರದಲ್ಲಿ ನನ್ನ ಮತ್ತು ನಿಮ್ಮ ನಡುವೆ ಸಂಭವಿಸಿದ ಸಂಗತಿಗಳು ನೆನಪಾಗಿ ಒಮ್ಮೊಮ್ಮೆ ಬಹಳ ಆಶ್ಚರ್ಯವಾಗುತ್ತದೆ.'

'ಇಂಗ್ಲಂಡದ ನೆರವು ಇಲ್ಲದೆ ಎರಡನೇ ಆಧಾರವೇ ಇಲ್ಲ. ೧೫ ದಿನ ಗಳೊಳಗಾಗಿ ಇಂಗ್ಲಿಷ ಜನರು ಫ್ರಾನ್ಸದೊಳಗೆ ಬಂದೇ ತೀರಬೇಕು.'

'ನನಗೆ ನಿಮ್ಮೊಡನೆ ಬಹಳ ಮಾತಾಡುವದಿದೆ. ಆದರೇನು ಮಾಡಲಿ? ನಿಮ್ಮ ಆಜ್ಞೆಯನ್ನು ಪಾಲಿಸಬೇಕಾಗಿದೆ.'

'ನಾಳೆ ಮಾತನಾಡೋಣ.'

'ಹೋಗುತ್ತೇನೆ ನಮಸ್ಕಾರ.'

'ನಿನಗೆ ಹೊಟ್ಟೆ ಹಸಿವೆಯಾಗಿರಬಹುದು.'

'ಆದರೂ ಆಗಿದ್ದೀತು. ನಾನಿತ್ತ ಬರುವ ಗಡಿಬಿಡಿಯಲ್ಲಿ ಏನೂ ತಿಂದು ಬಂದಂತೆನಿಸುವದಿಲ್ಲ.'

'ಮಹಾರಾಜರೇ, ಬಲಗಡೆಗೆ ದರಿಯ ದಾರಿಯಿದೆ. ಎಡಗಡೆಗೆ ಅರಣ್ಯದ ದಾರಿಯಿದೆ.'

'ಸರಿ! ನೀನು ನಿನ್ನ ದಾರಿಯನ್ನು ಹಿಡಿ.'

ಹಲಮಲೋನು ಹೊರಟು ಕತ್ತಲೆಯಿದ್ದರೂ ಭರಭರನೆ ಕಾಲು ಹಾಕತೊಡಗಿದನು. ಆ ದಟ್ಟ ಅರಣ್ಯದಲ್ಲಿ ಪಾರಾಗುವದು ಅಸಾಧ್ಯವಾ ಗಿತ್ತು. ಲ್ಯಾಂಟ್‌ನೆಕ್‌ನು ಸ್ವಲ್ಪ ಹೊತ್ತು ಸ್ಥಿರವಾಗಿ ನಿಂತನು. ಅವನ ಮನಸ್ಸು ಅವನ ಆಧೀನದಲ್ಲಿತ್ತು. ಯಾವುದೂ ಮಾತನ್ನು ಮನಸಿಗೆ ಹಚ್ಚಿ ಕೊಳ್ಳದ ಸ್ವಭಾವದವನಾಗಿದ್ದನು. ಆದರೂ ರಕ್ತಪಾತದ ವಾತಾವರಣ ದಿಂದ ಬಿಡುಗಡೆಯಾಗಿ ಬಯಲ ಪ್ರದೇಶದ ಹವೆಯನ್ನು ಉಸುರಾಡಿಸಿದ ಮೇಲೆ ಅವನಿಗೆ ತನ್ನ ಭಾವನೆಗಳನ್ನು ಹತ್ತಿಕ್ಕಿಡಲಾಗಲಿಲ್ಲ. ಮೃತ್ಯುವಿನ ದವಡೆಯೊಳಗಿಂದ ಅಕಸ್ಮಾತ್ತಾಗಿ ಪಾರಾಗಿದ್ದರಿಂದ ಮನಸಿನ ಮೇಲೆ ಆಘಾತವಾದಂತಾಗಿತ್ತು. ಅದಿನ್ನೂ ಹೋಗಿರಲಿಲ್ಲ. ಸಂಕಟಗಳೊಡನೆ ಹೋರಾಡುತ್ತಿದ್ದಾಗ ಅದರ ಮಹತ್ವವು ಅವನಿಗೆ ಅಷ್ಟೊಂದೆನಿಸಿರಲಿಲ್ಲ. ಆದರೂ ಅಲ್ಲಿ ಸಂಭವಿಸಿದ ಪ್ರಕಾರದಿಂದ ಅವನ ಮನಸು ಇನ್ನೂ ಸ್ಥಿರವಾ ಗಿರಲಿಲ್ಲ. ತಾನು ಸಂತುಷ್ಟಿಯಾಗಿದ್ದೇನೆಂಬ ಮಾತು ಅವನಿಗೆ ಹೊಳೆದಿತ್ತು. ಆದರೆ ಅವನು ಆ ವಿಚಾರಧಾರೆಗೆ ಬಹಳ ಮಹತ್ವ ಕೊಟ್ಟಿರಲಿಲ್ಲ. ಯಾಕೆಂದರೆ ಸಂತೋಷವು ಆನಂದಸ್ವರೂಪದ್ದಿರುತ್ತದೆ. ಈ ಆನಂದ ಮತ್ತು

ಅವನ ನಡುವೆ ಸೋಡಚೀಟಿಯೇ ಆಗಿತ್ತು. ಅವನು ಗಡಿಯಾಳ ತೆಗೆದು ನೋಡಿದನು. ೧೦ ಗಂಟೆಯಾಗಿತ್ತು. ಆಪತ್ತಿನೊಳಗಿಂದ ಪಾರಾದ ಮೇಲೆ ಮನುಷ್ಯನು ಹಿಂದೆ ಜರುಗಿದ ಸಂಗತಿಗಳ ಬಗ್ಗೆ ವಿಚಾರಮಾಡ ಹತ್ತಿದನೆಂದರೆ—ಗತಿಸಿದ ಕಾಲವು ನಿತ್ಯದ ಕಾಲಕ್ಕಿಂತ ಯಾವುದೋ ರೀತಿ ಯಿಂದ ವಿಶಿಷ್ಟ ಪ್ರಕಾರದ್ದಿತ್ತು—ಎಂದು ಅವನಿಗೆ ಎನಿಸುವದೇ ಇಲ್ಲ. ಸೂರ್ಯಾಸ್ತದ ಮೊದಲು ಹಲ್ಲೆ ಆರಂಭವಾಗುವ ಎಚ್ಚರಿಕೆಯ ತೋಫು ಹಾರಿತು. ಮುಂದೆ ಅರ್ಧ ತಾಸಿನಲ್ಲಿಯೇ ಲಾಟೋರು ಮುತ್ತಲ್ಪಟ್ಟಿತು. ಆಗ ಏಳು ಗಂಟೆಯಾಗಿರಬಹುದು. ಆ ಭಯಂಕರವಾದ ರಣಕಂದನವು ನಡೆದು ೧೦ಗಂಟೆಗೆ ನಿಂತಿತು. ಒಮ್ಮೊಮ್ಮೆ ಸಂಕಟಗಳು ಬಹು ಬೇಗ ಇಲ್ಲದಂತಾಗುವವು. ಅವುಗಳ ಗತಿ ಮಿಚಿನಂತಿರುತ್ತದೆ.

ಇಂಥ ಸಾಮಾನ್ಯ ಸಂಗತಿಗೆ ಇಷ್ಟೊಂದು ವೇಳೆ ಯಾಕೆ ಹಿಡಿಯಿತೋ ಎಂಬ ಬಗ್ಗೆ ಅವನಿಗೆ ಸಮಾಧಾನವೆನಿಸಲಿಲ್ಲ. ಹತ್ತೊಂಬತ್ತೇ ಜನರು ನಾಲ್ಕೂವರಿ ಸಾವಿರ ಸೈನ್ಯದೊಡನೆ ಎರಡು ತಾಸು ಹೋರಾಡಿದುದು ಅವನಿಗೆ ಅಸಾಮಾನ್ಯವಾಗಿ ತೋರಿತು.

ಇನ್ನು ಹೆಚ್ಚು ಹೊತ್ತು ನಿಂತು ಉಪಯೋಗವಿಲ್ಲೆಂದು ಲ್ಯಾಂಟ್ ನೆಕ್‌ನು 'ಹಲಮಲೋನೂ ದೂರ ಹೋಗಿರಲು ಸಾಕು' ಎಂದು ಅವನು ಭಾವಿಸಿಕೊಂಡು ಮುಂದೆ ಸಾಗಿದನು. ಅವನು ಗಡಿಯಾಳವನ್ನು ಕಿಸೆಯಲ್ಲಿ ಹಾಕಿಕೊಂಡನು. ಆದರೆ ಆ ಕಿಸೆಯಲ್ಲಿಯೇ ಇಮಾನಸನು ಕೊಟ್ಟ ಕೀಲೀ ಕೈಗಳಿದ್ದವು. ಅದು ಲಕ್ಷ್ಯಕ್ಕೆ ಬಂದೊಡನೆ ಕೀಲೀಕೈಗಳಿಗೆ ತಾಕಿ ಗಡಿಯಾ ಳವು ಒಡೆದುಗಿಡಿದೀತೆಂದು ಅದನ್ನು ಮತ್ತೊಂದು ಕಿಸೆಯಲ್ಲಿ ಹಾಕಿ ಕೊಂಡನು. ಆಮೇಲೆ ಆ ಅರಣ್ಯದಲ್ಲಿ ಅತ್ತಿತ್ತ ಹುಳುಹುಳನೆ ನೋಡುತ್ತ ಸುತ್ತಾಡಿದನು. ಸುತ್ತಾಡುತ್ತಿರುವಾಗ ಅವನಿಗೆ ಮಂದಪ್ರಕಾಶವು ಕಾಣಿ ಸಿತು. ಅವನು ಪುನಃ ಹಿಂದಕ್ಕೆ ಸರಿದನು. ಅವನಿಗೆ ಆ ದರಿಯ ಕಡೆಗೆ ನಿಚ್ಚ ಳವಾದ ಬೆಳಕು ಕಂಡಿತು. ಆ ಪ್ರಕಾಶವು ಬಹಳ ದೂರವಿರಲಿಲ್ಲ. ಅವನು ಮುಂದೆ ಮುಂದೆ ಸಾಗಿದನು. ಆ ಬೆಳಕಿನ ಕಡೆಗೆ ಹೋದರೆ ತಾನು ಯಾರಿ ಗಾದರೂ ಕಾಣಿಸಬಹುದೆಂಬ ವಿಚಾರ ಬಂದು ನಿಂತುಕೊಂಡನು. ಆಗುವ

ದೆಲ್ಲವೂ ಆಗಿಯೇ ತೀರುವದೆಂಬ ತೀರ್ಮಾನಕ್ಕೆ ಬಂದು, ಹಿಂದೆ ಹೋಗುವ ದರಲ್ಲಿ ಅರ್ಥವಿಲ್ಲೆಂದು ನಿಶ್ಚಯಿಸಿದನು. ಆಮೇಲೆ ಹಲಮುಲೋನು ತೋರಿಸಿದ ದಾರಿಯಿಂದ ಅರಣ್ಯದೊಳಗೆ ನಡೆದನು.

ಒಮ್ಮಿಂದೊಮ್ಮೆಲೆ ಅವನಿಗೆ ಚೀರಾಟ, ಕೂಗಾಟಗಳು ಕೇಳಿಸಿದವು. ಈ ಸಪ್ಪಳವು ಆ ದಗಿಯಲ್ಲಿರುವ ಬಯಲು ಪ್ರದೇಶದೊಳಗಿಂದ ಬಂದಂತೆ ಇತ್ತು. ಅವನು ಕಣ್ಣು ತೆರೆದು ಸ್ವಸ್ಥವಾಗಿ ಒಂದು ಕಡೆಯಲ್ಲಿ ಕುಳಿತುಬಿಟ್ಟನು.



## ೧೯.

ಆ ಹೆಣ್ಣುಮಗಳಿಗೆ ಆ ಬುರುಜು ಮೂರು ಮೈಲುಗಳಾಚೆಯಿಂದಲೇ ಕಾಣಿಸತೊಡಗಿತ್ತು. ಅವಳು ನಡೆದು ನಡೆದು ಬೇರ ಸೋತಿದ್ದಳು. ಆದರೂ ಆತುರತೆಯಿಂದ ಧಾವಿಸಿ ಹೆಜ್ಜೆ ಹಾಕುತ್ತಿದ್ದಳು. ಅವಳು ಅಶಕ್ತಳಾಗಿದ್ದರೂ ಆ ಬುರುಜು ಕಣ್ಣಿಗೆ ಬಿದ್ದೊಡನೆ ಅವಳಲ್ಲಿ ಚೈತನ್ಯವುಂಟಾಯಿತು. ಆದರಿಂದ ಅವಳು ಹುರುಪಿನಿಂದ ಮುಂದೆ ಮುಂದೆ ಸಾಗಿದಳು.

ಸೂರ್ಯನು ಮುಳುಗಿದನು. ಸಂಜೆಯಾಗಿ ಕತ್ತಲೆಯು ಪಸರಿಸಿತು. ಅವಳು ಸಾಗುತ್ತಿರುವಾಗ ಗಂಟೆಯ ಸಪ್ಪಳ ಕೇಳಬಂದಿತು. ಎಂಟೋ ಒಂಬತ್ತೋ ಹೊಡೆದಂತಾಯಿತು. ಬಂದೂಕಿನ ಸಪ್ಪಳವೂ ಕೇಳಬರುತ್ತಿದ್ದುದರಿಂದ ಅವಳು ನಡುನಡುವೆ ನಿಲ್ಲುತ್ತ ಮುಂದೆ ಸಾಗುತ್ತಿದ್ದಳು. ಕಲ್ಲುಮುಳ್ಳು ತುಳಿಯುವ ಅರಿವೇ ಅವಳಿಗಿರಲಿಲ್ಲ. ದಾರಿಯಲ್ಲಿ ಮನೆಗಳೂ ಹತ್ತಲಿಲ್ಲ. ಗುಡಿಸಲುಗಳೂ ಕಾಣಿಸಲಿಲ್ಲ. ನಿರ್ಜನ ಅರಣ್ಯದಲ್ಲಿ ಏನು ಕಾಣಬೇಕು ! ಅವಳ ದೃಷ್ಟಿ ಬುರುಜಿನಲ್ಲಿ ನಟ್ಟಿತ್ತು. ಅದರ ಕಡೆಗೆ ನೆಟ್ಟ ದೃಷ್ಟಿಯನ್ನು ಹೊರಳಿಸದೆ ನೇರವಾಗಿ ಹೊರಟುಬಿಟ್ಟಿದ್ದಳು.

ಬುರುಜಿನ ಕಡೆಯಿಂದ ಗಜಿಬಿಜಿ ಸಪ್ಪಳವು ಕೇಳಬರುತ್ತಿರುವದರಿಂದ ಅದೇನಿರಬಹುದೆಂಬದನ್ನು ವಿಚಾರ ಮಾಡುತ್ತ ಅವಳು ಮಾರ್ಗಕ್ರಮಿಸುತ್ತಿ

ದ್ದಳು. ಕತ್ತಲೆಯಲ್ಲಿ ಅವಳಿಗೆ ನಿಚ್ಚಳವಾಗಿ ಯಾವುದೂ ಕಾಣಿಸುತ್ತಿರಲಿಲ್ಲ. ಅಂಥ ಕತ್ತಲೆಯಲ್ಲಿ ಆ ಭವ್ಯ ಬುರುಜು ಮಾತ್ರ ಎದ್ದು ಕಾಣುತ್ತಿತ್ತು.

ಬುರುಜಿನೊಳಗಿಂದ ಒಮ್ಮೊಮ್ಮೆ ಝಗ್ಗನೆ ಬೆಳಕು ಏಳುತ್ತಿತ್ತು. ಅಲ್ಲಿಂದಲೇ ಗಲಾಟೆ ಕೇಳಬರುತ್ತಿದ್ದುದರಿಂದ ಒಳಗೆ ಜನರಿರಬಹುದೆಂದೂ ಏನೋ ಗೊಂದಲವು ನಡೆದಿದೆಯೆಂದೂ ಅವಳ ಕಲ್ಪನೆಯಾಗಿತ್ತು. ಅವಳು ಬುರುಜಿನ ತೀರ ಸಮೀಪಕ್ಕೆ ಬಂದಳು. ಅವಳಿಗೆ ಅಲ್ಲಿದ್ದ ಕಂದಕದ ಕಲ್ಪನೆ ಬಾರದ್ದರಿಂದ ಬುರುಜು ಬಹಳ ಸಮೀಪದಲ್ಲಿದೆ ಎಂದು ಅವಳ ಭಾವನೆ ಯಾಯಿತು. ಆ ಕಿಲ್ಲೆಯೊಳಗಿಂದ ಕಾಣುತ್ತಿರುವ ಮೂರಂತಸ್ತಿನ ಕಟ್ಟಡವು ಅವಳ ದೃಷ್ಟಿಗೆ ಬಿದ್ದಿತು. ಅದನ್ನೇ ನೋಡುತ್ತ ಅವಳು ಎಷ್ಟು ಹೊತ್ತು ನಿಂತಿದ್ದಳೋ ಏನೋ ಯಾರಿಗೆ ಗೊತ್ತು ! ಆ ಕಂದಕ ! ಆ ಕಟ್ಟಡ ಎಂಥದು ! ಎಂಬ ವಿಚಾರದ ಗೊಂದಲದಿಂದ ಅವಳು ದಿಙ್ಮೂಢಳಾಗಿದ್ದಳು. ಲಾಟೋರ ಕಿಲ್ಲೆಯು ಇದೇ ಇರಬಹುದೇ ಎಂಬ ಸಂಶಯವೂ ಅವಳಿ ಗುಂಟಾಯಿತು.

ಒಮ್ಮಿಂದೊಮ್ಮೆಲೆ ಹೊಗೆಯು ಮುಸುಕಿತು. ಕಿಲ್ಲೆಯು ಕಾಣದಾ ಯಿತು ಕರ್ಣ ಕಠೋರವಾದ ಧ್ವನಿಯು ಕೇಳಿಸಿತು ಅವಳ ಕಿವಿ ಗಡಚಿಕ್ಕಿ ಹೋದವು. ಅಷ್ಟರಲ್ಲಿ ಹೊಗೆಯು ಕಡಮೆಯಾಗಿ ಉರಿಯೇ ಎದ್ದಿತು. ಕಣ್ತೆರೆದು ನೋಡಿದಳು. ರಾತ್ರಿಯು ಹಗಲಿನಂತೆ ಕಂಡಿತು. ಈ ಉರಿಯು ಯಾಕೆ ಎದ್ದಿತು ಎಂಬ ವಿಚಾರ ಅವಳ ತಲೆಯಲ್ಲಿ ಬಂದಿತು. ಉರಿಯು ಸುತ್ತೂಕಡೆಗೂ ಹಬ್ಬಿಕೊಂಡಿತು. ಆ ಕಟ್ಟಡಕ್ಕೆ ಸುತ್ತೂ ಕಡೆಯಿಂದಲೂ ಬೆಂಕಿ ಹತ್ತಿ ಧಗಧಗಿಸಹತ್ತಿತು. ಅಸಂಖ್ಯಾತ ಕಿಡಿಗಳು ಆಕಾಶದಲ್ಲಿ ಹಾರ ಹತ್ತಿದವು. ಸುತ್ತೂಕಡೆಗೂ ಹಾಹಾಕಾರ ವೆದ್ದಿತು. ಅಗ್ನಿನಾರಾಯಣನ ಪ್ರಕೋಪದಿಂದ ಅವಳು ತಾನು ಅಲ್ಲಿ ನಿಲ್ಲಬೇಕೋ ಅಥವಾ ದಾರಿ ಸಿಕ್ಕತ್ತ ಓಡಿಹೋಗಬೇಕೋ ಎಂಬಂತಾಯಿತವಳಿಗೆ. ದೊಡ್ಡ ಗಾಳಿಯೂ ಬೀಸಿದ್ದ ರಿಂದ ಹೊಗೆಯೆಲ್ಲ ಹಾರಿಹೋಗಿ ಅಗ್ನಿಜ್ವಾಲೆಯ ಪ್ರಕಾಶದಿಂದ ಆ ಕಿಲ್ಲೆಯ ಭಾಗಗಳೆಲ್ಲವೂ ಅವಳಿಗೆ ಕಾಣತೊಡಗಿದವು.

ಆ ಪೂಲಿನ ಮೇಲಿರುವ ಕಿಲ್ಲೆಯ ಕೆಳಭಾಗವೆಲ್ಲ ಸುಡುತ್ತಲಿತ್ತು. ಅದರ ಮೇಲಿರುವ ಎರಡೂ ಅಂತಸ್ತುಗಳಿಗೆ ಇನ್ನೂ ಬೆಂಕಿ ತಾಕಿರಲಿಲ್ಲವಾದರೂ ಸುಡುತ್ತಲಿರುವ ಕಂಬದ ಮೇಲೆ ಆ ಅಂತಸ್ತುಗಳು ನಿಂತಂತೆ ಕಾಣತೊಡ ಗಿದ್ದವು. ಬೆಂಕಿಯ ಬೆಳಕಿನೊಳಗಿಂದ ಮಾಯಕೆಲ್‌ಫ್ಲೀಶಾರ್ಡಳಿಗೆಕಿಡಕಿ ಯೊಳಗಿನದೆಲ್ಲವೂ ಕಾಣುತ್ತಿತ್ತು. ಎರಡನೆಯ ಅಂತಸ್ತಿನ ಗೋಡೆಯ ಲ್ಲಿದ್ದ ಕನ್ನಡಿ ಕಪಾಟಿನೊಳಗಿನ ಪುಸ್ತಕಗಳೂ ಕಾಣುತ್ತಿದ್ದವು. ಒಂದು ಕಿಡಿಕಿಯಲ್ಲಿ ಸಣ್ಣ ಸಣ್ಣ ಪ್ರಾಣಿಗಳು ಕುಳಿತದ್ದೂ ಕಣ್ಣಿಗೆ ಬಿದ್ದಿತು. ಹಕ್ಕಿ ಬಲೆಯಲ್ಲಿ ಸಿಕ್ಕಂತೆ ಆ ಪ್ರಾಣಿಗಳು ಕಕ್ಕಾವಿಕ್ಕಿಯಾಗಿ ಕುಳಿತುಕೊಂಡಿದ್ದವು. ಅಂದು ಅವಳಿಗೆ ಜ್ವರ ಬಂದಿದ್ದವು. ಮುಂಜಾನೆಯಿಂದ ಈ ಹೊತ್ತಿನ ವರೆಗೂ ಅವಳು ಏನೂ ತಿಂದಿರಲಿಲ್ಲ. ಒಂದೇ ಸವನೆ ಅಳುತ್ತಿದ್ದಳು. ಕಣ್ಣು ಊದಿಕೊಂಡಿದ್ದವು. ಅವಳಿಗೆ ಹೇಳತೀರದಷ್ಟು ದಣಿವೂ ಆಗಿತ್ತು. ಅಷ್ಟು ಅವಸ್ಥೆಪಟ್ಟರೂ ಅವಳು ನೆಟ್ಟ ನೋಟದಿಂದ ಆ ಕಡೆಗೆ ನೋಡುತ್ತ ಲಿದ್ದಳು. ಅಷ್ಟರಲ್ಲಿ ಒಣಗಿ ಕಟಿಕಾಗಿದ್ದ ಬಳ್ಳಿಯೊಂದಕ್ಕೆ ಬೆಂಕಿಯು ಹೊತ್ತಿ ಕೊಂಡಿತು; ಭಸ್ಮವೂ ಆಗಿಬಿಟ್ಟಿತು. ಮತ್ತೊಂದು ಕ್ಷಣದಲ್ಲಿ ಜ್ವಾಲೆಗಳು ಎರಡನೆಯ ಅಂತಸ್ತಿಗೂ ಪಸರಿಸಿದವು. ಅದರಿಂದ ಆ ಅಂತಸ್ತಿನೊಳಗೆ ಮಲಗಿಕೊಂಡ ಮಗುಗಳು ಸ್ಪಷ್ಟವಾಗಿ ಕಾಣಿಸಹತ್ತಿದವು. ಆ ಮಗುಗಳು ನಿರ್ವಿಕಾರ ಚಿತ್ತದಿಂದ ಮಲಗಿ ನಿದ್ದೆ ಹೋಗಿದ್ದವು. ಅಷ್ಟು ಗಾಢವಾಗಿ ಅವುಗಳಿಗೆ ನಿದ್ದೆ ಹತ್ತಿತ್ತು. ಆ ಹುಡುಗರು ತನ್ನ ಮಕ್ಕಳೇ ಎಂದು ಅವಳಿಗೆ ದೃಢವಾದ ನಂಬಿಗೆಯಾಯಿತು.

ಅವಳು ಆಕ್ರೋಶ ಮಾಡಿದಳು. ಅಂಥ ಆಕ್ರೋಶವು ತಾಯಿಂದಿ ರಿಂದಲೇ ಮಾತ್ರ ಸಾಧ್ಯ. ಅಂಥ ಹೃದಯಸ್ಪರ್ಶಿಯಾದ ಚೀತ್ಕಾರವು ಅಲ್ಲಿಯೇ ಸಮೀಪದಲ್ಲಿದ್ದ ಮಾರ್ಕ್ವಿಸ್ಸನ ಕಿವಿಗೆ ಬಿದ್ದಿತು. ಆ ಚೀತ್ಕಾರ ವನ್ನು ಕೇಳಿ ಅವನು ಸ್ತಂಭೀಭೂತನಾಗಿ ಎದ್ದು ನಿಂತನು. ಲ್ಯಾಂಟ್ ನೆಕ್‌ನು ಕಂದಕದಿಂದಲೂ, ಅಡವಿಯೊಳಗಿಂದಲೂ ಹೊರಬರುತ್ತಿರುವ ದಾರಿಯ ನಡುವೆ ಇದ್ದನು. ಆ ದಾರಿ ಮುಳ್ಳುಗಳಿಂದ ಮುಚ್ಚಿತ್ತು. ಅಲ್ಲಿಂದಲೇ ಅವನಿಗೆ ಬೆಂಕಿಯಿಂದ ಸುತ್ತುವರಿದಿದ್ದ ಪೂಲು ಕಾಣಿಸಿತು.

ಸುಡುತ್ತಿರುವ ಕಿಲ್ಲೆಯ ಎದುರಿನಲ್ಲಿ ಚಿಂತಾಕ್ರಾಂತವಾದ ಮುಖಮುದ್ರೆಯಿಂದ ನಿಂತಿರುವ ಹೆಣ್ಣುಮಗಳೊಬ್ಬಳು ಅವನಿಗೆ ಕಾಣಿಸಿದಳು. ಅವಳು ಪಿಶಾಚಿನಿಯಂತೆ ಭೀಕರವಾಗಿದ್ದಳು. ದುಃಖಿತರನ್ನು ಕಂಡಾಗ ಎಂಥವರ ಹೃದಯವಾದರೂ ಸಹಜವಾಗಿಯೇ ಕೊರಗದೆ ಎಂದಿಗೂ ಇರಲಾರದು. ಅವಳು ಸಾಧಾರಣ ತಾಯಿಯಾಗಿರಲಿಲ್ಲ. ಅವಳ ಚೀತ್ಕಾರದಲ್ಲಿ ತಾಯ್ತನದ ಕರುಳು ಕೊರೆಯುತ್ತಿರುವ ಧ್ವನಿಯು ಹೊರಡುತ್ತಿತ್ತು.

ಅವಳ ಆಕ್ರೋಶವು ಅವನ ಹೃದಯವನ್ನು ವಿದೀರ್ಣಗೊಳಿಸದೆ ಬಿಡಲಿಲ್ಲ " ಅಯ್ಯೋ ದೇವರೇ ನನ್ನ ಮಕ್ಕಳು ! ಅವು ನನ್ನ ಹೊಟ್ಟೆಯ ಕರಳುಗಳು ! ಬನ್ನಿರಿ, ಓಡಿ ಬನ್ನಿರಿ. ಎಂಥ ಭಯಂಕರ ಈ ಬೆಂಕಿಯು ! ಬೆಂಕಿ ! ಬೆಂಕಿ ! ಅಯ್ಯೋ ಸಿಪಾಯಿಗಳೇ ? ಯಾರೂ ಇಲ್ಲಿಲ್ಲವೇ ? ನನ್ನ ಮಗುಗಳು ಬೆಂಕಿಗೆ ಆಹುತಿಯಾಗುತ್ತಲಿವೆ ! ಅಯ್ಯೋ ಮಕ್ಕಳೇ ! ನಿಮ್ಮನ್ನಿಲ್ಲಿಂಸಿರುವರೇ ? ಏನು ಮಾಡಲಿ ನಾನು ? ದೇವಾ ಇನ್ನೂ ಪರೀಕ್ಷಿಸುವಿಯಾ " ಎಂದು ಗಂಟಲ ನರಗಳು ಹರಿಯುವಂತೆ ಒಂದೇಸವನೆ ಚೀರುತ್ತಿದ್ದಳು.

ಕಿಲ್ಲೆಯ ಸುತ್ತುಮುತ್ತಲು ನಡೆಯುತ್ತಿರುವ ಗೊಂದಲವೆಲ್ಲವು ಮತ್ತಿಷ್ಟು ಹೆಚ್ಚಾಯಿತು. ಆ ಬೆಂಕಿಯನ್ನು ನೋಡಿ. ಸೈನಿಕರು ಬೆಂಕಿ ಬಿದ್ದ ಕಡೆಗೆ ಧಾವಿಸತೊಡಗಿದರು. ಗಾವೆನ್, ಗುಶೆಪ್, ಸಿಮೋರೇಡಿನ್ ಮೊದಲಾದವರು ಒಂದೇಸವನೆ ಆಜ್ಞೆ ಮಾಡುತ್ತಿದ್ದರು. ಆದರೆ ಅವರಾದರೂ ಏನು ಮಾಡಬೇಕು ? ಬೆಂಕಿಯು ರಭಸದಿಂದ ತನ್ನ ಕೈಚಳಕವನ್ನು ತೋರಿಸುತ್ತ ಭೀಷಣ ಸ್ವರೂಪವನ್ನು ತಾಳುತ್ತಿತ್ತು. ಬೆಂಕಿಯ ಮುಂದೆ ಯಾರ ಆಟವೂ ನಡೆಯುವಂತಿರಲಿಲ್ಲ. ಸೈನ್ಯಸಮುದಾಯವೆಲ್ಲ ಶೂನ್ಯ ಮನಸ್ಕರಾಗಿ ಆ ಬೆಂಕಿಯ ಅರ್ಭಟವನ್ನು ನೋಡುತ್ತ ನಿಂತುಕೊಂಡಿದ್ದರು. ಏನು ಮಾಡಬೇಕೆಂಬುದೇ ಅವರಿಗೆ ತೋಚದಾಗಿತ್ತು.

ಬೆಂಕಿಯ ಆಸುರೀ ತಾಂಡವವು ಹೆಚ್ಚಾಗುತ್ತಲೇ ನಡೆದಿದೆ. ಅದಕ್ಕೆ ಅನುಕೂಲವಾಗುವಂತೆ ದುಷ್ಟ ಗಾಳಿಯು ಪುಷ್ಟಿಯನ್ನು ಕೊಡುತ್ತಲಿದೆ. ಇನೂಾನಸನ ಭೂತವೇ ಇಷ್ಟೆಲ್ಲ ಆಟವನ್ನು ಹೂಡಿರುವದೋ ಏನೋ ಅನ್ನು

ವಂತಹ ಕಲ್ಪನೆಯು ಹಲವರಿಗೆ ಬಂದಿರಲು ಸಾಕು ಎಂದು ಹೇಳಿದರೆ ತಪ್ಪಾಗದು.

ಆ ವಾಚನಾಲಯವು ನಡುವಿನ ಅಂತಸ್ತಿನಲ್ಲಿದ್ದರೂ ಇನ್ನೂ ಅದಕ್ಕೆ ಬೆಂಕಿ ತಗಲಿರಲಿಲ್ಲ. ಯಾಕೆಂದರೆ ಆ ಅಂತಸ್ತಿನ ಗೋಡೆಗಳು ದೊಡ್ಡವೂ ಎತ್ತರವೂ ಆಗಿದ್ದರಿಂದ ಇನ್ನೂ ಬೆಂಕಿ ಅಲ್ಲಿಗೆ ಹತ್ತಲು ಸುಳಿವು ಸಿಕ್ಕಿರಲಿಲ್ಲ ಕೆಳಗಿನಿಂದಲೂ, ಮೂರನೆಯ ಅಂತಸ್ತಿನ ಮೇಲಿರುವ ಹುಲ್ಲಿಗೂ ಬೆಂಕಿ ಹತ್ತಿದ್ದರಿಂದ ಈ ನಡುವಿನ ಅಂತಸ್ತು ಎರಡೂ ಆಘಾತಗಳಿಗೆ ಬಲಿಯಾಗಿತ್ತು. ಇಂಥ ಬೆಂಕಿಯ ಅನಾಹುತದಲ್ಲಿ ಆ ಮುದ್ದುಮಕ್ಕಳು ಗಾಢವಾಗಿ ಮಲಗಿಕೊಂಡಿವೆ. ಅಂಥಲ್ಲಿ ಈ ಮಕ್ಕಳನ್ನು ಮಲಗಿಸಿದವನು ಎಷ್ಟು ದುಷ್ಟನಿದ್ದಿರಬಹುದೆಂಬ ಕಲ್ಪನೆಗೆ ಉತ್ತರವೇ ದೊರೆಯದಾಗಿತ್ತು.

ಅವಳ ಆಕ್ರೋಶವು ಎಡೆಬಿಡದೆ ಸಾಗಿತ್ತು 'ಅಯ್ಯಯ್ಯೋ! ಬೆಂಕಿ! ಕಾಣುವದಿಲ್ಲವೇ? ಎಲ್ಲರ ಕಣ್ಣುಗಳು ಇಂಗಿ ಹೋಗಿರುವವೇ? ಕಿವಿ ಒಡೆದು ಹೋಗಿರುವವೇ? ನನ್ನ ಮಕ್ಕಳನ್ನು ಬೆಂಕಿಯಲ್ಲಿ ಹಾಕಿ ಸುಟ್ಟು ಹಾಕಬೇಕೆನ್ನುತ್ತೀರಾ? ಕೈಜೋಡಿಸಿಕೊಂಡು ತೆಪ್ಪಗೇಕೆ ನಿಂತುಕೊಂಡಿರುವಿರಿ? ದೇವರೇ, ಹಗಲಿರುಳೆನ್ನದೆ ಬಿಸಿಲಿನಲ್ಲಿ, ಕಲ್ಲು ಮುಳ್ಳೆನ್ನದೆ ಬಾಯಿ ಬಾಯಿ ಬಿಡುತ್ತ ಹಲುಬಿದ ನನಗೆ ಈ ಭೀಕರ ದೃಶ್ಯವನ್ನು ತೋರಿಸುವದಿದೆಯೇ? ಮೂರು ಎಳೆ ಮಗುಗಳ ಆಹುತಿ ಆಗುತ್ತಿದೆ. ಕಾಣುವದಿಲ್ಲವೇ? ಅವು ನಿಮಗೇನು ಮಾಡಿವೆ? ಪಾಪ! ಎಳೆಕೂಸುಗಳವು. ನಿಮ್ಮಲ್ಲಿರುವ ವೈರವನ್ನೇನವು ಬಲ್ಲವು? ಇಷ್ಟು ಜನರಿರುವಿರಿ. ಒಬ್ಬರಿಗಾದರೂ ದಯ ಬರಲೊಲ್ಲದೇ? ಅವು ನನ್ನ ಅರಗಿಳಿಗಳು. ಎಷ್ಟು ಆರಾಮಾಗಿ ಮಲಗಿಕೊಂಡಿವೆ! ಅವುಗಳ ಮುಖಗಳು ನನಗೆ ಕಾಣುತ್ತಿವೆ. ನಾನು ಅವುಗಳನ್ನು ಹೆತ್ತ ತಾಯಿ! ಅವುಗಳಿಗಾಗಿ ನಾನು ಜೀವದ ಹಂಗಿಲ್ಲದೆ ಪರಿತಪಿಸುತ್ತಿರುತ್ತೇನೆ. ದೊಡ್ಡದಕ್ಕೆ ಐದುವರುಷ; ಚಿಕ್ಕದಕ್ಕೆ ಇನ್ನೂ ಎರಡೆ ವರುಷ. ಓಹೋ ಅದರ ಮಾಟಾದ ಕಾಲುಗಳು ಕಾಣಿಸುತ್ತಿವೆ, ನೋಡಿರಿ. ದೇವರೇ, ನೀನು ನನಗೆ ಅವುಗಳನ್ನು ದಯಪಾಲಿಸಿದಿ. ಈ ಚಂಡಾಲರು ನನ್ನಿಂದ ಅಪಹರಿಸಿಕೊಂಡು ಕೋಮಲ ಹಸುಳೆಗಳನ್ನು

ಅಗ್ನಿನಾರಾಯಣನಿಗೆ ಬಲಿ ಕೊಡುತ್ತಿದ್ದಾರೆ. ದೇವಾ ! ನೀನೆಲ್ಲಿ ಹೋಗಿ ರುವಿ ಈಗ ? ಬಾ, ಬಂದು ನನ್ನ ಕಂದಮ್ಮಗಳನ್ನು ರಕ್ಷಿಸು. ಅವುಗಳು ನನಗೆ ಬೆಟ್ಟಿಯಾಗಬೇಕು. ನಾನು ಅವುಗಳಿಗೆ ಬೆಟ್ಟಿಯಾಗಬೇಕು. ಅಂದರೆ ತಾಯಿಮಕ್ಕಳು ಕೂಡಬೇಕು; ಅಗಲಿರಬಾರದು. ನನ್ನ ಈ ದಾರುಣಾವಸ್ಥೆ ಯನ್ನು ಕಂಡು ಯಾರಿಗೂ ಕರುಣೆ ಹುಟ್ಟದಾಯಿತೇ ? ನಿಮ್ಮ ಅಂತಃ ಕರುಣವು ಸುಟ್ಟುಹೋಯ್ತೇ ? ಬೆಂಕಿಯಲ್ಲಿ ಹಾಕಿ ಸುಡುವದಕ್ಕಾಗಿ ಕಂದಮ್ಮಗಳನ್ನು ಅಪಹರಿಸಿಕೊಂಡು ಬಂದಿರಾ ಚಂಡಾಳರೇ ? ಅವುಗ ಳನ್ನು ಪಾರು ಮಾಡದಿದ್ದರೆ ನಿಮ್ಮ ಕುಲಕೋಟಿ ನಾಶವಾಗಲಿ ಎಂದು ಶಪಿ ಸುತ್ತೇನೆ ! " ಎಂದು ಒಂದೇಸವನೆ ಎದೆ ಬಿರಿಯುವಂತೆ ಅವಳು ಹಲಬು ತ್ತಿದ್ದಳು. ಈ ಪ್ರಕಾರವಾಗಿ ಅವಳ ಕರುಣಾವಿಲಾಸವು ನಡೆದಾಗ ಇನ್ನೊಂದೆ ಡೆಗೆ ಇನ್ನೊಂದು ಪ್ರಕಾರ ನಡೆದಿತ್ತು.

'ನಿಚ್ಚಣಿಕೆ, ನಿಚ್ಚಣಿಕೆ, ತನ್ನಿರಿ'

'ಛೇ, ನಿಚ್ಚಣಿಕೆ ಎಲ್ಲಿಂದ ತರಬೇಕು, ನಿಚ್ಚಣಿಕೆಯಿಲ್ಲ.'

'ಅಯ್ಯೋ ನೀರು ! ನೀರು !'

'ಇಲ್ಲೆಲ್ಲಿವೆ ನೀರು ?'

'ಎರಡನೆಯ ಅಂತಸ್ತಿನಲ್ಲಿ ಬಾಗಿಲವಿದೆ'

'ಅದು ಕಬ್ಬಿಣದ್ದಿದೆ'

'ಒಡೆದು ಹಾಕಿರಿ.'

'ಅದ್ಹೇಗೆ ಸಾಧ್ಯ ?'

ಆ ತಾಯಿಯ ಆಕ್ರೋಶಕ್ಕೆ ಮಿತಿಯೇ ಇರಲಿಲ್ಲ. 'ಅವುಗಳನ್ನಾ ದರೂ ಹೊರಗೆ ತೆಗೆಯಿರಿ ಇಲ್ಲವೆ ನನ್ನನ್ನಾದರೂ ಒಳಗೆ ಒಗೆಯಿರಿ' ಎಂದವಳು ಎದೆ ಎದೆ ಬಡಿದುಕೊಳ್ಳುತ್ತಿದ್ದಳು. ಇತ್ತ ಬೆಂಕಿಯು ಹೆಚ್ಚೆಚ್ಚು ಪ್ರಜ್ವಾಲ್ಯಮಾನವಾಗಿ ಉರಿಯುತ್ತಲೇ ಇತ್ತು.

ಲ್ಯಾಂಟ್‌ನೆಕ್‌ನು ಕಿಸೆಯಲ್ಲಿ ಕೈಹಾಕಿದನು. ಆ ಕಬ್ಬಿಣದ ಬಾಗಿಲದ ಕೀಲಿಕೈಗಳು ಅವನ ಕೈಗೆ ಹತ್ತಿದವು. ಆವನು ಸ್ವಲ್ಪ ಹೊತ್ತು ತಡೆದು

ಅಲ್ಲಿಂದ ಹೊರಟವನು ಆ ಪಾವಟಿಗೆಗಳಿದ್ದ ಸ್ಥಳಕ್ಕೆ ಬಂದು ನಿಂತು ಕೊಂಡನು. ಅಲ್ಲಿದ್ದ ೪|| ಸಾವಿರ ಶೂರ ಸಿಪಾಯಿಗಳ ಕಡೆಯಿಂದ ಆ ಮೂರು ಮಗುಗಳ ಜೀವವನ್ನುಳಿಸುವದು ಆಗಲಾರದಂಥ ಪರಿಸ್ಥಿತಿ ಯುಂಟಾಗಿತ್ತು. ಸಮೀಪದಲ್ಲಿ ಒಂದಾದರೂ ನಿಚ್ಚಣಿಕೆಯಿಲ್ಲದಾಗಿತ್ತು. ಅರ್ಧಮರ್ಧ ಬತ್ತಿದ ಹಳ್ಳದೊಳಗೆ ಅಲ್ಲಲ್ಲಿ ನಿಂತ ನೀರಿನಿಂದ ಆ ಅದ್ಭುತ ಬೆಂಕಿಯನ್ನು ಆರಿಸುವದು ಅಸಾಧ್ಯವಾದ ಮಾತಾಗಿತ್ತು. ಒಂದು ಜ್ವಾಲಾ ಮುಖಿಯ ಮೇಲೆ ಒಂದು ಬಟ್ಟಲ ತುಂಬ ನೀರನ್ನು ಹಾಕುವ ಪ್ರಯತ್ನ ದಷ್ಟು ಹಾಸ್ಯಾಸ್ಪದವಾಗಿತ್ತು.

ಸಿಮೋರೆಡಿನ್, ರೇಡೋ, ಗುಶೆಪ್‌ರು ಹಳ್ಳದೊಳಗೆ ಹೋಗಿದ್ದರು. ಗಾವೆನ್‌ನು ಎರಡನೆಯ ಅಂತಸ್ತಿನಲ್ಲಿರುವ ಕೋಣೆಯೊಳಗೆ ಹೊಕ್ಕಿದ್ದನು. ಅಲ್ಲಿ ಅಲುಗಾಡದಂಥ ಬಂಡೆಯೂ, ಗುಪ್ತ ಮಾರ್ಗವೂ, ಕಬ್ಬಿಣದ ಬಾಗಿ ಲವೂ ಇದ್ದವು. ಅಲ್ಲಿಯೇ ಇಮಾನಸನು ಕಡ್ಡಿ ಕೆರೆದು ಬೆಂಕಿಯನ್ನು ಪುಟ ಮಾಡಿದ್ದನು. ಗಾವೆನ್‌ನು ತನ್ನೊಡನೆ ೨೦ ಸಿಪಾಯಿಗಳನ್ನು ತೆಗೆದುಕೊಂಡಿ ದ್ದನು. ಆ ಬಾಗಿಲನ್ನು ಮುರಿಯದ ಹೊರತು ಬೇರೆ ಮಾರ್ಗವೇ ಇರಲಿಲ್ಲ. ಅದು ಮುರಿಯಲು ಬರದಷ್ಟು ಗಟ್ಟಿಮುಟ್ಟಾಗಿತ್ತು. ಅದಕ್ಕೆ ಕೊಡಲಿ ಯಿಂದ ಎಷ್ಟು ಹೊಡೆದರೂ ಕೊಡಲಿಗಳೇ ಮುರಿದು ಬೀಳುತ್ತಿದ್ದವು. ಹಾರಿ ಯನ್ನು ತೆಗೆದುಕೊಂಡು ಬಾಗಿಲದ ಕೀಲನ್ನು ತಪ್ಪಿಸಬೇಕೆಂದು ಅವರು ಎಷ್ಟೋ ಹೆಣಗಾಡಿದರು. ಆದರೆ ಆ ಹಾರಿಗಳೇ ಕಟ್ಟಿಗೆಯಂತೆ ಲಟಕ್ಕನೆ ಮುರಿದು ಬಿಡುತ್ತಿದ್ದವು. ಗಾವೆನ್‌ನು ‘ ತೋಪಿನ ಗುಂಡಿನಿಂದ ಹೊಡೆದರೆ ಕೆಲಸವಾಗುವದು ’ ಎಂದಂದನು. ಆದರೆ ಏನು ಮಾಡಬೇಕೆಂಬುದೇ ಯಾರಿಗೂ ಹೊಳೆಯದಾಗಿತ್ತು. ಆ ಬಾಗಿಲದ ಮುಂದೆ ಯಾರ, ಯಾವ ಆಟವೂ ಸಾಗದಾಯಿತು. ಹಿಂದಿನಿಂದ ಬೆಂಕಿಯು ಹೊತ್ತುತ್ತಲೇ ಇತ್ತು. ಆ ಚಾಂಡಾಲನಾದ ಇಮಾನಸನ ಪ್ರೇತವು ಸುಡುತ್ತ ಬಿದ್ದಿತ್ತು. ಅಲ್ಪಾವಧಿ ಯಲ್ಲಿಯೇ ಆ ಕಿಲ್ಲೆಯು ಸುಟ್ಟು ಭಸ್ಮವಾಗುವದರಲ್ಲಿ ಸಂದೇಹವಿರಲಿಲ್ಲ. ಏನು ಮಾಡಬೇಕೆಂಬುದೇ ಯಾರಿಗೂ ಬಗೆ ಹರಿಯದೆ ಹೋಯಿತು. ಗಾವೆನ್‌ನ ದೃಷ್ಟಿಯು ಆ ತೂಗುವ ಬಂಡೆಗಲ್ಲಿನ ಕಡೆಗೆ ಹೋಯಿತು.

ಅವನು ಸಿಟ್ಟಿನಿಂದ ' ಇದೇ ಹಾದಿಯಿಂದ ಲ್ಯಾಂಟ್‌ನೆಕ್‌ನು ಹೋದನು ' ಎಂದು ಒದರಿದನು.

' ....ಮತ್ತು ತಿರುಗಿ ಬಂದನು ' ಎಂಬ ಉತ್ತರ ಕೇಳಬಂದಿತು. ಆ ಮುದುಕನ ಮುಖವು ಆ ಗುಪ್ತಮಾರ್ಗದ ಹತ್ತಿರ ಕಂಡಿತು. ಹೌದು, ಲ್ಯಾಂಟ್‌ನೆಕ್‌ನೇ ಬಂದಿದ್ದನು. ಅವನಂಥವನು ಬಾರದೆ ಇನ್ನಾರು ಬರಬೇಕು !

ಗ್‌ವೆನ್‌ನು ಅವನ ಮುಖವನ್ನು ಇಷ್ಟು ಸಮೀಪದಿಂದ ಎಂದೂ ನೋಡಿದ್ದಿಲ್ಲ. ಅವನನ್ನು ನೋಡಿದವನೇ ಗಾವೆನ್‌ನು ಸಲ್ಪ ಹಿಂದಕ್ಕೆ ಸರಿದು ನಿಂತನು. ಉಳಿದವರಂತೂ ಕಲ್ಲಿನಂತೆ ನಿಶ್ಚಲರಾಗಿ ನಿಂತುಕೊಂಡರು. ಅವನ ಕೈಯಲ್ಲಿ ದೊಡ್ಡದಾದ ಕೀಲೀಕೈ ಇತ್ತು. ಅವನು ಎಲ್ಲರನ್ನೂ ತುಚ್ಛತೆಯಿಂದ ನೋಡಿ, ಆ ಕಬ್ಬಿಣದ ಬಾಗಿಲದ ಕಡೆಗೆ ಸಾಗಿದನು. ಕೀಲೀಕೈಯಿಂದ ಕೀಲಿಯನ್ನು ತೆಗೆದು ಬಾಗಿಲವನ್ನು ನೂಕಿದನು. ಒಳಗೆ ಬೆಂಕಿಯು ಕಿಡಿಗಳು ಸುತ್ತಲೂ ಛಟ್ ಛಟ್ ಎಂದು ಹಾರಾಡುತ್ತಿದ್ದವು. ಅವನು ಹಾಗೆಯೇ ನುಗ್ಗಿ ಮುಂದೆ ಸಾಗಿದನು. ಅವನೇನು ಬೆದರಿರಲಿಲ್ಲ. ಅಲ್ಲಿದ್ದವರೆಲ್ಲರೂ ಅವನನ್ನು ಹುಳುಹುಳನೆ ನೋಡುತ್ತ ಆಶ್ಚರ್ಯಚಕಿತ ರಾಗಿ ನಿಂತುಬಿಟ್ಟರು.

ಅವನು ಎಂಟು ಹತ್ತು ಹೆಜ್ಜೆ ಹೋಗಿರಬಹುದು. ಅಷ್ಟರಲ್ಲಿ ಅವನ ಕಾಲ ಕೆಳಗಿನ ನೆಲವು ಕುಸಿಬಿದ್ದಿತು. ಅವನು ಹಿಂದೆ ನೋಡಲಿಲ್ಲ. ಏನೂ ಆಗಿಲ್ಲವೆಂಬಂತೆ ಅವನು ಮುಂದೆ ಸಾಗಿದನು. ಮುಂದೆ ಅವನು ಹೊಗೆಯೊಳಗೆ ಸಿಕ್ಕದ್ದರಿಂದ ಕಾಣದಾದನು. ಮುಂದೇನಾಯಿತೆಂಬದು ತಿಳಿಯಲು ಶಕ್ಯವೇ ಇದ್ದಿದ್ದಿಲ್ಲ. ಅವನು ಮುಂದೆ ಹೋದನೋ ಅಥವಾ ಮರಣ ಪಟ್ಟನೋ-ಏನೋ ಎಂಬದಾವುದೂ ಗೊತ್ತಾಗದೆ ಹೋಯಿತು. ಬೆಂಕಿಯು ಮಾತ್ರ ಸುತ್ತೂ ಕಡೆ ಹಬ್ಬಿಬಿಟ್ಟಿತ್ತು. ಮಾರ್ಕ್ವಿಸನು ಮಾತ್ರ ಒಳಗೆ ನುಗ್ಗಿದವನು ನುಗ್ಗಿಯೇ ಬಿಟ್ಟಿದ್ದನು.



## ೨೦.

ತುಸು ಸಮಯದ ನಂತರ ಮಗುಗಳು ಎಚ್ಚತ್ತವು. ಇನ್ನೂವರೆಗೂ ಬೆಂಕಿಯು ಒಳಗೆ ಹತ್ತಿರಲಿಲ್ಲ; ಆದರೆ ಕೆಂಪು ಬಣ್ಣವು ಮಾತ್ರ ಒಳಗೆ ಬಿದ್ದಿತ್ತು. ಹೀಗೆ ಬೆಳಕು ಬಿದ್ದದ್ದನ್ನು ಅವು ಎಂದೂ ನೋಡಿರಲಿಲ್ಲ; ಈಗ ನೋಡಿದವು. ಜಾರ್ಜಿಟಳಿಗೆ ಅತ್ಯಾನಂದವಾಯಿತು. ಮೇಲಿನಂತಸ್ತಿನ ಗೋಡೆಯಲ್ಲಿ ಬಿದ್ದ ಬಿರುಕಿನೊಳಗಿಂದ ಬೆಂಕಿಯ ಕಿಡಿಗಳು ಒಳಗೆ ಬಂದು ಬೀಳತೊಡಗಿದ್ದವು. ಮಗುಗಳು ಎಚ್ಚರಗೊಂಡು ಕಣ್ಣುಬಿಟ್ಟು ಸುತ್ತೂ ಕಡೆಗೆ ನೋಡ ಹತ್ತಿಧವು. ರೇನಿಯು ತನಗೆ ಗವ್ಮ್ಮ ಕುದಿಸುತ್ತಿದೆ ಎಂದಿತು. ತನಗೂ ಹಾಗೇ ಆಗುತ್ತದೆಂದು ಜಾರ್ಜಿಟ್ ದನಿಗೂಡಸಿತು. ಇತ್ತ ಕೆಳಬದಿ ಯಲ್ಲಿ ‘ ಅಯ್ಯೋ ಮಕ್ಕಳೇ ’ ಎಂದು ಆ ಹೆಣ್ಣು ಮಗಳು ಬಾಯಿ ಬಾಯಿ ಬಿಡುತ್ತಿದ್ದಳು. ಮಕ್ಕಳ ಒಂದೊಂದೇ ಹೆಸರನ್ನು ತೆಗೆದುಕೊಂಡು ಆ ತಾಯಿ ಚೀರುತ್ತಿದ್ದಳು.

ಮಗುಗಳು ತಲೆಯನ್ನು ಕಿಡಿಕಿಯಲ್ಲಿ ಹಾಕಿ ನೋಡ ಹತ್ತಿದವು. ಮಗುಗಳ ಸ್ಮರಣ ಶಕ್ತಿಯು ಒಮ್ಮೊಮ್ಮೆ ಬಲು ಜಾಗೃತವಿರುತ್ತದೆ; ಅವು ಗಳಿಗೆ ಒಮ್ಮೆಲೆ ನೆನಪಿಗೆ ಬರುತ್ತದೆ. ರೇನಿಯು ಕಿಡಿಕಿಯಲ್ಲಿ ಸಾಗರಬಿದ್ದು ಸುತ್ತೂ ಕಡೆಗೆ ನೋಡಿ ‘ ಅವ್ವಾ ’ ಎಂದು ಚೀರಿತು. ಉಳಿದವೆರಡೂ ಮಗುಗಳೂ ‘ ಅವ್ವಾ, ಅವ್ವಾ ’ ಎಂದು ಗಟ್ಟಿಯಾಗಿ ಚೀರಿದವು. ಆ ಮಗು ಗಳ ಚೀತ್ಕಾರವು ಆ ತಾಯಿಯ ಕಿವಿಗೆ ಬಿದ್ದಿತು. ಕೂಡಲೇ ಅವಳು ‘ ಮಕ್ಕಳೇ ’ ಎಂದು ತನ್ನ ಎರಡೂ ಕೈಗಳನ್ನು ಮುಂದೆ ಚಾಚಿದಳು. ಆ ಕಿಡಿಕಿಯ ಬುಡಕ್ಕೆ ಬಂದು ನಿಂತುಕೊಂಡಳು. ಅಲ್ಲಿಗಿನ್ನೂ ಬೆಂಕಿ ತಾಕಿರ ಲಿಲ್ಲ.

‘ ಏ ಅವ್ವಾ, ನನ್ನ ಮೈ ಹುರಪಳಿಸುತ್ತಿದೆ. ಇಲ್ಲಿ ಬಾ; ನಮ್ಮನ್ನೂ ಒಯ್ಯಿ ’ ಎಂದು ರೇನಿಯು ಚೀರಿಕೊಂಡಿತು. ಆ ತಾಯಿಯ ಮುಖದ ಮೇಲೆ ತಲೆಗೂದಲು ಬಿದ್ದಿದ್ದವು; ಬಟ್ಟೆಯೆಲ್ಲ ಹರಿದು ಚಿಂದಿ ಚಿಂದಿ ಯಾಗಿತ್ತು. ಕಾಲುಗಳು ರಕ್ತಬಂಬಾಳವಾಗಿದ್ದವು. ಇಂಥ ಅವಸ್ಥೆಯಿಂದಲೇ

ಅವಳು ಮುಗ್ಗುತ್ತ ಎಡವುತ್ತ ಸಾಗಿದಳು. ಸಿಮೋರೇಡಿನ್ ಮತ್ತು ಗಾವೆನ್‌ರು ಅಲ್ಲಿಯೇ ನಿಂತಿದ್ದರು. ಅವರ ಆಟವೂ ಏನೂ ನಡೆಯುವಂತಿರಲಿಲ್ಲ. ಸಿಪಾಯಿಗಳ ತಂಡವೇ ಮೇಲಿತ್ತು. ಬೆಂಕಿಯ ಝಳವು ಅಸಹನೀಯವಾಗಿತ್ತು. ಅದರ ಪರಿವೆಯೇ ಯಾರಿಗೂ ಇದ್ದಂತಿರಲಿಲ್ಲ. ಮೂರು ಅಂತಸ್ತು ಹತ್ತಿ ಹೋಗಬೇಕಾಗಿತ್ತು. ಹೇಗೆ ಹೋಗಬೇಕೆಂಬ ಉಪಾಯವೇ ಯಾರಿಗೂ ತೋಚದಾಗಿತ್ತು.

ನೆತ್ತರದಿಂದಲೂ ಬೆವರಿನಿಂದಲೂ ತೋಯ್ದು ಹೋದ ರೇಡೋ ಮುನ್ನುಗ್ಗಿದನು. ಅವನ ಕಣ್ಣಿಗೆ ಆ ಹೆಣ್ಣುಮಗಳು ಕಾಣಿಸಿದಳು. "ಏನಿದು ! ಗುಂಡು ಬಡಿದ ಹೆಂಗಸು ಅಲ್ಲವೇ ? ಒಳ್ಳೆಯದಾಯಿತು. ಒಮ್ಮೆ ಮೃತ್ಯುವಿನಿಂದ ಪಾರಾದಿಯಲ್ಲ !" ಎಂದು ಅವನೆಂದನು.

"ನನ್ನ ಮಗುಗಳು !" ಎಂದು ಅವಳು ಚೀರಿಕೊಂಡಳು.

ರೇಡೋ ಮೇಲೇರಿ ಹೋಗುವ ಯತ್ನಮಾಡಿದನು; ಆದರೆ ಸಾಧ್ಯವಾಗಲಿಲ್ಲ. ಹಲ್ಲುಗಳಿಂದ ಬೆರಳುಗಳನ್ನು ಕಚ್ಚಿಕೊಂಡನು. ಆದರೆ ಏರಿ ಹೋಗುವ ಮಾರ್ಗವೇನೂ ತೋಚಲೊಲ್ಲದು. ಅವನು ಹಿಂದಿರುಗಿದನು. ಬೆಂಕಿಯು ಹೆಚ್ಚು ಹೆಚ್ಚಾಗಿ ಹೊತ್ತುತ್ತಲೇ ಇತ್ತು. ಆ ಮೂರೂ ಮಗುಗಳ ಮೊಗಗಳು ಚಿತ್ರದಲ್ಲಿ ಬರೆದಂತೆ ಕಿಡಿಕಿಯಲ್ಲಿ ಕಾಣುತ್ತಿದ್ದವು. ರೇಡೋ ಆಕಾಶದ ಕಡೆಗೆ ಮೋರೆ ತಿರುವಿ ಹುಚ್ಚನಂತೆ "ಏನು? ಆಕಾಶದಲ್ಲಿಯೂ ದಯೆಮಾಯೆ ಇರುವದಿಲ್ಲವೆ?" ಎಂದುಕೊಂಡನು.

ಆ ತಾಯಿ ಸದ್ಗದಿತಳಾಗಿ ಎರಡೂ ಕೈಗಳನ್ನು ಮುಗಿದುಕೊಂಡು ದೇವರನ್ನು ಪ್ರಾರ್ಥಿಸಿಕೊಳ್ಳುತ್ತ "ದೇವಾ ನಿನಗೆ ದಯೆ ಬಾರದಿದ್ದರೆ ಇನ್ನಾರಿಗೆ ಬರಬೇಕು ?" ಎಂದು ಆಕ್ರೋಶಿಸಿದಳು. ಬೆಂಕಿಯ ಆರ್ಭಟವು ಆಟೋಪಿಸುವಂತಿರಲಿಲ್ಲ. ಆ ಜನಸಮುದಾಯವೆಲ್ಲವೂ ಬೆದರಿ ಹೋಗಿತ್ತು. ಮಗುಗಳು ಮಾತ್ರ 'ಅವ್ವಾ, ಅವ್ವಾ' ಎಂದು ಒಂದೇ ಸವನೆ ಕೂಗಿಕೊಳ್ಳುತ್ತಿದ್ದವು. ಅಷ್ಟರಲ್ಲಿ ಒಮ್ಮಿಂದೊಮ್ಮೆಲೆ ಆ ಕಿಡಿಕಿಯ ಹತ್ತಿರ ಒಂದು ಆಕೃತಿಯು ಕಾಣತೊಡಗಿತು. ಎಲ್ಲರ ಲಕ್ಷ್ಯವು ಆ ಆಕೃತಿಯ ಕಡೆಗೆ ಸೆಳೆಯಲ್ಪಟ್ಟಿತು. ಆ ಭಭಾಳಿಸುವ ಬೆಂಕಿಯ ನಟ್ಟನಡುವೆ ಆ ಆಕೃ

ತಿಯ ಬಿಳಿಗೂದಲಿನ ತಲೆಯು ಕಾಣಿಸಿದ್ದರಿಂದ ಲ್ಯಾಂಟ್‌ನೆಕ್‌ನ ವ್ಯತಿರಿಕ್ತ ಯಾರೂ ಇರಲಾರರೆಂದು ಆ ಜನಸಮೂಹ ಭಾವಿಸಿತು. ಅವನು ಸ್ವಲ್ಪ ಹೊತ್ತು ಕಾಣಿಸಿಕೊಂಡು ಮರೆಯಾದನು; ಮರೆಯಾದವನು ಪುನಃ ಕಾಣಿಸಿಕೊಂಡನು.

ಆ ನಿರ್ಭೀತನಾದ ಮುದುಕನು ಕಿಡಿಕಿಯಲ್ಲಿ ನಿಂತುಕೊಂಡು ನಿಚ್ಚಣಿಕೆಯನ್ನು ಸರಿಸಲು ತೊಡಗಿದ್ದನು. ಅದು ವಾಚನಾಲಯದಲ್ಲಿ ಬಿದ್ದಿತ್ತು. ಅವನು ಅದನ್ನು ಕಸುವಿನಿಂದ ಕಿಡಿಕಿಯ ಕಡೆಗೆ ಜಗ್ಗಿದನು. ಒಂದು ಕೈಯಿಂದ ನಿಚ್ಚಣಿಕೆಯನ್ನು ಹಿಡಿದು ಕಿಡಿಕಿಯಲ್ಲಿ ಅದನ್ನು ಜೋತು ಬಿಡುವ ಸಾಹಸವನ್ನು ಮಾಡುತ್ತಿದ್ದನು. ರೇಡೋ ಆ ನಿಚ್ಚಣಿಕೆಯು ಆಟೋಕಿನಲ್ಲಿ ಬಂದಿತೆಂದು ತಿಳಿದು ತನ್ನ ಕೈಗಳನ್ನು ಚಾಚಿ ಸಾಗರಬಿದ್ದು ಪ್ರಜಾಪಕ್ಷಕ್ಕೆ ಜಯವಾಗಲಿ' ಎಂದು ಗಟ್ಟಿಯಾಗಿ ಗುಡುಗು ಹಾಕಿದನು. ಅಷ್ಟರಲ್ಲಿ ಮಾರ್ಕ್ವಿಸನು "ರಾಜಪಕ್ಷಕ್ಕೆ ಜಯವಾಗಲಿ" ಎಂದು ಕೂಗಿದನು.

'ಏನು ಹಾಗೆ ಮೂರ್ಖನಂತೆ ಬಡಬಡಿಸಿದರೆ? ಅದಿರಲೊಲ್ಲದೇಕೆ, ನೀನು ಮಾತ್ರ ದಯಾಳುವಾದ ದೇವದೂತನಾಗಿರುವಿ ಎಂಬದರಲ್ಲಿ ಯಾವ ಸಂಶಯವೂ ಇಲ್ಲ' ಎಂದು ರೇಡೋ ಕೂಗಿದನು.

ನಿಚ್ಚಣಿಕೆಯು ನೆಲಕ್ಕೆ ಮುಟ್ಟಿತು. ಅದನ್ನು ಗಟ್ಟಿಯಾಗಿ ಊರಿ ರೇಡೋ ನಿಚ್ಚಣಿಕೆಯನ್ನೇರತೊಡಗಿದನು ಅವನನ್ನು ಇಪ್ಪತ್ತು ಜನರು ಹಿಂಬಾಲಿಸಿದರು. ಒಂದೊಂದು ಹಲ್ಲನ್ನು ಏರುತ್ತೇರುತ್ತ ಅವರು ಮೇಲೇರತೊಡಗಿದ್ದರಿಂದ ಮನುಷ್ಯರ ನಿಚ್ಚಣಿಕೆಯೇ ಆದಂತೆ ಕಾಣುತ್ತಿತ್ತು. ರೇಡೋ ಎಲ್ಲರಕ್ಕೂ ಮುಂದಿದ್ದನು. ಅವನ ಮುಖವು ಬೆಂಕಿಯ ಕಡೆಗಾಗಿತ್ತು. ಒಮ್ಮಿಂದೊಮ್ಮೆ ಗಲಿಬಿಲಿಯೇ ಎದ್ದಿತು. ಎಲ್ಲರೂ ಅತ್ತಿತ್ತ ಧಾವಿಸತೊಡಗಿದರು. ಕ್ಷಣಾರ್ಧದಲ್ಲಿಯೇ ಅಲ್ಲಲ್ಲಿ ಸಿಪಾಯಿಗಳೇ ಕಾಣತೊಡಗಿದರು.

ಮರೆಯಾಗಿದ್ದ ಲ್ಯಾಂಟ್‌ನೆಕ್‌ನು ಮೂರೂ ಮಗುಗಳನ್ನೆತ್ತಿಕೊಂಡು ಕಾಣಿಸಿಕೊಂಡನು. ಆ ದೃಶ್ಯವನ್ನು ಕಂಡು ಎಲ್ಲರ ಕೈಗಳು ತಮ್ಮಿಂದ

ತಾವೇ ಚಪ್ಪಾಳೆಯಿಕ್ಕತೊಡಗಿದವು. ಮೊಟ್ಟವೆ ಊದಲಿಗೆ ಗ್ರ್ಯಾಸ್‌ಲ್ಯಿಲಿನನ್ನು ರೇಡೋನ ಕೈಯೊಳಗೆ ಕೊಟ್ಟನು. ರೇಡೋನು ತನ್ನ ಕೆಳಗಿನವನ ಕೈಗೆ, ಅವನ ಕೆಳಗಿನವನು ತನ್ನ ಕೆಳಗಿನವನ ಕಡೆಗೆ ಕೊಡುತ್ತಾ ಕೈಯಿಂದ ಕೈಗೆ ಬಂದು ಅದು ಭೂಮಿಯನ್ನು ಮುಟ್ಟಿಯೇ ಬಿಟ್ಟಿತು. ಆ ನಂತರ ರೇನಿಯನ್ನು ಕೊಡಲಾಯಿತು. ಅದೂ ಮೊದಲಿನಂತೆ ಒಬ್ಬರ ಕೈಯಿಂದ ಇನ್ನೊಬ್ಬರ ಕೈಗೆ ಬರುತ್ತ ನೆಲವನ್ನು ತಲುಪಿತು. ಲ್ಯಾಂಟ್‌ನೆಕ್‌ನು ಪುನಃ ಬೆಂಕಿಯೊಳಗೆ ಕಾಣದಾಗಿ ಜಾರ್ಜೆಟ್‌ಳ ಕಡೆಗೆ ಹೋದನು. ಅದು ಅವನನ್ನು ಕಂಡು ಕುಲುಕುಲು ನಕ್ಕಿತು. ಕಲ್ಲೆದೆಯುವನಾದ ಆ ಮುದುಕನ ಕಣ್ಣು ನೀರಿನಿಂದ ತುಂಬಿದವು. ಗದ್ಗದಿತನಾಗಿ 'ಮಗು, ನಿನ್ನ ಹೆಸರೇನು?' ಎಂದು ಕೇಳಿದನು.

ಅದು 'ಜಾರ್ಜೆಟ್' ಎಂದು ಹೇಳಿತು.

ಅವನು ಅದನ್ನು ಬಗಲಲ್ಲೆತ್ತಿಕೊಂಡನು. ಅದು ನಗುತ್ತಲೇ ಇತ್ತು. ನಗುಮುಖವುಳ್ಳ, ನಿಷ್ಕಲಂಕ ವೃತ್ತಿಯುಳ್ಳ ಮಗುವಿನನ್ನು ಕಂಡು ಆ ಮುದುಕನ ಕಠೋರ ಹೃದಯವು ಪ್ರೇಮದಿಂದ ಕರಗಿಹೋಯಿತು. ಅದನ್ನು ರೇಡೋನ ಕೈಗೆ ಕೊಡುತ್ತಿರುವಾಗ ಅದರ ಗಲ್ಲಗಳನ್ನು ಹಿಡಿದು ಮುದ್ದಾಡಿದನು. ಇದನ್ನು ಕಂಡು ಆ ಜನಸಮುದಾಯದ ಆನಂದಕ್ಕೆ ಪಾರಾವಾರವಿಲ್ಲದಾಯಿತು. ಈ ಆನಂದದ ಗೊಂದಲದಲ್ಲಿ ಆ ಮಗುವೂ ನೆಲವನ್ನು ಮುಟ್ಟಿಬಿಟ್ಟಿತ್ತು.

ಆ ತಾಯಿಯು ನಿಚ್ಚಣಿಕೆಯ ಸಮೀಪದಲ್ಲಿ ಶೂನ್ಯಚಿತ್ತಳಾಗಿ ನಿಂತಿದ್ದಾಳೆ. ಅವಳಿಗೆ ಹರ್ಷವಾಯುವಾಗಿತ್ತು. ಒಂದು ಚಣದಲ್ಲಿ ಅವಳಿಗೆ ತಾನು ಪಾತಾಳಲೋಕದಿಂದ ಸ್ವರ್ಗಲೋಕಕ್ಕೆ ಬಂದಂತೆ ಭಾಸವಾಯಿತು. ಅತ್ಯಂತ ಆನಂದದಿಂದ ಅವಳು ಕೈಗಳನ್ನು ಮುಂದೆ ಚಾಚಿದಳು. ಮೂರೂ ಮಗುಗಳನ್ನು ಎದೆಗವಚಿಕೊಂಡಳು; ಮುದ್ದಾಡಿದಳು. ಎತ್ತಿಳಿಸಿದಳು; ತನ್ನ ದೈವವನ್ನು ಕೊಂಡಾಡಿದಳು. ಆಮೇಲೆ ಅವಳು ಹುಚ್ಚು ನಗು ನಗುತ್ತಲೇ ಮೂರ್ಛೆ ಬಂದು ನೆಲಕ್ಕುರುಳಿದಳು.

"ಎಲ್ಲರೂ ಬದುಕಿಕೊಂಡರು" ಎಂಬ ಧ್ವನಿಯು ಕೇಳಬಂದಿತು. ಆ ಮುದುಕನೊಬ್ಬನನ್ನು ಬಿಟ್ಟು ಉಳಿದವರೆಲ್ಲರೂ ಸತ್ತಂತಾಗಿದ್ದರು. ಆದರೆ ಪಾಪ! ಅವನನ್ನು ವಿಚಾರಿಸುವವರೇ ಗತಿಯಿರಲಿಲ್ಲ. ಅವನೂ ತನ್ನ ಕಾಳಜಿಯನ್ನು ಅಷ್ಟೊಂದು ಮಾಡಿರಲಿಲ್ಲ. ಅವನು ಕಿಡಿಕಿಯಲ್ಲಿ ಸ್ವಸ್ಥ ಚಿತ್ತನಾಗಿ ವಿಚಾರಮಗ್ನನಾಗಿದ್ದನು. ಆ ಬೆಂಕಿಯ ಕಿಡಿಗಳು ಮುಂದೇನು ಮಾಡುವವೋ ಎಂಬದನ್ನು ನೋಡುತ್ತ ನಿಂತಂತಾಗಿತ್ತು. ಆಮೇಲೆ ಅವನು ಗಡಿಬಿಡಿಯನ್ನು ಮಾಡದೆ ಸಾವಕಾಶವಾಗಿ ಕಿಡಿಕಿಯೊಳಗಿಂದ ಪಾರಾಗಿ ನಿಚ್ಚಣಿಕೆಯ ಒಂದೊಂದೇ ಹಲ್ಲುಗಳನ್ನಿಳಿಯತೊಡಗಿದನು. ಅವನ ಮುಖಚರ್ಯೆಯು ಶಾಂತವೂ ನಿರ್ವಿಕಾರವೂ ಆಗಿತ್ತು. ಅವನ ಬೆನ್ನು ಹಿಂದೆ ಅಗ್ನಿಯು ಆರ್ಬಟಿಸುತ್ತಿದ್ದಿತು; ಮುಂದೆ ಆಳವಾದ ಕಂದುಕವಿತ್ತು. ನಿಚ್ಚಣಿಕೆಯೇರಿದವರೆಲ್ಲರೂ ಕೆಳಗಿಳಿದರು. ಪ್ರತಿಯೊಬ್ಬರೂ ಅವನನ್ನು ಭಯಾನಕ ದೃಷ್ಟಿಯಿಂದ ನೋಡುತ್ತಿದ್ದರು. ಆ ಮನುಷ್ಯನ ಮುಖಮಂಡಲದಲ್ಲಿ ಒಂದು ಪ್ರಕಾರದ ಗಂಭೀರತೆಯು ಆವರಿಸಿತ್ತು. ಅವನು ಅಂಥ ಅಂಧಕಾರದಲ್ಲಿ ನಿರ್ಭಯದಿಂದ ನಿಚ್ಚಣಿಕೆಯನ್ನಿಳಿಯಹತ್ತಿದ್ದನು. ಅವನ ಕಠೋರ ಮುಖಚರ್ಯೆಯ ಮೇಲೆ ಯಾವ ತರದ ವಿಕಾರದ ಪ್ರತಿಬಿಂಬವು ಒಡಮೂಡಿರಲಿಲ್ಲ. ಅವನ ಕಣ್ಣುಗಳು ನಿಶ್ಚಲವೂ ಶಾಂತವೂ ಆಗಿದ್ದವು. ಅವನ ಕಾಲ್ಕೆಳಗೆ ನಿಚ್ಚಣಿಕೆಯು ಅತ್ತಿತ್ತ ಹೊಯ್ದಾಡುತ್ತಿತ್ತು.

ಅವನ ಕಾಲು ನೆಲಕ್ಕೆ ಮುಟ್ಟಿದ್ದವೋ ಇಲ್ಲವೋ ಅನ್ನುವಷ್ಟರಲ್ಲಿ ಅವನ ಹತ್ತಿರ ಮನುಷ್ಯನೊಬ್ಬನು ಬಂದು ಅವನ ಹೆಗಲ ಮೇಲೆ ಕೈಯಿರಿಸಿ ಅವನ ಕಡೆಗೆ ಹೊರಳಿದನು.

"ನಾನು ನಿನ್ನನ್ನು ಸೆರೆಹಿಡಿದಿದ್ದೇನೆ" ಎಂದು ಸಿಮೋರೆಡಿನ್ನೆಂದನು.

"ನೀವೇನು ಮಾಡುವಿರೋ ಅದಕ್ಕೆ ನಾನು ಒಪ್ಪುತ್ತೇನೆ" ಎಂಬ ಪ್ರತ್ಯುತ್ತರವೂ ಅವನ ಬಾಯಿಂದ ಬಂದಿತು.



## ೨೧.

ಲ್ಯಾಂಟ್‌ನೆಕ್‌ನನ್ನು ಬಂಧಿಸಿ ದೂರ ಒಯ್ದರು. ಸಿಮೋರೆಡಿನ್‌ನ ನೇತೃತ್ವದಲ್ಲಿ ಲಾಟೋರ ಕಿಲ್ಲೆಯ ಮೊದಲನೆಯ ಅಂತಸ್ತಿನ ಬುಡದಲ್ಲಿರುವ ಕತ್ತಲೆಕೋಣೆಯನ್ನು ತೆರೆದು ಮಿಣಿ ಮಿಣಿ ದೀಪ, ನೀರಿನ ಪಾತ್ರೆ, ರೊಟ್ಟಿಯನ್ನಿರಿಸಲಾಯಿತು. ನೆಲದ ಮೇಲೆ ಹುಲ್ಲಿನ ಹೊರೆಯನ್ನು ಹರವಿ ಲ್ಯಾಂಟ್‌ನೆಕ್‌ನನ್ನು ಒಳಹೊಗಿಸಿ ಬಾಗಿಲಕ್ಕೆ ಕೀಲಿಯನ್ನು ಜಡಿದರು. ಆಮೇಲೆ ಸಿಮೋರೆಡಿನ್‌ನು ಗಾವೆನ್‌ನ ಶೋಧಾರ್ಥವಾಗಿ ಅಲ್ಲಿಂದ ಹೊರಟನು. ಅಷ್ಟೊತ್ತಿಗೆ ೧೧ ಗಂಟೆಯಾಯಿತು.

ಸಿಮೋರೆಡಿನ್‌ನು ಗಾವೆನ್‌ನಿಗೆ 'ನಾನು ಸೈನ್ಯಖಾತೆಯ ಕೋರ್ಟಿನಲ್ಲಿ ಲ್ಯಾಂಟ್‌ನೆಕ್‌ನ ವಿಚಾರಣೆಯನ್ನು ನಡೆಸುವೆನು. ನೀನು ಅಲ್ಲಿರಕೂಡದು. ಯಾಕೆಂದರೆ ನೀವಿಬ್ಬರೂ ಗಾವೆನ್ ಕುಟುಂಬಕ್ಕೆ ಸೇರಿದವರು. ನೀನು ಅವನ ಸಮೀಪದ ಸಂಬಂಧಿಕನಾದುದರಿಂದ ನಿನ್ನನ್ನು ನ್ಯಾಯಾಧೀಶನೆಂದು ನೇಮಿಸಲು ಬರುವಂತಿಲ್ಲ. ನಾನು, ರೇಡೋ, ಗುಶೆಪ್ ಮೂವರೂ ಕೂಡಿ ವಿಚಾರಣೆಯನ್ನು ನಡೆಯಿಸುತ್ತೇವೆ. ಆದರೆ ಇದರಲ್ಲಿ ನಿನಗೆ ಯಾವ ತರದ ಸಂಬಂಧವೂ ಇರಲಾರದು. ನಾವು ಜನಸಭೆಯ ಆಜ್ಞಾನುಸಾರವಾಗಿ ವರ್ತಿಸುತ್ತೇವೆ. ನಾಳೆ ವಿಚಾರಣೆ. ನಾಡದು ಗಲ್ಲು. ಆಚೆನಾಡದು ಮೆಂಡಿಯ ಕೊನೆ' ಎಂದು ನಿರ್ಧಾರವಾಗಿ ಹೇಳಿಬಿಟ್ಟನು.

ಗಾವೆನ್‌ನು ಪಿಟ್ಟೆನಲಿಲ್ಲ. ಸಿಮೋರೆಡಿನ್‌ನಿಗೆ ಅನೇಕ ಕೆಲಸಗಳಿದ್ದುದರಿಂದ ಅವನೊಬ್ಬನನ್ನೇ ಬಿಟ್ಟು ಅವನು ಅಲ್ಲಿಂದ ಕಾಲ್ದೆಗೆದನು. ಸಿಮೋರೆಡಿನ್‌ನಿಗೆ ವಿಚಾರಣೆಯ ಸ್ಥಳವನ್ನೂ ಕಾಲವನ್ನೂ ನಿಶ್ಚಯಗೊಳಿಸಬೇಕಾಗಿತ್ತು.

ಅರಣ್ಯದೊಳಗೆ ತಣ್ಣನ್ನ ಗಾಳಿಯು ಸೂಂಯಿಗುಡುತ್ತಿತ್ತು. ಗಾವೆನ್‌ನು ಗುಶೆಪ್‌ನ ಮೇಲೆ ಉಳಿದ ಕೆಲಸವನ್ನು ಹೊರಿಸಿ, ತನ್ನ ಡೇರೆಯ ಕಡೆಗೆ ತೆರಳಿದನು. ಡೇರೆಯೊಳಗೆ ಹೋದವನೆ ತನ್ನ ಅಧಿಕಾರದ ಉಡುಪಿನ ನಿಲುವಂಗಿಯನ್ನು ತೊಟ್ಟುಗೊಂಡನು. ನೆತ್ತರದಿಂದ ಸಾರಿಸಿದ ದಾಳಿ

ಯಾದ ಸ್ಥಳಕ್ಕೆ ಹೋಗಿ ಅತ್ತಿತ್ತ ಸುಳಿದಾಡತೊಡಗಿದನು. ಹೊತ್ತಿದ ಬೆಂಕಿಯು ಇನ್ನೂ ಉರಿಯುತ್ತಲಿತ್ತು. ಆದರೆ ಅದರ ಕಡೆಗೆ ಯಾರ ಲಕ್ಷ್ಯವೂ ಸೆಳೆದಿರಲಿಲ್ಲ. ರೇಡೋನು ಆ ತಾಯಿ-ಮಗುಗಳ ಹತ್ತಿರವಿದ್ದನು ಆ ಕಟ್ಟಡವು ಸುಟ್ಟು ಭಸ್ಮವಾಗಿತ್ತು. ಸೈನಿಕರು ಸತ್ತವರಿಗಾಗಿ ಕುಣಿಗಳನ್ನು ತೋಡುತ್ತಿದ್ದರು. ಗಾಯಗೊಂಡಂಥವರ ಶುಶ್ರೂಷೆ ಬೇರೊಂದೆಡೆಯಲ್ಲಿ ನಡೆದಿತ್ತು. ಮೇಲಿನಂತಸ್ತದಲ್ಲಿ ಸತ್ತುಬಿದ್ದವರನ್ನು ಕೆಳಗೆ ತರುವ ಕೆಲಸವೂ ಸಾಗಿತ್ತು. ಸಿಪಾಯಿಗಳು ರಣಭೂಮಿಯಲ್ಲಿರುವ ಹೊಲಸನ್ನು ತೆಗೆಯತೊಡಗಿದ್ದರು. ಇಷ್ಟೆಲ್ಲ ಸಾಗುತ್ತಿದ್ದರೂ ಗಾವೆನ್‌ನ ಲಕ್ಷ್ಯವು ಯಾವುದರ ಕಡೆಗೂ ಇರಲಿಲ್ಲ.

ಅಂಥ ಕತ್ತಲೆಯಲ್ಲಿಯೂ ಉಧ್ವಸ್ತವಾದ ಕಿಲ್ಲೆಯು ೨೦೦ ಫೂಟಿನ ಅಂತರವಲ್ಲಿದ್ದರೂ ಎಲ್ಲವೂ ನಿಚ್ಚಳವಾಗಿ ಕಾಣುತ್ತಿತ್ತು. ಅದೇ ಸ್ಥಳದಲ್ಲಿ ಮೂರು ತಾಸಿನ ಮೊದಲು ರಣದೇವತೆಯ ತಾಂಡವ ನೃತ್ಯ ನಡೆದಿತ್ತು. ಅಂಥಲ್ಲಿರುವ ಕತ್ತಲೆಯ ಕೋಣೆಯಲ್ಲಿ ಲ್ಯಾಂಟ್‌ನೆಕ್‌ನನ್ನು ಸೆರೆಯಲ್ಲಿಡಲಾಗಿತ್ತು. ಗಾವೆನ್‌ನು ಶೂನ್ಯಚಿತ್ತದಿಂದ ಇದೆಲ್ಲವನ್ನು ನೋಡುತ್ತಿದ್ದರೂ ಅವನ ಕಿವಿಯಲ್ಲಿ ಮಾತ್ರ 'ನಾಳೆ ವಿಚಾರಣೆ; ನಾಡಿದ್ದು ಗಲ್ಲು' ಎಂಬ ಶಬ್ದಗಳು ಒಂದೇ ಸವನೆ ಗುಂಯಿಗುಡುತ್ತಿದ್ದವು.

ಧಗಧಗಿಸುತ್ತಿರುವ ಬೆಂಕಿಗೆ ನೀರು ಹೊಯ್ದು ನಂದಿಸುವ ಪ್ರಯತ್ನ ನಡೆದಿದ್ದರೂ ಅಗ್ನಿನಾರಾಯಣನು ನಡುನಡುವೆ ಭುಗಿಲೆಂದು ಪ್ರಕಟಗೊಳ್ಳುವದನ್ನು ಬಿಟ್ಟಿರಲಿಲ್ಲ. ತೊಲೆ, ಜಂತೆಗಳು ಕಡಕೊಂಡು ಬೀಳುವ ಸಪ್ಪಳವು ಆಗಾಗ ಕೇಳುತ್ತಲೇ ಇತ್ತು. ಧಡಧಡಲೆಂದು ಬೀಳುವ ಗೋಡೆಗಳ ಸದ್ದು ಇನ್ನೂ ನಿಂತಿರಲಿಲ್ಲ. ಗಾಳಿ ಬಿಟ್ಟಾಗ ಬೆಂಕಿಯ ಕಿಡಿಗಳು ತೂರಿಕೊಂಡು ಅತ್ತಿತ್ತ ಹಾರಾಡುವ ದೃಶ್ಯವೂ ಕಣ್ಣಿಗೆ ಬೀಳುತ್ತಿತ್ತು. ಗಾವೆನ್‌ನು ವಿಚಾರಗಳ ತಂದ್ರಿಯಲ್ಲಿ ಮಗ್ನನಾಗಿದ್ದರಿಂದ ಅವನ ವರ್ತನೆಯಲ್ಲಿ ಏನೋ ಒಂದುತರದ ಬದಲಾವಣೆಯಾದಂತೆ ಕಾಣಬರುತ್ತಿತ್ತು. ಲ್ಯಾಂಟ್‌ನೆಕ್‌ನೂ ಈ ಮೊದಲಿನ ಲ್ಯಾಂಟ್‌ನೆಕ್‌ನಾಗಿರಲಾರನೆಂಬ ಕಲ್ಪನೆಯೂ ಗಾವೆನ್‌ನ ಕಣ್ಮುಂದೆ ಸುಳಿಯದಿರಲಿಲ್ಲ. ಸ್ವಪ್ನದಲ್ಲಿಯೂ ಯಾವ ಸಂಗ

ತಿಯು ಅಶಕ್ಯವೆಂದು ತೋರಿತ್ತೊ ಅಂಥ ಸಂಗತಿಯು ಈಗ ಸಂಭವಿಸಿದ್ದ ರಿಂದ ಗಾವೆನ್‌ನ ಮನಸು ವ್ಯಗ್ರಗೊಂಡಿತ್ತು.

ಪ್ರಜಾಪಕ್ಷದ ಗಾವೆನ್‌ನು ಆತ್ಮವಿಶ್ವಾಸಿಯೂ ಪ್ರಾಮಾಣಿಕನೂ ಆಗಿದ್ದನು. ಅವನ ಅಂತಃಕರಣದಲ್ಲಿ ನ್ಯಾಯದ ಪ್ರಖರವಾದ ಜ್ಯೋತಿಯು ಬೆಳಗುತ್ತಲಿತ್ತು. ಭೂತದಯೆಯನ್ನು ಕ್ಷುಲ್ಲಕ ಸಂಗತಿಗಳ ಮೇಲೂ ತೋರಿಸಬೇಕೆಂಬ ಭಾವನೆಯು ಅವನಲ್ಲಿ ದೃಢವಾಗುತ್ತ ನಡೆದಿತ್ತು. ಸಂಭವಿಸಿದ ಸಂಗತಿಯು ಬಹಳ ಮಹತ್ವದಾಗಿದ್ದರೂ ಸಿಮೋರೆಡಿನ್‌ನು 'ಇದರಲ್ಲಿ ನಿನ್ನ ಸಂಬಂಧವಿಲ್ಲ'ವೆಂದುದರಿಂದ ಗಾವೆನ್‌ನನಿಗೆ ಬಹಳ ವೇದನೆಯಾಗಿತ್ತು. ಐಹಿಕ ಯುದ್ಧ ಮುಗಿದ ಮೇಲೆ ಪಾರಲೌಕಿಕ ಯುದ್ಧ ದಿಂದ ಗಾವೆನ್‌ನ ಚಿತ್ತವು ಗ್ರಸ್ತವಾಯಿತು. ಸತ್ಯಾಸತ್ಯತೆಯ ಜಗಳವು ಸುರುವಾಯಿತು. ವಜ್ರದಂಥ ಕಠಿಣ ಅಂತಃಕರಣವನ್ನೂ ಗೆದೆಯುವಂತಾ ಯಿತು. ಎಂಥ ದುಷ್ಟ ಮನುಷ್ಯನಿದ್ದರೂ ಅವನಲ್ಲಿರುವ ಕ್ರೌರ್ಯ, ಗರ್ವ, ಹಟಮಾರಿತನಗಳಿದ್ದರೂ ಕೊನೆಗೆ ಅವನು ಭೂತದಯೆಗೆ ಬಲಿಯಾಗಲೇ ಬೇಕಾಗುತ್ತದೆ. ಭೂತದಯೆಯು ನಿಷ್ಠುರ ಮನುಷ್ಯರನ್ನೂ ತನ್ನ ಬಲಿ ಯಲ್ಲಿಹಾಕಿಕೊಳ್ಳಬಲ್ಲದು. ಅಷ್ಟು ಶಕ್ತಿಸಂಪನ್ನನಾದ ಭೂತದಯೆಯಿಂದ ಗಾವೆನ್‌ನ ದೃಷ್ಟಿಯು ಬೆಳಗಿತು; ಅವನ ಅಂತಃಕರಣವು ಕರಗಿತು.

ಗಾವೆನ್‌ನು ಆ ಮೂರೂ ಮಗುಗಳನ್ನು ನೋಡಿದನು. ಆ ಮಗ ಗಳು ನಗುತ್ತ ಕೆಲೆಯುತ್ತಿದ್ದವು. ಅವುಗಳ ಸಲುವಾಗಿ ಹೊಡೆಯುವದು, ಕೊಲ್ಲುವದು, ಬೆಂಕಿ ಹಚ್ಚುವದು ಮೊದಲಾದ ವಿಧ್ವಂಸಕ ಚಟುವಟಿಕೆ ಗಳು ಸಾಗಿಯೇ ಇದ್ದವು. ಕೊನೆಗೆ ಈ ರಾಕ್ಷಸೀ ಕೃತ್ಯಗಳ ಪರಾಭವ ವಾಗಿ ಮಗುಗಳು ಜಯವನ್ನು ಸಂಪಾದಿಸಿದವು. ಗಾವೆನ್‌ನು ದುರುದ್ದೇಶ ದಿಂದ ಹಚ್ಚಿದ ಬೆಂಕಿಯ ಅನಾಹುತವು ವ್ಯರ್ಥವಾದುದನ್ನು ಕಂಡನು; ಆಸೂರೀವ್ಯೂಹದ ಸಮೂಲ ನಾಶವಾಯಿತೆಂಬುದರ ಅರಿವು ಅವನ ದೃಷ್ಟಿಗೆ ಬಿದ್ದಿತು. ಯುದ್ಧದ ನಿಷ್ಫಲತೆ, ಬುದ್ಧಿಯ ಭ್ರಷ್ಟತೆ, ಕ್ರೌರ್ಯದ ನಿರರ್ಥಕತೆಗಳೆಲ್ಲವೂ ಅವನ ಕಣ್ಮುಂದೆ ಕಟ್ಟಿಯೇ ಇದ್ದವು. ಈ ನಿರುಪದ್ರವಿ ಗಳಾದ ಅನಾಥ ಬಾಲಕರು ಈ ರಾಕ್ಷಸೀ ಕೃತ್ಯಕ್ಕೆ ಬಲಿಯಾಗಬೇಕೆಂದು

ಯಾರಿಗೆನಿಸಿರಬೇಕು? ಅವು ಯಾವುದೂ ದುಷ್ಕೃತ್ಯ ಮಾಡದಿರುವದರಿಂದ ದುಷ್ಕೃತ್ಯದ ಪ್ರಾಯಶ್ಚಿತ್ತವು ಅವುಗಳಿಗಾಗಬೇಕೆಂಬದು ಎಲ್ಲಿಯ ನ್ಯಾಯ? ಮಗುಗಳೆಂದರೆ ನ್ಯಾಯ, ಸತ್ಯ ಮತ್ತು ಶುದ್ಧಿಗಳ ಅವತಾರವೇ ಆಗಿವೆ. ಪರಮಾತ್ಮನ ಸೇವಕನು ಅರ್ಭಕರ ಆತ್ಮದ ಸುತ್ತಲೂ ಒಂದೇ ಸವನೆ ಸಂಚರಿಸುತ್ತಾನೆ.

ಒಂದು ಕಡೆಗೆ ಅತ್ಯಂತ ದುಷ್ಟ, ನೀಚ, ಕ್ರೂರ, ಶಸ್ತ್ರಾಸ್ತ್ರಗಳಿಂದ ಸಜ್ಜಿತವಾದ ಸೈನ್ಯವು; ಇನ್ನೊಂದು ಕಡೆಗೆ ನಿರಪರಾಧಿಗಳಾದ ಮೂರು ಮಗುಗಳು—ಯುದ್ಧಕ್ಕೆ ಸನ್ನದ್ಧವಾಗಿದ್ದವು. ಆದರೆ ಆತ್ಮಶಕ್ತಿ, ನ್ಯಾಯ, ಸತ್ಯತೆಯ ಬಲದಿಂದ ನಿಶ್ಶಸ್ತ್ರ ಬಾಲಕರಿಗೆ ವಿಜಯವಾಯಿತು. ಆಸುರೀ ವೃತ್ತಿಯ ಜನರ ಪರಾಭವವು ಸಾತ್ವಿಕ ಮತ್ತು ನಿಶ್ಶಸ್ತ್ರರಾದವರಿಂದ ಇದೇ ರೀತಿ ಆಗುತ್ತಿರುತ್ತದೆ. ಜಗತ್ತಿನಲ್ಲಿ ಇಂಥ ನಿಯಮವೇ ಇರುತ್ತದೆ. ಶಸ್ತ್ರಾಸ್ತ್ರಗಳಿಂದ ಸನ್ನದ್ಧರಾದವರ ಮುಂದೆ ಯಾವ ಮನುಷ್ಯನು ಎದೆಯನ್ನು ತೆರೆದು ನಿಲ್ಲುತ್ತಾನೋ ಅಂಥವನಿಗೇ ಕೊನೆಗೆ ಜಯವು ಕಟ್ಟಿಟ್ಟ ಮಾತಾಗಿದೆ. ಆತ್ಮಶುದ್ಧಿಯುಳ್ಳ ನಿರಪರಾಧಿ ಜನರ ಮುಂದೆ ಯುದ್ಧದ ದ್ವೇಷದ ಪಾಡೇನು? ಸರ್ವ ಭೂತಮಾತ್ರಗಳಿಗೂ ಈ ಆತ್ಮಶುದ್ಧಿಯೊಂದೇ ತರಣೋಪಾಯವಾಗಿದೆ. ಈ ಯುದ್ಧವು ಮಾನವನ ಸದಸದ್ವಿವೇಕ ಬುದ್ಧಿಯ ಪ್ರೇರಣೆಯಿಂದ ಲ್ಯಾಂಟ್‌ನೆಕ್‌ನ ಮುಖಂಡತ್ವದಲ್ಲಿ ನಡೆದುದಾಗಿತ್ತು. ಅದರಂತೆ ಈಗ ಗಾವೆನ್‌ನ ಸದಸದ್ವಿವೇಕ ಬುದ್ಧಿಯಲ್ಲಿ ತಾಂಡವ ನಡೆದಿತ್ತು. ಮನುಷ್ಯನ ಅಂತಃಕರಣವು ಬಡಿದಾಡಲು ಒಂದು ಯೋಗ್ಯ ಸ್ಥಳವೇ ಆಗಿದೆ. ನಾವು ನಮ್ಮ ವಿಚಾರರೂಪೀ ದೇವಾಸುರರ ಗೊಂದಲದಲ್ಲಿ ಸಿಕ್ಕು ಬೀಳುತ್ತೇವೆ. ಅಂಥಲ್ಲಿ ಬಡಿದಾಟವೆದ್ದಿತೆಂದರೆ ಎಷ್ಟೋ ವೇಳೆ ಯುದ್ಧದ ಉನ್ಮಾದದಿಂದ ನಮ್ಮ ಅಂತಃಕರಣಕ್ಕೆ ಅಂಟಿಕೊಂಡು ಹಿಂದೆಮುಂದೆ ನೋಡುವಹೋ ಇಲ್ಲ. ಅದರಂತೆ ಗಾವೆನ್‌ನ ವಿಚಾರದ ತಾಕಲಾಟವು ರುದ್ರರೂಪವನ್ನು ತಾಳಿತ್ತು.

ಬಲಾಢ್ಯ ಸೈನಿಕರಿಂದ ಸುತ್ತುವರಿಯಲ್ಪಟ್ಟು ದುರ್ದೈವದ ಪಂಜರದಲ್ಲಿ ಸಿಗಬಿದ್ದ ಲ್ಯಾಂಟ್‌ನೆಕ್‌ನ ಚಿತ್ರವೂ ಗಾವೆನ್‌ನ ಮನಸಿನ ಮುಂದೆ

ಮೂಡಿತ್ತು. ಲ್ಯಾಂಟ್‌ನೆಕ್‌ನು ಅರಣ್ಯವನ್ನು ಸೇರಿ, ಅದರ ಒಡೆಯನಾಗಿ ಯುದ್ಧದ ಸಿದ್ಧತೆಯನ್ನು ಮಾಡಿಕೊಂಡು ಅಂಜಿಕ್ಯ ಸೇನಾಪತಿಯಾಗಿ ಮೆರೆದನು. ಗಾವೆನ್‌ನಿಗೆ ಜಯವು ದೊರೆತಿತು; ಆದರೂ ಲ್ಯಾಂಟ್‌ನೆಕ್‌ನಿಗೆ ಸ್ವಾಂತ್ರ್ಯ ಸಿಕ್ಕಿತು. ಆಗ ತನ್ನ ಸಂರಕ್ಷಣೆಯನ್ನು ಮಾಡಿಕೊಳ್ಳುವದು ಲ್ಯಾಂಟ್‌ನೆಕ್‌ಸಿಗೆ ಕಠಿಣವಾಗಿರಲಿಲ್ಲ. ಅವನನ್ನು ಹಿಡಿಯುವದು ಬಹಳೇ ದುರ್ಘಟವಾಗಿತ್ತು. ಬಲಿಯಲ್ಲಿ ಬಿದ್ದ ಸಿಂಹವು ಬಲಿಯನ್ನು ಹರಿದು ಹೊರ ಬಿದ್ದಿತು. ಆದರೆ ಪುನಃ ಬುದ್ಧಿ ಪೂರ್ವಕವಾಗಿ ಬಲಿಯಲ್ಲಿ ಬಂದು ಬಿದ್ದಿತು. ತನಗೆ ದೊರೆತ ಸ್ವಾತಂತ್ರ್ಯವನ್ನು ಲೆಕ್ಕಿಸದೆ ಅವನು ಸ್ವಯಂ ಸ್ಫೂರ್ತಿಯಿಂದ ಸಂಕಟಕ್ಕಿಡಾದನು. ಬೆಂಕಿಯೊಳಗೆ ಹೊಕ್ಕು ನಿಚ್ಚಣಿಕೆಯಿಂದ ಇಳಿಯುತ್ತಿರುವಾಗ ಅವನ ಧೈರ್ಯವನ್ನು ಕಣ್ಮುಟ್ಟ ನೋಡಿದ ಗಾವೆನ್‌ನಿಗೆ ಅತ್ಯಾಶ್ಚರ್ಯವಾಗಿತ್ತು. ಆ ಧೈರ್ಯವು ಎರಡನೆಯವರ ಪ್ರಾಣವನ್ನುಳಿಸಲು ಉಪಯೋಗವಾದರೂ ಅವನೇ ಸೆರೆಮನೆಯಲ್ಲಿ ಬೀಳಲು ಕಾರಣೀಭೂತವಾಯಿತು. ಅವನು ಇದೆಲ್ಲವನ್ನೇಕೆ ಮಾಡಬೇಕಿತ್ತು? ಆ ಮೂರು ಮಗುಗಳ ಜೀವವನ್ನು ಉಳಿಸಬೇಕೆಂದಲ್ಲವೇ? ಅದಕ್ಕಾಗಿ ಅವನಿಗೆ ದೊರೆಯಬಹುದಾದ ಬಹುಮಾನವಾದರೂ ಏನು?— ಗಲ್ಲಿನ ಶಿಕ್ಷೆಯಲ್ಲವೇ?

ಆ ಮಗುಗಳು ಅವನವೆನಬೇಕೇ? ಅದೂ ಅಲ್ಲ. ಆಪ್ತೇಷ್ಟರವೆನಬೇಕೆ? ಅದೂ ಅಲ್ಲ. ಅವನ ಸರಿಸಮಾನ ಯೋಗ್ಯತೆಯವೆನಬೇಕೇ? ಹಾಗೂ ಇರಲಿಲ್ಲ. ಅವು ಬಿಕ್ಕೆ ಬೇಡುವವಳ ಮಕ್ಕಳು. ಅದೂ ಬೀದಿಯಲ್ಲಿಸಿಕ್ಕಂಥವು. ಲ್ಯಾಂಟ್‌ನೆಕ್‌ನು ಸರದಾರ ಮನೆತನದವನು; ಸ್ವತಂತ್ರನೂ, ಶೂರನೂ ಆಗಿದ್ದನು. ಅವನು ತನ್ನ ಜೀವವನ್ನೂ ಸ್ವಾತಂತ್ರ್ಯವನ್ನೂ ಆ ಎಳೆ ಮಗುಗಳ ಸಲುವಾಗಿ ತ್ಯಾಗಮಾಡಿದನು. ಆ ಮಗುಗಳ ಪ್ರಾಣರಕ್ಷಣೆಯೇ ಅವನ ಜೀವನಕ್ಕೆ ಮುಳುವಾಯಿತು. ಆ ಪ್ರಸಂಗವೆಂದರೆ ತನ್ನ ಜೀವವನ್ನುಳಿಸಿಕೊಳ್ಳಬೇಕೋ ಅಥವಾ ಆ ಮಗುಗಳ ಜೀವ ಉಳಿಸಬೇಕೋ ಎಂಬ ಪರೀಕ್ಷೆಯೇ ಆಗಿತ್ತು. ಅವನು ಮಾತ್ರ ಮೃತ್ಯುವನ್ನೇ ಸ್ವಾಗತಿಸಿದನು. ಅವನಿಗಿನ್ನು ಮರಣವೇ ಬರುವದಿತ್ತು. ಇದು ಅವನು ತೋರಿಸಿದ ಶೌರ್ಯ, ಧೈರ್ಯ

ಮತ್ತು ಭೂತದಯೆಗೆ ತಕ್ಕ ಪಾರಿತೋಷಕವಾಗಿತ್ತೇ? ಅವನ ಸ್ವಾರ್ಥ ತ್ಯಾಗವೆಂದರೆ ಮರಣಕ್ಕೆ ಆಹುತಿಯಾಗುವದು ಮಾತ್ರ ಉಳಿದಿತ್ತು. ಉದಾರ ಕೃತ್ಯಗಳ ಪರಿಮಾರ್ಜನೆಯು ಇಂಥ ಅನುದಾರ ಕೃತ್ಯಗಳಿಂದ ಜರುಗಬಹುದೇ? ಇದೆಂಥ ಕ್ರಾಂತಿಯ ಉಪಮರ್ದವೋ ಏನೋ! ಅಥವಾ ಪ್ರಜಾಪಕ್ಷದ ಎಂಥ ಅಧೋಗತಿಯೋ ಏನೋ! ಹೇಳಬಲ್ಲವರಾರು? ಈ ಕ್ಷಮಾ, ಶಾಂತಿ, ದಯೆ ಮೊದಲಾದ ದೈವೀ ನಿಯಮಗಳು ಶುದ್ಧ ಮನಸಿನ ಸೇನಾನಾಯಕರಿಗಿರದೆ ನೀಚ ಜನರ ಸಲುವಾಗಿವೆಯೆಂದಿನಿಸುತ್ತದೆ.

ಮನುಷ್ಯನು ಔದಾರ್ಯದ ಸಲುವಾಗಿ ಬಡಿದಾಡಬಾರದೆ? ಇಂಥ ಬಲಾಢ್ಯ ವೀರನು ಇಷ್ಟೊಂದು ಹತಬಲನಾಗಬೇಕೇಕೆ? ಅಂಥ ಸಮಯದಲ್ಲಿ ವೀರನೂ ಕೂಡ ಕೊಲೆಗಡಕನಾಗಬೇಕೇ ಹೇಗೆ? ರಾಜಪಕ್ಷದ ಜನರು ದೊಡ್ಡ ಮನಸು ಮಾಡಿ ಮಗುಗಳನ್ನು ರಕ್ಷಿಸಿದ್ದಕ್ಕೆ ಪ್ರಜಾಪಕ್ಷದವರು ಮುದುಕನ ಜೀವವನ್ನು ತೆಗೆದುಕೊಳ್ಳಬೇಕೆಂದರೆ ಏನೆನ್ನಬೇಕು? ಜಗತ್ತು ಏನೆಂದು ಹೆಸರಿಟ್ಟೀತು? ಸತ್ಕೃತ್ಯವನ್ನು ಮಾಡುತ್ತಿರುವಾಗ ೮೦ ವರುಷದ ಮುದುಕನು ಶತ್ರುಗಳ ಕೈಗೆ ಸಿಗದೆ, ಶತ್ರುಗಳೇ ಅವನನ್ನು ಓಡಿಸಿಕೊಂಡು ಹೋದರೆಂದು ಜಗವು ಅನ್ನದಿರದೇ? ಕೃತಜ್ಞತಾ ಬುದ್ಧಿಯಿಂದ ಆ ಮೂರೂ ಮಗುಗಳ ಆತ್ಮವು ಆ ಮುದುಕನ ತಲೆಯ ಸುತ್ತು ಮುತ್ತು ಸುತ್ತುತ್ತಿರುವಾಗ ಅವನ ರುಂಡವು ಹಾರಿಸಲ್ಪಡುವದು ಅದೆಂಥ ನ್ಯಾಯವೋ? ಅವನ ಜೀವಹಕ್ಕಿಯು ಹಾರುವ ಮೊದಲು ಅವನ ಮುಖಮಂಡಲದಲ್ಲಿ ಮಂದಹಾಸವು ಮಿನುಗದೆ ಇರಲಾರದು. ಪ್ರಜಾಪಕ್ಷದವರ ಮುಖಗಳು ಕಪ್ಪಾಗದೆ ಉಳಿಯಲಾರವು; ಮತ್ತು ಇದೆಲ್ಲವೂ ಗಾವೆನ್‌ನ ಸಮಕ್ಷಮದಲ್ಲಿಯೇ ಜರುಗುವುದಲ್ಲವೇ? ಇದೆಲ್ಲ ಅನರ್ಥವನ್ನು ತಪ್ಪಿಸುವ ಶಕ್ತಿಯಿದ್ದವನು ಕೈಕಟ್ಟಿ ಕುಳಿತುಕೊಳ್ಳುವಂತೆ ಆಜ್ಞೆಯಾಗಿದೆ. ಇಂಥ ದುರ್ಧರ ಪ್ರಸಂಗದಲ್ಲಿ ಗಾವೆನ್‌ನಂಥವನು ಅಧಿಕಾರ ತ್ಯಾಗ ಮಾಡುವೆನೆನ್ನುವದೂ ದುಸ್ಸಾಧ್ಯವಾಗಿತ್ತು.

ಆದರೆ ಆ ಲ್ಯಾಂಟ್‌ನೆಕ್‌ನೇ ಜೀವವನ್ನು ತೆಗೆದುಕೊಳ್ಳುವೆನೆಂದು ಜಾಹೀರುಪಡಿಸಿದ್ದಿಲ್ಲವೇ ? ಈಗ ದಯೂವಂತನಾಗಿರುವ ಗಾವೆನ್‌ನಾದರೂ ಲ್ಯಾಂಟ್‌ನೆಕ್‌ನಿಗೆ ದಯುವನ್ನು ತೋರಿಸಬಾರದೆಂದು ಸಾರಿರಲಿಲ್ಲವೇ ? ಅವನು ಕೈಯಲ್ಲಿ ಸಿಕ್ಕಿದೊಡನೆಯೇ ಸಿಮೋರೆಡಿನ್‌ನ ವಶಕ್ಕೆ ಕೊಡಲಾಗುವದೆಂದು ಇದೇ ಗಾವೆನ್‌ನೇ ಜಾಹೀರುಪಡಿಸಿದ್ದಿಲ್ಲವೇ ? ಆದಾಗ್ಯೂ ಗಾವೆನ್‌ನ ತಲೆಯು ಇಂದು ಮಾತ್ರ•ತಾಳದ ಮೇಲೆ ಬಂದಿತ್ತೆನಬಹುದು.

ಇಲ್ಲಿಯವರೆಗೆ ಗಾವೆನ್‌ನು ಲ್ಯಾಂಟ್‌ನೆಕ್‌ನನ್ನು ಒಬ್ಬ ಯುದ್ಧಪಟುವು, ರಾಜಪಕ್ಷದ ಹುಚ್ಚು ಹಿಡಿದವನು, ವೈರಿಗಳ ರುಂಡಗಳನ್ನು ಚಂಡಾಡುವವನು, ನೆತ್ತರ ನೀರಡಿಕೆಯುಳ್ಳವನೆಂದು ತಿಳಿದುಕೊಂಡಿದ್ದನು. ಅಂಥವನ ಭೀತಿಯು ಗಾವೆನ್‌ನಿಗೆ ಎಳ್ಳಷ್ಟು ಇರಲಿಲ್ಲ. ಶಠಂ ಪ್ರತಿ ಶಾಠ್ಯಂ ಮಾಡುವದೇ ರಾಜಸತ್ತೆಯ ನೀತಿಯೆಂದು ಅವನ ಮತವಾಗಿತ್ತು. ಯಾರು ಜನರನ್ನು ಕೊಲ್ಲಬೇಕೆನ್ನುವರೋ ಅಂಥವರ ಕೊಲೆಯಾಗಲೇಬೇಕೆಂಬ ಅಭಿಪ್ರಾಯಪಡುತ್ತಿದ್ದನು. ಆದರೆ ಆ ಮಾರ್ಗವಿಂದು ಸ್ವಲ್ಪ ಬದಲಾವಣೆಗೊಂಡಿದೆ. ಮಾರ್ಗವು ಸ್ವಲ್ಪ ಬೇರೆಯಾದುದರಿಂದ ಹೊಸ ಕ್ಷಿತಿಜವು ಅವನ ಕಣ್ಣಿಗೆ ಕಾಣತೊಡಗಿತ್ತು. ಈಗ ಹೊಸ ಸ್ವರೂಪದಲ್ಲಿ ಲ್ಯಾಂಟ್‌ನೆಕ್‌ನು ಅವನಿಗೆ ಕಾಣತೊಡಗಿದನು; ರಾಕ್ಷಸಗಣದಿಂದ ಈಗ ಮಾನವಗಣಕ್ಕೆ ಬಂದಂತಾದನು. ಈ ಮನುಷ್ಯನಿಗೂ ದಯೆ”ಮಾಯೆ ಗಳಿವೆ ಎಂಬರಿವು ಕಾಣಪತ್ತಿತು. ಒಂದೇ ಸತ್ಕೃತ್ಯದಿಂದ ನೂರಾರು ದುಷ್ಟಕೃತಿಗಳ ಪಾಪವು ತೊಳೆದು ಹೋಗುತ್ತದೆಂಬ ಮಾತಿನ ನಿದರ್ಶನವನ್ನು ಈಗಿನ ಲ್ಯಾಂಟ್‌ನೆಕ್‌ನಲ್ಲಿ ಕಾಣಬಹುದಾಗಿತ್ತು. ಪರಿವರ್ತನಗೊಂಡ ಲ್ಯಾಂಟ್‌ನೆಕ್‌ನು ಗಾವೆನ್‌ನನ್ನು ಬದಲಾಯಿಸಲು ಶಕ್ಯವಾಗಲಾರದೇ ಎಂಬ ಪ್ರಶ್ನೆ ಹಣಿಕಿ ಹಾಕುತ್ತಿತ್ತು. ದುಷ್ಟ ಮನುಷ್ಯನು ಒಮ್ಮೊಮ್ಮೆ ಸದ್ಗುಣಿಯಾಗಿ ಮೆರೆದಾಡತೊಡಗಬಹುದು.

ಲ್ಯಾಂಟನೆಕ್‌ನ ರಕ್ತವನ್ನು ಹೀರುವದೆಂದರೆ ತನ್ನದೇ ಆದ ರಕ್ತವನ್ನು ಹೀರಿದಂತಾಗಲಾರದೇ ಎಂಬ ಭಾವನೆ ಗಾವೆನ್‌ನಲ್ಲಿ ಸುಳಿದಾಡ

ತೊಡಗಿತು. ಗಾವೆನ್‌ನ ಅಜ್ಜನು ಸತ್ತುಹೋಗಿದ್ದರೂ ಅವನ ತಮ್ಮ ಲ್ಯಾಂಟ್‌ನೆಕ್‌ನು ಇನ್ನೂ ಬದುಕಿದ್ದಾನೆ. ಸತ್ತು ಸ್ವರ್ಗಕ್ಕೇರಿದ ಅಜ್ಜನು ತಮ್ಮಿಬ್ಬರ ನಡುವೆ ಬಾರದಿರನೇ ಎಂಬ ಶಂಕೆಯೂ ಗಾವೆನ್‌ನನ್ನು ಸಂಕಟಕ್ಕೀಡು ಮಾಡದೆ ಬಿಡಲಿಲ್ಲ. ಮುದುಕ ಮನುಷ್ಯನಿಗೆ ಅಪಮಾನ ಮಾಡಬೇಡವೆಂದು ಉಪದೇಶಿಸದೆ ತನ್ನ ಅಜ್ಜನು ಹೇಗಿದ್ದಾನೆಂಬ ಕಲ್ಪನೆ ಅವನಲ್ಲಿ ತಾಕಲಾಡುತ್ತಿತ್ತು. ಕ್ರಾಂತಿಯ ಉದ್ದೇಶವು ಮಾನವರನ್ನು ನೀಚರನ್ನಾಗಿ ಮಾಡುವದಿದೆಯೇ ಎಂಬ ಪ್ರಶ್ನೆಯು ಅವನನ್ನು ಬಾಧಿಸತೊಡಗಿತ್ತು. ಈ ಕ್ರಾಂತಿಯು ಕೌಟುಂಬಿಕ ಬಂಧನ ಹಾಗೂ ಅಂತಃಕರಣವನ್ನು ಕಡಿದುಕೊಳ್ಳುವ ಸಲುವಾಗಿ ತಲೆಯೆತ್ತಿತೇ ಎಂದು ಮರುಗುತ್ತಿದ್ದನು. ಕ್ರಾಂತಿಯ ನಿಜವಾದ ಉದ್ದೇಶವು ಅವನ ವಿಚಾರದಲ್ಲಿ ಬೇರೆ ತರಹದ್ದಾಗಿತ್ತು. ಕ್ರಾಂತಿಯಿಂದ ಭೂತದಯೆಯನ್ನೂ, ಕೌಟುಂಬಿಕ ಪುನರ್ಘಟನೆಯನ್ನು ಅವನಿಗೆ ಸ್ಥಾಪಿಸಬೇಕಾಗಿತ್ತು. ಕ್ರಾಂತಿಯ ಉದ್ದೇಶವು ಉದಾರವೂ, ಶ್ರೇಷ್ಠ ತರಗತಿಯದೂ ಆಗಿತ್ತು. ಆದ್ದರಿಂದಲೇ ರಾಜನನ್ನು ಕೊಂದು ಪ್ರಜಾಪಕ್ಷವು ತಲೆದೋರಿತ್ತು.

ಲ್ಯಾಂಟನೆಕ್‌ನ ಅಂತಃಕರಣದಲ್ಲಿ ದಯೆಯುಂಟಾಯಿತು. ಕಕ್ಕ-ಮಕ್ಕಳ ಈ ಸೆಣಸಾಟದ ನಿರ್ಣಯವನ್ನು ಯಾವ ರೀತಿ ಬಗೆಹರಿಯಿಸಬೇಕೆಂಬ ಮಾನಸಿಕ ತುಮುಲಯುದ್ಧದಲ್ಲಿ ಗಾವೆನ್‌ನ ಮನಸು ವ್ಯಗ್ರವಾಗಿತ್ತು. ಈ ಮಾನಸಿಕ ಹೊಯ್ದಾಟದಲ್ಲಿ ಗಾವೆನ್‌ನ ಸದಸದ್ವಿವೇಕ ಬುದ್ಧಿಗೆ ವಿಜಯವಾಯಿತು. ಕಕ್ಕನನ್ನು ರಕ್ಷಿಸಬೇಕೆಂದು ನಿಶ್ಚಯಿಸಿದನು. ಆದರೆ ಫ್ರಾನ್ಸದ ಗತಿಯೇನು? ಫ್ರಾನ್ಸವನ್ನು ಇಂಥ ವಿಷಮಸ್ಥಿತಿಯಲ್ಲಿ ಕೈ ಬಿಟ್ಟರೆ ಜರ್ಮನಿಯೂ ಇಟಲಿಯೂ ಅದನ್ನು ನುಂಗಿ ನೀರು ಕುಡಿಯಲು ಸಿದ್ಧವಾಗಿದ್ದವು ಲ್ಯಾಂಟ್‌ನೆಕ್‌ನ ಮನಸಿನಲ್ಲಿ ತನ್ನ ಮಾತೃಭೂಮಿಯನ್ನು ಇಂಗ್ಲಂಡದ ವಶಪಡಿಸಬೇಕೆಂದಿತ್ತು. ಆದರೆ ಅದಕ್ಕೇನು ಮಾಡಬೇಕು? ಈಗ ಅಂಥವನನ್ನು ಮೂರು ತಿಂಗಳು ಪ್ರಯತ್ನಪಟ್ಟು ಬಂಧನವಲ್ಲಿರಿಸಲಾಗಿದೆ. ಅವನ ಪ್ರಯತ್ನದ ಫಲವಾಗಿಯೇ ವೆಂಡಿಯಲ್ಲಿ ಇಂಥ ಬಂಡಾಯವೆದ್ದಿತ್ತು. ಅವನ ಅವತಾರ ಸಮಾಪ್ತಿಯೊಂದಿಗೇ ಈ ದ್ವಂದ್ವಯುದ್ಧದ ಕೊನೆಯೂ

ಆಗುವದಿತ್ತು. ಇಷ್ಟೊಂದು ಕೊಳ್ಳಿ, ಕೊಲೆ, ರಕ್ತಪಾತದ ನಂತರವೇ ಅವನು ಸೆರೆಯಾಳಾಗಬೇಕಾಯಿತು. ದುರ್ದೈವವು ಅವನ ಹಣೆಬರಹ ವಾದ್ದರಿಂದ ಅವನಿಗೆ ಮರಣದ ಪಾಳಿಯು ಬಂದಿತ್ತು. ಸಿವೋರೆಡಿನ್‌ನ ಕೈಯಿಂದ ಅವನ ರಕ್ಷಣೆಯನ್ನು ಮಾಡುವದು ಯಾರಿಂದಲೂ ಸಾಧ್ಯ ವಿರಲಿಲ್ಲ.

ಮೂರೂ ಮಗುಗಳ ಆಹುತಿಯಾಗುತ್ತಿತ್ತು. ಅದನ್ನು ತಪ್ಪಿಸಲು ಲ್ಯಾಂಟ್‌ನೆಕ್‌ನು ತಾನೇ ಮುಂದೆ ಬಂದು ತನ್ನ ಜೀವವನ್ನು ಸಂಕಟಕ್ಕೀಡು ಮಾಡಲಿಲ್ಲವೇ ? ಆ ಮಗುಗಳಿಗೆ ಬೆಂಕಿ ಹತ್ತಲೆಂದು ಕಿಡಿಯನ್ನು ಒಗೆದವ ರಾರು ? ಇಮಾನಸನಲ್ಲವೇ ? ಅವನಾದರೂ ಯಾರು ? ಲ್ಯಾಂಟ್‌ನೆಕ್‌ನ ಕೈಗೊಂಬೆಯಲ್ಲವೇ ಅವನು ? ಆದರೂ ಲ್ಯಾಂಟ್‌ನೆಕ್‌ನು ಅದನ್ನು ಸಹಿಸಿ ದನಾದರೂ ಮುಂದೆ ಆ ಮಗುಗಳ ಪ್ರಾಣವನ್ನುಳಿಸಿದನಲ್ಲವೇ ? ಅದರಿಂದ ಅವನ ಅಪರಾಧವು ಅಷ್ಟು ಭೀಕರವೆನಿಸದು. ಆ ಮಗುಗಳ ತಾಯಿಯ ಹೃದಯ ಭೇದಕ ಆರ್ತಧ್ವನಿಯನ್ನು ಕೇಳಿ ಅವನ ಮನಸು ಕರಗಿತು; ದಯೆಯುಂಟಾಗಿ ಅವುಗಳ ಪ್ರಾಣರಕ್ಷಣೆಗೆ ಸಿದ್ಧನಾದನು. ಒಪ್ಪಂದದ ಪ್ರಯತ್ನಗಳಾದವು; ಕೆಲವೊಂದು ಕರಾರು ಮಾನ್ಯ ಮಾಡಿ ಮುಕ್ತ ಗೊಳಿಸಬೇಕೆಂದು ಮಾಡಿದರೆ ಒಪ್ಪಲಿಲ್ಲ. ಆದ್ದರಿಂದ ಲ್ಯಾಂಟ್‌ನೆಕ್‌ನನ್ನು ಕೊಂದು ಹಾಕಬೇಕು ಇಲ್ಲವೆ ಬಂಧಮುಕ್ತಮಾಡಬೇಕೆಂಬ ಎರಡೇ ಮಾರ್ಗಗಳುಳಿದವು. ಅವನನ್ನು ಯಮಸದನಕ್ಕೆ ಅಟ್ಟಬೇಕೆಂದರೆ ಮಾನ ಸಿಕ ವ್ಯಥೆ; ಹಾಗೆಯೇ ಬಿಟ್ಟು ಬಿಡಬೇಕೆಂದರೆ ದೊಡ್ಡ ಹೊಣೆಗಾರಿ ಕೆಯ ಚಿಂತೆ. ಯಾಕೆಂದರೆ ಮುಕ್ತನಾದ ಮೇಲೆ ಅವನು ಪುನಃ ಬಂಡು ಹೂಡಲು ಬಿಡದ ಮನಸ್ಸಿನವನಾಗಿದ್ದನು. ಲ್ಯಾಂಟ್‌ನೆಕ್‌ನು ಪ್ರಜಾಸತ್ತೆ ಯನ್ನು ಸದೆಬಡಿದು ರಾಜಸತ್ತೆಯನ್ನು ಪ್ರಸ್ಥಾಪಿಸಿ, ಫ್ರಾನ್ಸವನ್ನು ಇಂಗ್ಲಂಡದ ಆಧೀನವಾಗುವವರೆಗೆ ಸುಮ್ಮನೆ ಕೂಡ್ರುವ ಮನುಷ್ಯನಲ್ಲ ಎಂಬ ಮಾತು ಸರ್ವಶ್ರುತವಾಗಿತ್ತು. ಆದ್ದರಿಂದ ಲ್ಯಾಂಟ್‌ನೆಕ್‌ನಿಗೆ ಜೀವದಾನ ಮಾಡುವದೆಂದರೆ ಫ್ರಾನ್ಸವನ್ನು ಹಾಳುಗೆಡವಿದಂತೆಯೇ ಎಂಬ ಮಾತಿನಲ್ಲಿ ಸಂದೇಹವಿರಲಿಲ್ಲ. ಆದರೂ ಅವನು ಕೊನೆಗೆ ತೋರಿಸಿದ

ಔದಾರ್ಯದ ಮೂಲಕ ಅವನನ್ನು ರಕ್ಷಿಸಬೇಕೆಂಬ ವಿಚಾರ ಮಾತ್ರ ಗಾವೆ ನ್‌ನನ್ನು ತಿಕ್ಕಿ ಮುಕ್ಕದೆ ಬಿಡಲಿಲ್ಲ.

ಅವನು ನೀಚನಿರಬಹುದು ? ಈಗಲೂ ಹಾಗೆಯೇ ಇರಬಹುದೇ ! ಎಂಬ ವಿಚಾರ ಗಾವೆನ್‌ನಲ್ಲಿ ಪರಿಭ್ರಮಿಸುತ್ತಿತ್ತು. ಅವನ ವಿಷಯವಾಗಿ ಇಷ್ಟೊಂದು ಸೂಕ್ಷ್ಮ ವಿವೇಚನ ಮಾಡಿದ ಮೇಲೆ ಲ್ಯಾಂಟ್‌ನೆಕ್‌ನ ಭಕ್ತಿ, ಸ್ವಾರ್ಥತ್ಯಾಗೀ ವೃತ್ತಿ, ನಿಷ್ಕಾಮ ಬುದ್ಧಿಗಳ ಬಗ್ಗೆ ಯಾರಿಗಾದರೂ ಸಂಶಯ ಬಂದಿರಬಹುದೇ ? ಎಂಬ ಶಂಕೆಗೆ ಆಸ್ಪದವಿರಲೇ ಇಲ್ಲ. ಆದರೂ ಯುದ್ಧ ವನ್ನು ಹೂಡಿದ ಮೇಲೆ ಅವನಲ್ಲಿ ಭೂತದಯೆ ಉಂಟಾಯಿತೆಂಬಲ್ಲಿ ಯಾವ ಅರ್ಥವಿದೆ ? ರಾಜಪಕ್ಷ, ಕ್ರಾಂತಿ, ಮತ್ತು ಐಹಿಕ ವಿಚಾರಗಳಾಚೆಗೆ ಮಾನವ ಹೃದಯದ ಕೋಮಲತೆ ಹಾಗೂ ಸಶಕ್ತರಿಂದ ಅಶಕ್ತರನ್ನು ಸಂರ ಕ್ಷಿಸುವ ಮಾತುಗಳಿವೆ ಎಂದು ಹೇಗೆ ನಂಬಬೇಕು ? ಎಂಬುದನ್ನು ಸಾರ್ಥಕ ಗೊಳಿಸಲು ಅವನು ತನ್ನ ಜೀವವನ್ನೇ ಧಾರೆಯೆರೆದನು. ಅವನು ಸೇನಾ ಪತಿಯಿದ್ದು ಮತ್ಸರ ಬುದ್ಧಿಗೆ ತಿಲಾಂಜಲಿ ಬಿಟ್ಟನು. ರಾಜಪಕ್ಷದವನಿದ್ದು ಅವನು ಕೈಯಲ್ಲಿ ತಕ್ಕಡಿಯನ್ನು ಹಿಡಿದು ಒಂದು ಪರಡಿಯಲ್ಲಿ ರಾಜನನ್ನು, ೧೫ ಶತಮಾನದಿಂದ ಅವ್ಯಾಹತವಾಗಿ ನಡೆದು ಬಂದ ರಾಜಸತ್ತೆಯನ್ನೂ, ಹಳೆಯ ಕಾನೂನುಗಳನ್ನೂ, ಹಳೆಯ ಸಮಾಜವ್ಯವಸ್ಥೆ ಮೊದಲಾದವು ಗಳನ್ನು ಹಾಕಿ, ಇನ್ನೊಂದು ಪರಡಿಯಲ್ಲಿ ಮೂರು ಅನಾಥ ಮಗುಗಳನ್ನು ಹಾಕಿ ತೂಗಿ ತೂಗಿ ನೋಡಿದನು. ಈ ಮಗುಗಳ ಪ್ರಾಣವೇ ಅಧಿಕವೆಂದು ನಿರ್ಣಯಿಸಿದನು. ಇಂಥ ಸ್ವಾರ್ಥತ್ಯಾಗ ಮಾಡಿದಂಥವನು ನೀಚ ಮನುಷ್ಯ ನೆಂಬೂ ಆಗದ ಮಾತು. ಈ ಕೃತಿಯೊಂದರಿಂದಲೇ ಅವನು ಪುನೀತನಾ ದನು. ಅವನು ತನ್ನ ಕ್ಷಮಾ ಪತ್ರವನ್ನು ತಾನೇ ಬರೆದುಕೊಂಡನು. ಆದ್ದ ರಿಂದಲೇ ಇಂದಿನಿಂದ ಅವನಿಗೆ ಮಾನವನ್ನೂ ಗೌರವವನ್ನೂ ಸಲ್ಲಿಸಲೇ ಬೇಕೆಂದು ಗಾವೆನ್‌ನ ಮನಸ್ಸು ಹಾತೊರೆಯುತ್ತಿತ್ತು.

ಲ್ಯಾಂಟ್‌ನೆಕ್‌ನು ತನ್ನ ಅಲೌಕಿಕತೆಯನ್ನು ತಾನೇ ತೋರಿಸಿ ಕೊಟ್ಟನು. ಈಗ ಮಾತ್ರ ಗಾವೆನ್‌ನ ಪರೀಕ್ಷೆಯ ಸಮಯ ಬಂದಿತ್ತು. ಈಶ್ವರನು ಅವನ ಮೇಲೆ ಹೊರಿಸಿದ ವಿಶ್ವಾಸಘಾತವನ್ನು ಅವನು ಮಾಡು

ವನೇ ? ಛೀ, ಎಂದಿಗೂ ಇಲ್ಲ. ಅವನು ತನ್ನಷ್ಟಕ್ಕೆ ತಾನೇ 'ನಡೆ ಇನ್ನು. ಲ್ಯಾಂಟ್‌ನೆಕ್‌ನನ್ನು ಬದುಕಿಸೋಣ' ವೆಂದು ಬಡಬಡಿಸಿದನು. ಅಷ್ಟರಲ್ಲಿ ಅವನಿಗೊಂದು ಧ್ವನಿಯು 'ಒಳ್ಳೇದು, ಹೋಗು, ಇಂಗ್ಲಿಷರನ್ನು ಕೂಡಿಕೋ, ಶತ್ರುಗಳಿಗೆ ನೆರವಾಗು, ಲ್ಯಾಂಟ್‌ನೆಕ್‌ನನ್ನು ಬಿಡಿಸು, ಫ್ರಾನ್ಸ ವನ್ನು ಹಾಳು ಮಾಡು. ಮೂರ್ಖಾ, ನೀನು ಬಿಡಿಸಿದ ಪ್ರಶ್ನೆಯ ಉತ್ತರವು ತಪ್ಪಿದೆ' ಎಂದು ಕೇಳಿಸಿತು. ಅದನ್ನು ಕೇಳಿ ಗಾವೆನ್‌ನು ಗದಗುಟ್ಟಿ ನಡುಗ ತೊಡಗಿದನು.



## ೨೨.

ಗಾವೆನ್‌ನು ವಿಚಾರ ಮಾಡ ಮಾಡುತ್ತ ಎಲ್ಲಿ ಪರಸ್ಪರ ವಿರೋಧಿ ತತ್ವಗಳು ಏಕೀಕರಣವಾಗುತ್ತಿದ್ದವೋ ಅಂಥ ಉಚ್ಚತಮವಾದ ಮನೋ ಭೂಮಿಕೆಯ ವರೆಗೆ ಬಂದು ಮುಟ್ಟಿದ್ದನು. ಭೂತದಯೆ, ಕುಟುಂಬ ಮತ್ತು ದೇಶವೆಂಬ ಮನುಷ್ಯನ ಈ ಮೂರು ಉಚ್ಚಭಾವನೆಗಳು ಅಲ್ಲಿ ಒಂದ ಕ್ಕೊಂದು ನೋಡುತ್ತಿದ್ದವು. ಈ ಮೂರೂ ಭಾವನೆಗಳಿಗೂ ವಾಚಾ ಶಕ್ತಿ ಯುಂಟಾಗಿ ಅವು ಸತ್ಯ ಕಥನವನ್ನು ಹೇಳುತ್ತಿದ್ದವು. ಎಲ್ಲಿ ಬುದ್ಧಿ ಮತ್ತು ನ್ಯಾಯ ಶಕ್ತಿಗಳು ಕೂಡುತ್ತಿದ್ದವೋ ಅಂಥಲ್ಲಿ ಈ ಭಾವನೆಗಳೆಲ್ಲ ಮುಟ್ಟಿ 'ಇದನ್ನು ಮಾಡು' ಎಂದು ಹೇಳುತ್ತಿದ್ದವು. ಆಗ ಅವನೇನು ಮಾಡ ಬೇಕು ? ಅಹುದು, ಅಲ್ಲ ಎಂಬದರಾಚೆಗೆ ಅವನಿಗೇನೂ ಹೊಳೆಯುತ್ತಿರ ಲಿಲ್ಲ. ತರ್ಕಕ್ಕೆ ಒಂದು ಮಾತು ಸರಿಯೆನಿಸಿದರೆ ಭಾವನೆಗೆ ಇನ್ನೊಂದು ಸರಿಯೆನಿಸುತ್ತಿತ್ತು. ಹೀಗಾಗಿ ಅವುಗಳ ಉಪದೇಶವು ತೀರ ವಿರುದ್ಧವಾಗು ತ್ತಿತ್ತು. ತರ್ಕಶಾಸ್ತ್ರವು ಬುದ್ಧಿ ಪ್ರಧಾನವಾದುದು; ಆದರೆ ಭಾವನೆಯು ಸದ ಸದ್ವಿವೇಕ ಬುದ್ಧಿಯನ್ನು ಅವಲಂಬಿಸಿದೆ. ಆದ್ದರಿಂದಲೆ ಭಾವನೆಗೆ ಸ್ಪಷ್ಟತೆ ಕಡಮೆ; ಆದರೆ ಸಾಮರ್ಥ್ಯವು ಹೆಚ್ಚಾಗಿದೆ.

ಆದರೂ ತರ್ಕದ ಸಾಮರ್ಥ್ಯವೂ ಕಡಮೆ ಇರುವದಿಲ್ಲ. ಗಾವೆನ್‌ನ ನಿಶ್ಚಯುವಾಗಲಾರದಾಗಿದೆ. ಅವನಿಗೆ ಹುಚ್ಚು ಹಿಡಿದಂತಾಗಿತ್ತು. ಅವನಿಗೆ ಇತ್ತ ಬಾವಿ ಅತ್ತ ಕೆರೆ ಎಂಬಂತಾಗಿತ್ತು. ತಾನು ಅವನನ್ನು ಬಿಡಬೇಕೋ ಅಥವಾ ಕೊಲ್ಲಬೇಕೋ ಎಂಬ ಪ್ರಶ್ನೆಯ ಮೂಲಕ ಅವನು ಚಲವಿಚಲನಾಗಿದ್ದನು. ಯಾವುದನ್ನು ಮಾಡಿದರೆ ತಾನು ನಿಜವಾದ ಕರ್ತವ್ಯ ಪಾಲನೆ ಮಾಡಿದಂತಾಗುವದೆಂಬದೇ ಅವನಿಗೆ ತೋಚದಾಗಿತ್ತು.

ಗೆದ್ದಂಥ ಈ ವೀರನಿಗೆ ಕರ್ಮಾ ಕರ್ಮದ ಯುದ್ಧದಲ್ಲಿ ಬೀಳಬೇಕಾಯಿತು. ಕರ್ತವ್ಯದ ಲಕ್ಷಣಗಳು ಸ್ಪಷ್ಟವಾಗಿ ಕಾಣುತ್ತಿದ್ದವು. ಅವನ ಮೂರ್ತಿಯು ಸಿಮೋರೆಡಿನ್‌ನಿಗೆ ಕಠೋರವೆಂದು ತೋರತೊಡಗಿತು. ಗಾವೆನ್‌ನಿಗೆ ಭಯಂಕರವಾಗಿ ತೋರಿತು.

ಕೊನೆಗೆ ಮಧ್ಯರಾತ್ರಿ ಸರಿಯಿತು. ಒಂದರ ಗಂಟೆ ಬಡಿಯಿತು ಗಾವೆನ್‌ನಿಗೆ ಅದರ ಪರಿವೆಯೇ ಇರಲಿಲ್ಲ. ಆ ಬಿರುಕಿನ ಕಡೆಗೆ ಹೋದನು. ಬೆಂಕಿಯು ನಂದುತ್ತ ನಡೆದಿತ್ತು. ನಡುನಡುವೆ ಬೆಂಕಿಯ ಕಿಡಗಳು ಭಗ್ಗನೆ ಏಳುತ್ತಿದ್ದವು. ಹೊಗೆ ಮತ್ತು ಜ್ವಾಲೆಯ ನಡುವೆ ನಡೆದಿದ್ದ ಯುದ್ಧವನ್ನು ಗಾವೆನ್‌ನು ಚಮತ್ಕಾರ ದೃಷ್ಟಿಯಿಂದ ನೋಡುತ್ತಿದ್ದನು. ಒಮ್ಮೆಲೆ ಅವನಿಗೆ ಬಯಲು ಪ್ರದೇಶದಲ್ಲಿ ಬರುತ್ತಿರುವ ಗಾಡಿಯೊಂದು ಕಾಣಿಸಿತು.

ಗಾವೆನ್‌ನು ಆ ಗಾಡಿಯನ್ನು ನೆಟ್ಟ ನೋಟದಿಂದ ನೋಡುತ್ತಿದ್ದನು. ಆ ಗಾಡಿಯ ಸುತ್ತಲು ಸಿಪಾಯಿಗಳಿದ್ದರು. ಸಾಯಂಕಾಲ ದುರ್ಬಿಣಿಯ ಸಹಾಯದಿಂದ ನೋಡುತ್ತಿದ್ದ ಗಾಡಿಯೇ ಈ ಗಾಡಿಯಿರಬೇಕೆಂದು ಅವನಿಗೆ ನಿಸಿತು. ಕೆಲವು ಜನರು ಗಾಡಿಯನ್ನು ಹತ್ತಿ ಸಾಮಾನು ತೆಗೆಯುತ್ತಿದ್ದರು. ಸಾಮಾನುಗಳು ಬಲು ಭಾರವಾಗಿರಬೇಕೆಂದು ಆ ಗಾಡಿಯ ಕರ್‌ಕರ್ ಸಪ್ಪಳದ ಮೇಲಿಂದ ಹೇಳಬಹುದಾಗಿತ್ತು. ಆ ಸಾಮಾನುಗಳೇನಿದ್ದವೆಂಬದನ್ನು ಹೇಳುವದು ಬಲು ಕಠಿಣ; ಆದರೂ ಅವು ತೊಲೆಗಳಿರಬೇಕೆಂದು ತೋರುತ್ತಿತ್ತು. ಇಬ್ಬರು ಮನುಷ್ಯರು ಒಂದು ಪೆಟ್ಟಿಗೆಯನ್ನು ತೆಗೆದು ಕೆಳಗಿಳಿಸಿದರು. ಆ ಪೆಟ್ಟಿಗೆಯ ಆಕಾರದಿಂದ ಅದೊಂದು ತ್ರಿಕೋಣಾಕೃತಿಯ ಪದಾರ್ಥವಿರಬೇಕೆಂದು ಅವನು ಗ್ರಹಿಸಿಕೊಂಡನು. ಬೆಂಕಿಯು

ಬೆಳಕು ಕಡಿಮೆಯಾಯಿತು; ಮತ್ತೆ ಕತ್ತಲು ಕವಿದಿತು. ಗಾವೆನ್‌ನು ಆ ಕತ್ತಲೆಯ ಬಗ್ಗೆ ಏನೋ ವಿಚಾರ ಮಾಡುತ್ತನಿಂತುಕೊಂಡಂತೆ ಕಾಣು ತ್ತಿತ್ತು.

ಆ ಜನರು ದೀಪವನ್ನು ಹಚ್ಚಿಕೊಂಡು ಎತ್ತರದ ಸ್ಥಳದ ಕಡೆಗೆ ನಡೆದರು. ಆ ಮನುಷ್ಯರ ಮುಖಚರ್ಯೆಗಳು ಅಸ್ಪಷ್ಟವಾಗಿ ಕಾಣುತ್ತಿದ್ದವು. ಗಾವೆನ್‌ನು ಎದುರು ಬದಿಯಲ್ಲಿ ಕೆಳಗೆ ನಿಂತುದರಿಂದ ಅವನಿಗೆ ಯಾವದೂ ನಿಚ್ಚಳಾಗಿ ಕಾಣಬರುತ್ತಿದ್ದಿಲ್ಲ. ನಡುನಡುವೆ ಮಾತುಗಳು ಹೊರಡುತ್ತಿದ್ದವು. ಅವೂ ಸ್ಪಷ್ಟವಾಗಿ ಕೇಳಿಸುತ್ತಿದ್ದಿಲ್ಲ. ಆ ತೊಲೆಗಳನ್ನು ಒಂದರ ಮೇಲೊಂದು ಹೇರಿದ ಸಪ್ಪಳವು ಕೇಳ ಬಂದಿತು. ಅವುಗಳನ್ನು ಕೊಡಲಿಯಿಂದ ಇಲ್ಲವೆ ಕೊಯ್ತದಿಂದ ಕೊರೆಯುತ್ತಿರುವಂಥ ಸಪ್ಪಳವೂ ಕೇಳಿಸಿತು.

ಎರಡು ಗಂಟೆಯಾಯಿತು !

ಒಬ್ಬ ಮನುಷ್ಯನು ಹೇಗೆ ಮೆಲ್ಲನೆ ಹಿಂದೆ ಸರಿಯುವ ಪ್ರಯತ್ನವನ್ನು ಮಾಡುತ್ತಾನೋ ಹಾಗೆ, ಆದರೂ ಯಾವುದೋ ಒಂದು ಅದೃಷ್ಟ ಶಕ್ತಿಯೂ ಮುಂದೆ ನೂಕುತ್ತಿರುವ ಹಾಗೆ ಅವನು ಮುಂದೆ ಮುಂದೆ ಸಾಗಿದ್ದನು. ಅವನು ಆ ಸ್ಥಳಕ್ಕೆ ಬಂದು ಮುಟ್ಟಿದನು. ಗಾವೆನ್‌ನು ಮುಂದೆ ಮುಂದೆ ಬಂದಬಂದಂತೆ ಕಾವಲುಗಾರರು ಸೇನಾಪತಿಯನ್ನು ಅವನ ಉಡುಪಿನಿಂದಲೇ ಕಂಡುಹಿಡಿದು ಅವನಿಗೆ ಲಷ್ಕರಿ ಸಲಾಂ ಮಾಡಿದರು. ಗಾವೆನ್‌ನು ಕೆಳಮನೆಯ ದಿವಾಣಖಾನೆಯನ್ನು ಸೇರಿದನು. ಅಲ್ಲೊಂದು ದೀಪ ಉರಿಯುತ್ತಿತ್ತು. ಆ ದೀಪದಿಂದ ಕೆಳಗೆ ಸಿಪಾಯರು ಮಲಗಿಕೊಂಡಿದ್ದಾರೆಂಬದು ಮಾತ್ರ ಕಾಣುತ್ತಿತ್ತು.

ಅವರು ಯುದ್ಧ ಮಾಡಿ ಮಾಡಿ ದಣಿದು ಮಲಗಿಕೊಂಡಿದ್ದರು. ಕೆಲವು ಸಮಯದ ಹಿಂದೆ ಇಲ್ಲಿಯೇ ಕೆಲವು ಸಿಪಾಯರು ಯುದ್ಧ ಮಾಡುತ್ತ ಮರಣ ಪಟ್ಟಿದ್ದರು. ಯಾವ ಹುಲ್ಲಿನ ಸಿವುಡಗಳ ಆಶ್ರಯವನ್ನು ಹೊಂದಿದ್ದರೋ ಅದೇ ಹುಲ್ಲು ಮಿತ್ರರ ನೆತ್ತರವನ್ನು ಕುಡಿದು ಕುಳಿತ್ತಿತ್ತು. ರಕ್ತಪ್ರವಾಹವು ನಿಂತಿತ್ತು. ಸತ್ತವರು ಸತ್ತೇ ಹೋಗಿದ್ದರು;

ಜೀವಂತವಿದ್ದವರು ಪೂರ್ಣವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಿದ್ದರು. ಹೀಗೆ ಯುದ್ಧದ ಕತೆಯು ಇರುತ್ತದೆ.

ಗಾವೆನ್‌ನು ಒಳಗೆ ಪ್ರವೇಶಿಸಿದೊಡನೆ ಕೆಲವು ಸಿಪಾಯರು ಎಚ್ಚೆತ್ತರು ಗಾವೆನ್‌ನು ಮುಖ್ಯ ಅಧಿಕಾರಿಗೆ 'ನಡೆ, ಬಾಗಿಲವನ್ನು ತೆರೆ' ಎಂದನು. ಆ ಅಧಿಕಾರಿಯು ಮುಂದೆ ಹೋಗಿ ಬಾಗಿಲವನ್ನು ತೆರೆದನು. ಗಾವೆನ್‌ನು ಆ ಕತ್ತಲೆಯ ಕೋಣೆಯಲ್ಲಿ ಹೊಕ್ಕನು. ಬಾಗಿಲವು ಮುಚ್ಚಿಕೊಂಡಿತು. ಒಂದು ಕಿಡಿಕಿಯಲ್ಲಿ ದೀಪವು ಉರಿಯುತ್ತಿತ್ತು. ಪಾಪಟಿಗೆಯ ಮೇಲೆ ಒಂದು ನೀರಿನ ಹೂಜೆ; ಕೆಲವೊಂದು ರೊಟ್ಟಿಯ ತುಣುಕುಗಳು; ಹುಲ್ಲಿನ ಶಿವುಡುಗಳು ಇದ್ದವು. ಒಳಗಿದ್ದವನಿಗೆ ಆ ಹುಲ್ಲಿಗೆ ಬೆಂಕೀ ಹಚ್ಚಿ ಆ ಕಟ್ಟಡವನ್ನು ಧ್ವಂಸ ಮಾಡುವದು ಸುಲಭವಾಗಿತ್ತಾದರೂ ಅವನೂ ಅದರಲ್ಲಿಯೇ ಸುಟ್ಟು ಭಸ್ಮವಾಗದ ಹೊರತು ಗತ್ಯಂತರವಿರಲಿಲ್ಲ. ಗಾವೆನ್‌ನು ಒಳಗೆ ಹೋದಾಗ ಲ್ಯಾಂಟ್‌ನೆಕ್‌ನು ಅತ್ತಿತ್ತ ತಿರುಗಾಡುವದು ಅವನ ಕಣ್ಣಿಗೆ ಬಿದ್ದಿತು. ಪಂಜರದಲ್ಲಿಯ ಹಿಂಸ್ರಪಶುಗಳು ಅಡ್ಡಾಡುತ್ತಿರುವಂತೆ ಅವನೂ ತಿರುಗಾಡುತ್ತಿದ್ದನು

ಬಾಗಿಲದ ಸದ್ದಾದೊಡನೆಯೇ ಲ್ಯಾಂಟ್‌ನೆಕ್‌ನು ಮುಖವನ್ನೆತ್ತಿ ಸುತ್ತುಮುತ್ತು ನೋಡತೊಡಗಿದನು. ಆ ಮಂದಪ್ರಕಾಶದಲ್ಲಿಯೇ ಇಬ್ಬರ ಮುಖಗಳೂ ಒಬ್ಬರೊಬ್ಬರಿಗೆ ಕಾಣುತ್ತಿದ್ದವು. ಇಬ್ಬರ ದೃಷ್ಟಾದೃಷ್ಟಿಯಾದಾಗ ಇಬ್ಬರೂ ಮೌನಿಗಳಾಗಿಯೇ ಇದ್ದರು. ಕೊನೆಗೆ ಲ್ಯಾಂಟ್‌ನೆಕ್‌ನು ಬಿದ್ದು ಬಿದ್ದು ನಗುತ್ತ 'ಮಹಾರಾಜರೇ, ಬನ್ನಿರಿ. ತಮ್ಮ ಭೆಟ್ಟಿಯಾಗಿ ಬಹಳ ದಿನಗಳಾದವು. ನನ್ನ ಬೆಟ್ಟಿಗೆ ಬಂದುದರಿಂದ ಸ್ವಲ್ಪ ಮಾತನಾಡಬೇಕೆಂದಿದ್ದೇನೆ ನಿಮ್ಮ ಮಿತ್ರರು ನನ್ನ ವಿಚಾರಣೆಯಲ್ಲಿ ಬಹಳಕಾಲ ವಿಲಂಬನ ಮಾಡುವರು. ನಿಮ್ಮ ಯೋಗ್ಯತೆಯ ತಕ್ಕಂತೆ ಕುಳಿತುಕೊಳ್ಳಲು ಇಲ್ಲಿ ಸ್ಥಳವಿಲ್ಲ. ಆದರೆ ಯಾರು ಮಣ್ಣಲ್ಲಿರುತ್ತಾರೋ ಅಂಥವರು ಭೂಮಿಯಮೇಲೆ ಕುಳಿತುಕೊಳ್ಳಲಡ್ಡಿಯಿಲ್ಲ. ನಾವು ಯಾವುದಕ್ಕೆ 'ಮಣ್ಣು' ಎನ್ನುತ್ತೇವೋ ಅದಕ್ಕೆ ನೀವು 'ರಾಷ್ಟ್ರ' ವೆನ್ನುತ್ತೀರಿ. ಇದು ನಮ್ಮ ಪೂರ್ವ

ಜರ ಮನೆಯು. ಇಲ್ಲಿ ನಾವು ಮೊದಲಿಗೆ ಹುಚ್ಚರನ್ನು ಬಂಧಿಸಿಡುತ್ತಿದ್ದೆವು; ಆದರೆ ಈಗ ದಿನಗಳು ಬದಲಾಗಿವೆ ಈಗ ಹಳ್ಳಿಯ ಜನರು ಸರದಾರರನ್ನು ಬಂಧಿಸತೊಡಗಿದ್ದಾರೆ. ಈ ಮೂರ್ಖತನಕ್ಕೆ 'ರಾಜ್ಯಕ್ರಾಂತಿ' ಎಂದು ಕರೆಯುತ್ತಾರೆ ನನ್ನ ತಲೆಯು ೩೬ ತಾಸುಗಳಲ್ಲಿ ಹಾರಿಸಲ್ಪಡುತ್ತದೆಂದು ಕಾಣುತ್ತದೆ. ಇದರಲ್ಲಿ ನನಗಾವುದೂ ಆತಂಕವೇ ಇಲ್ಲ ನನ್ನೊಡನೆ ಒಂದಿಷ್ಟು ಯೋಗ್ಯತೆಯಿಂದ ವರ್ತಿಸುವದಾದರೆ ನನಗೆ ನನ್ನ ನಶ್ಯದ ಡಬ್ಬಿಯನ್ನು ಕಳಿಸಿಕೊಡಬೇಕು. ಅದು ಆ ಕನ್ನಡಿಯ ಮಹಾಲಿನಲ್ಲಿದೆ. ನೀನು ಚಿಕ್ಕವನಿದ್ದಾಗ ಅಲ್ಲಿ ಆಟವನ್ನಾಡುತ್ತಿದ್ದೆ; ನಾನು ನಿನ್ನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆಟವಾಡಿಸುತ್ತಿದ್ದೆ. ನಿನಗೆ ಒಂದು ಸಂಗತಿಯ ನೆನಪನ್ನು ಮಾಡಿಕೊಡುತ್ತೇನೆ: ನೀನು ಸ್ವತಃ ಗಾವೆನ್‌ನೆಂದು ಹೇಳಿಕೊಳ್ಳುವಿ; ನಿನ್ನ ನರನರಗಳಲ್ಲಿ ಸರದಾರರ ರಕ್ತವು ಹರಿಯುತ್ತಿದೆ. ಅದೇ ರಕ್ತವು ನನ್ನ ನರನರಗಳಲ್ಲಿಯೂ ಹರಿದಾಡುತ್ತಿದೆ. ಆದರೆ ಅದೇ ರಕ್ತವು ನನ್ನನ್ನು ದೊಡ್ಡ ಯೋಗ್ಯತೆಗೆ ಏರಿಸುತ್ತದೆ; ಅದೇ ನಿನ್ನನ್ನು ಕೀಳ್ಮಟ್ಟಕ್ಕೆ ಇಳಿಸುತ್ತಿದೆ. ಈ ದೋಷವೂ ನಿನ್ನದೂ ಅಲ್ಲ; ನನ್ನದೂ ಅಲ್ಲ. ದುಷ್ಟ ಜನರಿಗೆ ತಾವು ದುಷ್ಟವಿರುವೆವೆಂಬ ಮಾತು ಎಂದಿಗೂ ತಿಳಿಯುವದೇ ಇಲ್ಲ. ರಾಜಕ್ರಾಂತಿಯೇ ಜಗತ್ತಿಗೆ ಅಪರಾಧವನ್ನು ಮಾಡಿರುತ್ತದೆ. ನೀವು ಯಾರನ್ನು ದೊಡ್ಡ ಅಪರಾಧಿಗಳೆಂದು ಗಣಿಸುವಿರೋ ಅವರೆಲ್ಲರೂ ನಿರಪರಾಧಿಗಳಾಗಿದ್ದಾರೆ! ನೀವು ಎಂಥ ಮೂರ್ಖರು! ನಿನ್ನದೇ ಉದಾಹರಣೆ ತೆಗೆದುಕೊಳ್ಳುವಾ. ನೀನು ಎಷ್ಟು ಒಳ್ಳೆಯವನಿರುವಿ; ಎಂಥಸದ್ಗುಣಗಳು ನಿನ್ನಲ್ಲಿವೆ! ರಾಜದರಬಾರದಲ್ಲಿ ನಿನ್ನ ಕೈ ಬೇಕಾದಹಾಗೆ ನಡೆಯುತ್ತದೆ. ಸತ್ಕಾರ್ಯಕ್ಕಾಗಿ ನೆತ್ತರವನ್ನು ಸುರಿಸುವ ಸರದಾರ ವಂಶದ ರಕ್ತವು ನಿನ್ನಲ್ಲಿ ಹರಿದಾಡುತ್ತಿದೆ. ನೀನು ಬ್ರಿಟನ್ನಿನ ರಾಜಪುತ್ರನಿರುವಿ. ಫ್ರಾನ್ಸಿನ ಡ್ಯೂಕನಾಗುವ ಅಧಿಕಾರ ನಿನಗಿದೆ. ನೀನು ನಿನ್ನ ಕರ್ತವ್ಯವನ್ನು ಚನ್ನಾಗಿ ಮಾಡುತ್ತಿರುವಿ. ನೀನು ನಿನ್ನ ವೈರಿಗಳಿಗಂತೂ ಕೆಟ್ಟವನಾಗಿರುವಿ ಮಿತ್ರರಿಗೆ ನೀನು ಮಹಾ ಮೂರ್ಖನಾಗಿರುವಿ. ಅದಿರಲಿ ಬಿಡು. ನನ್ನ ನಮಸ್ಕಾರಗಳನ್ನು ಸಿಮೋರೆಡಿನ್‌ನಿಗೆ ಹೇಳು."

ತನ್ನ ಜೇಬಿನಲ್ಲಿ ಕೈ ಹಾಕಿ ಶಾಂತ ಮುದ್ರೆಯಿಂದ ಮೆತ್ತಗಿನ ದನಿಯಲ್ಲಿ ಮಾರ್ಕ್ವಿಸನು ಮಾತನಾಡಿದನು. ನಂತರ ನಿಟ್ಟುಸಿರು ಬಿಟ್ಟು "ನಿನ್ನನ್ನು ಕೊಲ್ಲಬೇಕೆಂದು ಎಷ್ಟು ಉಪಾಯಗಳಿವೆ, ಅವೆಲ್ಲವುಗಳನ್ನು ಮಾಡಲಾಯಿತು. ಇದನ್ನು ನಿನ್ನ ಮುಂದೆ ಮುಚ್ಚಿಡುವದಿಲ್ಲ. ನಾನೇ ನಿನಗೆ ಮೂರು ಸಲ ಗುರಿಯಿಟ್ಟು ಗುಂಡು ಹಾರಿಸಿದೆನು. ಸ್ವಲ್ಪ ಅಸಭ್ಯ ವರ್ತನವಾಗುವದೆಂದೆನಬಹುದು. ಆದರೂ ಯುದ್ಧದಲ್ಲಿ ಶತ್ರುಗಳಿಗೆ ದಯ ತೋರಿಸುವದೆಂದರೆ ಕೆಟ್ಟ ಉದಾಹರಣೆಯನ್ನು ಹಾಕಿಕೊಟ್ಟಂತಾಗುವದು. ಆದಕಾರಣ ನಾವು ಒಬ್ಬರಿಗೊಬ್ಬರು ಹೊಡೆದಾಡಿದ್ದೇವೆ. ವಿಧ್ವಂಸಕ ಚಟುವಟಿಕೆಗಳು ನಡೆದೇ ಇವೆ. ಮನುಷ್ಯರ ರುಂಡಗಳ ಹಾರಾಟವು ಸಾಗಿಯೇ ಇದೆ. ಈ ನಡುವೆ ರಾಜನ ಬಲಿಯಾಯಿತು. ದೇವರ ಮನಸಿಗೆ ಬಂದಿದೆ ಈ ಶತಕವು ಎಷ್ಟು ಆಶ್ಚರ್ಯಕರವಾಗಿದೆ! ವ್ಹಾಲ್ಟೇಅರ ಮತ್ತು ರೂಸ್ಸೋ ಇವರ ಕೊಲೆಯು ಮೊಟ್ಟ ಮೊದಲಿಗೇ ಆಗಿದ್ದರೆ ಪ್ರಸಂಗವು ಈ ಘಟ್ಟಕ್ಕೆ ಬರುತ್ತಿದ್ದಿಲ್ಲ. ಅವರು ತತ್ವಜ್ಞಾನಿ ಪುರುಷರಾಗಿದ್ದರು. ಆದರೆ ಎಷ್ಟು ಜನರ ಪ್ರಾಣಹರಣ ಮಾಡಿದರವರು! ನೀವು ರಾಜಸತ್ತಿಗೆ ಏಕೆ ಹೆಸರಿಡುವಿರಿ? ಯಾಕೆಂದರೆ, ಅವರು ಆತತಾಯಿಗಳನ್ನೂ ವ್ಯಭಿಚಾರಿಗಳನ್ನೂ ಗಲ್ಲಿಗೇರಿಸಿದರೆಂದೋ? ಇಂಥ ಜನರಿಗೆ ಸಭ್ಯಗೃಹಸ್ಥರ ಮಧ್ಯದಲ್ಲಿ ಸ್ಥಾನ ಕೊಟ್ಟುದಕ್ಕಾಗಿಯೋ ಏನೋ! ಇದೇ ಸಂಗತಿಯು ಅನ್ಯಾಯದ ಮೂಲವೆಂದು ನಿಮಗೆ ಕಂಡುಬಂದಿತೋ ಹೇಗೆ? ನಾನಾದರೂ ಚಿಕ್ಕವನಿರುವಾಗ ಇದೇ ರೀತಿಯಲ್ಲಿ ಚೀರಿಕೊಳ್ಳುತಿದ್ದೆ. ಆಗ ನಾನು ನಿನ್ನಷ್ಟೇ ಮೂರ್ಖನಾಗಿದ್ದೆನು."

ಅವನು ಜೇಬಿನಲ್ಲಿ ಕೈಹಾಕಿ ನಶ್ಯದ ಡಬ್ಬಿಯು ಇದೆಯೋ ಇಲ್ಲವೋ ಎಂಬದನ್ನು ನೋಡಿ ಮತ್ತೆ ಮಾತನಾಡತೊಡಗಿದನು.

"ನಾವು ಆಗ ಕಾಲಹರಣ ಮಾಡುವದಕ್ಕೆಂದು ಬಡಬಡಿಸುತ್ತಿದ್ದೆವು. ಆಮೇಲೆ ತತ್ವವೇತ್ತರ ಉದಯವಾಯಿತು. ಆ ತತ್ವವೇತ್ತರ ಪುಸ್ತಕಗಳನ್ನು ಅವರೇ ಸುಟ್ಟು ಹಾಕುವದರ ಬದಲು ಸುಟ್ಟು ಹಾಕಲಾಯಿತು. ಈ ತತ್ವವೇತ್ತರ ಸುತ್ತುಮುತ್ತು ದೊಡ್ಡ ದೊಡ್ಡ ರಾಜಮನೆತನದ ಜನರು

ದುಂಬಾಲಬಿದ್ದರು. ಪ್ರಶಿಯಾದ ರಾಜನೂ ಇದರಲ್ಲಿ ಸೇರಿಕೊಂಡನು. ಕಾಗದಗಳನ್ನು ಚಿತ್ರಿಸುವವರನ್ನು ನಾನು ಅಲ್ಲಿಂದಲ್ಲೇ ಮುರಿಬಡಿಯ ಬೇಕೆಂದು ಎಂದೋ ಮಾಡಿದ್ದೆನು. ಎಲ್ಲೆಲ್ಲಿ ಇಂಥ ಜನರು ಕಲೆಯುವರೋ ಅಲ್ಲಲ್ಲಿ ಕೊಲೆಪಾತಕಿಗಳ ಪ್ರಾದುರ್ಭಾವ ಆಗತಕ್ಕದ್ದೇ ಸರಿ. ಎಲ್ಲಿಯ ವರೆಗೆ ಬರೆಯಲು ಮಸಿ-ಲೆಕ್ಕಣಿಕೆಗಳು ಇರುವವೋ ಅಲ್ಲಿಯ ವರೆಗೆ ಆ ಮೂರ್ಖರು ಮೂರ್ಖತನದ ಸಂಗತಿಗಳನ್ನು ಮಾಡುವವರೇ. ಪುಸ್ತಕ ಗಳನ್ನೂ ಅಪರಾಧಿ ಜನರನ್ನೂ ಉತ್ಪನ್ನ ಮಾಡುತ್ತಾರೆ. ಅಧಿಕಾರ, ಅಧಿಕಾರವೆಂದು ನೀವೇಕೆ ಬಡಬಡಿಸುತ್ತಿರುವಿರಿ ? ಮನುಷ್ಯರ ಅಧಿ ಕಾರ-ಜನತೆಯ ಅಧಿಕಾರವೆಂಬುದೆಲ್ಲವೂ ಸೋಗಾಗಿರುತ್ತದೆ. ಮೂರ್ಖ ತನದ ಸಂತೆಯಾಗಿದೆ. ಇದರಲ್ಲಿ ಅರ್ಥವೂ ಇಲ್ಲ; ತತ್ವವೂ ಇರುವದಿಲ್ಲ. ಯಾವನಾದರೊಬ್ಬ ವ್ಯಕ್ತಿಯು ಇಂಥ ಮನೆತನದವನು; ಇಂಥಿಂಥ ಸ್ಥಳ ಗಳಲ್ಲಿ ಅಂಥಂಥ ವಿಜಯಗಳನ್ನು ಸಂಪಾದಿಸಿದವನು; ಇಂಥವನೊಬ್ಬನ ಅಜ್ಜನು ಇಂಥದೊಂದು ಮನೆತನದ ಮೂಲ ಪುರುಷನು ಎಂದೆನ್ನುತ್ತಿರು ವಾಗ ಅಂಥ ಜನರು ತಮ್ಮ ಹಕ್ಕನ್ನೂ ಅಧಿಕಾರವನ್ನೂ ಹೇಳುವದು ಯೋಗ್ಯವಾದೀತು ಅದು ಬಿಟ್ಟು ನಿಮ್ಮ ಆ ತುಡುಗರಿಗೆ ಅಧಿಕಾರ ಬೇಡುವ ಹಕ್ಕಾದರೂ ಎಲ್ಲಿದೆ? ನೀನು ಎಂಥ ಉಚ್ಚ ಕುಲದಲ್ಲಿ ಹುಟ್ಟಿ ಜೀವನವನ್ನು ಹಾಳು ಮಾಡಿದಿ ಎಂಬದನ್ನು ಕಂಡು ನನಗೆ ಬಲು ಕೆಡುಕೆ ನಿಸುತ್ತಿದೆ. ನೀನು ಮೂರ್ಖನಾದ್ದರಿಂದ ನಿನ್ನ ಯೋಗ್ಯತೆಯು ಒಬ್ಬ ಸಿಪಾಯಿಯಷ್ಟೇನೂ ಇರುವದಿಲ್ಲ. ನಾನು ಮುದುಕನಾಗಿರುವಾಗ ನೀನು ಇನ್ನೂ ಹುಡುಗನಾಗಿರುವಿ ನಾನು ಹಿಂದೆ ಎಷ್ಟು ದೊಡ್ಡವನಿದ್ದೆನೋ ಇಂದಿಗೂ ಅಷ್ಟೇ ದೊಡ್ಡವನಾಗಿರುವೆನು. ನೀನು ದೊಡ್ಡವನಾಗುತ್ತ ನಡೆ ದಂತೆ ಅಷ್ಟಷ್ಟು ಅಧೋಗತಿಗೆ ಇಳಿಯುತ್ತ ನಡೆದಿ. ನಾವು ಒಬ್ಬರಿಗೊ ಬ್ಬರು ಬೆಟ್ಟಿಯನ್ನು ತೆಗೆದುಕೊಳ್ಳುವದನ್ನು ನಿಲ್ಲಿಸಿದಾಗಲೆ ನಮ್ಮ ಮಾರ್ಗ ಗಳು ಭಿನ್ನವಾದವು. ನಾನು ಪ್ರಾಮಾಣಿಕತನದಿಂದ ನಡೆದರೆ ನೀನು ಅದರ ವಿರುದ್ಧವಾಗಿ ನಡೆಯತೊಡಗಿದಿ. ಇದರ ಕೊನೆಯು ಹೇಗಾಗುವದನ್ನು ಬಲ್ಲವರಾರು ? ಎಲೆ ಸಭ್ಯಗೃಹಸ್ಥನೇ, ನಿನ್ನ ಮಿತ್ರನು ರಾಕ್ಷಸನಾಗಿ

ದ್ದಾನೆ. ನೀನು ನಿಜವಾಗಿಯೇ ಸೈನ್ಯದಲ್ಲಿ ಕೆಲವೊಂದು ರೀತಿಯಲ್ಲಿ ದಯಾಳು ತನವನ್ನು ಮಾಡಿರುವಿ ಎಂಬದನ್ನು ನಾನು ಒಪ್ಪಿಕೊಳ್ಳುತ್ತೇನೆ. ನೀನು ಇಂದಿಗೆ ಒಡೆಯನ ಪದವಿಯನ್ನಲಂಕರಿಸಿರುವಿ. ರಾಜ್ಯವನ್ನು ನಡೆಯಿಸು; ಬೇಕಾದರೆ ಸ್ವೇಚ್ಛಾಚಾರಿಯಾಗಿ ಮನಬಂದಂತೆ ನಡೆದುಕೋ; ಬೇಕಾದ್ದನ್ನು ಮಾಡು. ಆದರೆ ಆ ಯೋಗದಿಂದ ಧರ್ಮದ ಉಜ್ವಲ ಸ್ವರೂಪವೇನೂ ನಷ್ಟವಾಗುವದಿಲ್ಲ. ಅಥವಾ ೧೫೦೦ ವರುಷಗಳಿಂದ ಅವ್ಯಾಹತವಾಗಿ ನಡೆದು ಬಂದ ರಾಜಸತ್ತೆಯನ್ನು ಯಾರೂ ಅಲ್ಲಗಳೆಯಲಾರರು. ಅಥವಾ ಹಳೆಯ ಕಾಲದ ಸರದಾರಗಿರಿ ಅಥವಾ ನಷ್ಟವಾದ ಈಗಿನ ಸರದಾರಗಿರಿಯು ನಿಮಗಿಂತಲೂ ಎಷ್ಟೋ ಪಟ್ಟು ಹೆಚ್ಚಿನದಾಗಿತ್ತೆಂಬದೇನು ಸುಳ್ಳಾಗುವ ದಿಲ್ಲ. ನೀವು ರಾಜಮನೆತನದ ಜನರ ಅಧಿಕಾರದ ಉಚ್ಚಾಟನೆಯನ್ನು ಮಾಡಬೇಕೆನ್ನುವಿರಿ. ಅದರ ಬಗ್ಗೆ ನಾವು ನಮ್ಮ ಅಸಮ್ಮತಿಯನ್ನು ವ್ಯಕ್ತ ಪಡಿಸುತ್ತೇವೆ. ಆದರೆ ಪ್ರಶ್ನೆ ಅದಿರುವದಿಲ್ಲ. ಫ್ರಾನ್ಸದ ರಾಜನು, ಅಲ್ಲಿಯ ರಾಜ್ಯ, ರಾಜಪುತ್ರ, ಸೇನಾಧಿಪತಿ, ನ್ಯಾಯಾಧೀಶ, ಮಂತ್ರಿ ಮೊದಲಾದ ಅಧಿಕಾರಿಗಳು ಒಳ್ಳೇ ರೀತಿಯಿಂದ ರಾಜ್ಯಕಾರಭಾರ ನಡೆಯಿಸಿದ್ದರೂ ನೀವು ಅವರ ವಿಧ್ವಂಸನವನ್ನು ಮಾಡಿದಿರೆಂಬುವದೇ ನಿಜವಾದ ಪ್ರಶ್ನೆ ಯಾಗಿದೆ. ನೀವು ದೇಶವನ್ನು ಹಾಳುಗೆಡಿವಿದಿರಿ. ಇದಕ್ಕೆ ನಿಮಗೇನೆನ್ನ ಬೇಕೋ ತಿಳಿಯದಾಗಿದೆ. ನಮ್ಮ ದೇಶವೆಂದರೆ ಎಲ್ಲ ದೇಶಗಳ ಮುಕುಟಮಣಿ ಯಾಗಿತ್ತು. ಅಲ್ಲಿಯ ಒಂದೊಂದು ಹಳ್ಳಿಗಳೆಂದರೆ ಒಂದೊಂದು ಗುಣದ ತೌರುಮನೆಯಾಗಿದ್ದವು. ಆದರೆ ನಿಮ್ಮಂಥ ಮೂರ್ಖರಿಗೆ ಅದರ ಪರಿವೆ ಯೇನು? ಎಲ್ಲವನ್ನು ಹಾಳುಗೆಡಿವಿದಿರಿ. ನೀವು ಪಶುಗಳಿಂತಲೂ ಕೀಳಾಗಿ ನಡೆದುಕೊಂಡಿರಿ. ನಿಮಗೆ ಸರದಾರ ಗಿರಿಯು ಬೇಡ. ಆದರೆ ಅದರ ಶೀವಿಯು ಬೇಕು. ಅದರ ಬಗ್ಗೆ ನೀವು ಶೋಕಿಸುತ್ತಿರಬಹುದು. ಎಲ್ಲಿದೆ ಆ ಗತವೈಭವವು! ಈಗ ಯುದ್ಧದ ಪೂರ್ವದಲ್ಲಿ ಒಬ್ಬರಿಗೊಬ್ಬರು ಅಭಿ ವಂದನ ಮಾಡುವ ಶಿಷ್ಟಾಚಾರವಾದರೂ ಎಲ್ಲುಳಿದಿದೆ? ರಣಾಂಗಣದಲ್ಲಿ ಶೌರ್ಯಸಂಪನ್ನರಾಗಿ ಅವತೀರ್ಣರಾಗುವ ಮೊದಲಿನ ಕಾಲದ ಡೌಲಾ ದರೂ ಎಲ್ಲಿದೆ? ದೇಶದಲ್ಲಿ ಶೂರ ವೀರರೆಂದು ಹೆಸರುವಾಸಿಗಳಾದ ಆ ಪರಾ

ಕ್ರಮಿಗಳು ಎಲ್ಲಿ ಹೋಗಿ ಕುಳಿತಿರುವರು ? ನೀವು ಈ ಎಲ್ಲ ಸದ್ಗುಣಗಳ ಸತ್ಯಾನಾಶವನ್ನೇ ಮಾಡಿ ಬಿಟ್ಟಿರುವಿರಿ. ಅದರ ಕೊನೆಯು ಮುಗಿದು ಹೋಗಲಿ. ನಿಮ್ಮ ಕೊಡಲಿಯ ಪ್ರಯೋಗವನ್ನು ತೀರಿಸಿಕೊಂಡು ಬಿಡಿರಿ. ಹೊಸ ಜನರನ್ನು ಸಿದ್ಧಗೊಳಿಸಿರಿ. ಈ ಹೊಸ ಜನರ ಬೆಳೆಯು ಕವಡಿ ಯಷ್ಟೂ ಇರಲಾರದೆಂಬವನ್ನು ಮಾತ್ರ ಲಕ್ಷದಲ್ಲಿಡಿರಿ. ” ಸ್ವಲ್ಪ ಹೊತ್ತು ಸುಮ್ಮನಾಗಿ ಪುನಃ ಆರಂಭಿಸಿದನು.

“ ನಮ್ಮಂಥ ದೊಡ್ಡವರ ಹಾದಿಗೆ ಬರಬೇಡಿರಿ. ರಾಜ, ಸರದಾರ, ಧರ್ಮಗುರುಗಳ ಸಂಹಾರ ಮಾಡಿರಿ. ಅವರ ಚರ್ಮವನ್ನು ಸುಲಿಯಿರಿ, ಅವರ ಕುತ್ತಿಗೆ ಕೊಯ್ಯಿರಿ, ಅವರನ್ನು ಕಾಲ್ಕೆಳಗೆ ಹಾಕಿ ತುಳಿಯಿರಿ, ಹಳೆಯ ಕಾನೂನುಗಳನ್ನು ಕಸದ ಬುಟ್ಟಿಗೆ ಎಸೆಯಿರಿ, ಸಿಂಹಾಸನವನ್ನು ಮುರಿದು ಚೂರು ಚೂರು ಮಾಡಿರಿ, ದೇವಾಲಯಗಳನ್ನು ಸುಟ್ಟು ಬೂದಿ ಮಾಡಿರಿ ನಿಮಗೇನು ಬೇಕೋ ಅದೆಲ್ಲವನ್ನೂ ಮಾಡಿರಿ. ನೀವು ದೇಶ ದ್ರೋಹಿಗಳಾಗಿರುವಿರಿ, ಅಂಜುಬುರುಕರಾಗಿರುವಿರಿ; ನನಗೆ ಏನು ಮಾತಾ ಡಬೇಕೆಂದಿತ್ತೋ ಅದೆಲ್ಲವನ್ನೂ ಕಾರಿಕೊಂಡಿದ್ದೇನೆ. ನನ್ನನ್ನು ಕೊಲ್ಲಂಬ ಕ್ಕೇರಿಸಿರಿ; ನಾನು ನಿಮ್ಮ ನಮ್ರ ಸೆರೆಯಾಳಾಗಿದ್ದೇನೆ ನಾನೀಗ ಸ್ವತಂತ್ರನೇ ಆಗಿದೆ. ನಾನು ನಿಮ್ಮೆದುರಿಗೆ ಎಲ್ಲವನ್ನು ಸ್ಪಷ್ಟವಾಗಿ ಹೇಳಿ ಬಿಟ್ಟಿದ್ದೇನೆ. ನಿಮಗೆ ಮಾಡುವದೇನೇನಿದೆಯೋ ಅದೆಲ್ಲವನ್ನು ಮಾಡಿ ತೀರಿಸಿಕೊಳ್ಳಿರಿ. ”

“ ನೀವು ಸ್ವತಂತ್ರರಾಗಿರುವಿರಿ ” ಎಂದು ಗಾವೆನ್‌ನು ಕೂಗಿ ಅವನು ತನ್ನ ನಿಲುವಂಗಿಯನ್ನು ಕಳೆದು ಕಕ್ಕನ ಕಡೆಗೆ ತೆರಳಿದನು. ನಿಲುವಂಗಿ ಯನ್ನು ಅವನ ಹೆಗಲ ಮೇಲೆ ಹಾಕಿ, ಟೊಪ್ಪಿಗೆಯನ್ನು ಮುಖದ ಮೇಲೆ ಎಳೆದನು. ಇಬ್ಬರೂ ಅಷ್ಟೇ ಎತ್ತರವಾಗಿದ್ದರು.

“ ಇವನ್ನೇನು ಮಾಡುತ್ತಿರುವೆ ? ” ಮಾರ್ಕ್ವಿಸನೆನ್ನಲಾಗಿ, ಗಾವೆ ನ್‌ನು ದೊಡ್ಡ ದನಿಯಿಂದ ‘ ನಾಯಕನೇ, ಬಾಗಿಲವನ್ನು ತೆರೆ ’ ಎಂದು ಕೂಗಿದನು. ಬಾಗಿಲವು ತೆರೆಯಿತು. ‘ ನನ್ನ ಹಿಂದಿನಿಂದ ಬಾಗಿಲವನ್ನು ಹಾಕಿಕೋ ’ ಎಂದು ಗಾವೆನ್‌ನೆಂದನು.

ಅವನು ಹುಚ್ಚುಹಿಡಿದ ತನ್ನ ಕಕ್ಕನನ್ನು ಹೊರಗೆ ದಬ್ಬಿದನು. ದಿವಾಣ ಖಾನೆಯಲ್ಲಿ ಮಂದ ಪ್ರಕಾಶವಿತ್ತು. ಎಚ್ಚರವಿದ್ದ ಕೆಲವು ಸಿಪಾಯರು ಒಂದು ದೊಡ್ಡ ಆಕೃತಿಯನ್ನು ನೋಡಿದರು. ಆ ಆಕೃತಿಯು ಮೈಯಲ್ಲಿ ಹೊರಗೆ ಹೋಗುವಾಗ ಸೇನಾಧಿಪತಿಯ ನಿಲುವಂಗಿಯಿದ್ದುದು ಅವರ ಕಣ್ಣಿಗೆ ಬಿದ್ದಿತು. ಅವರು ಅವನಿಗೆ ಲಷ್ಕರೀ ಸಲಾಂ ಮಾಡಿದರು. ಅವನು ಹೊರಟು ಹೋದನು.

ಮಾರ್ಕ್ವಿಸನು ತಲೆ ತುರಿಸಿಕೊಳ್ಳುತ್ತ ಹೊರಬಿದ್ದನು. ರಕ್ಷಕರು ಅವನು ಗಾವೆನ್‌ನೆಂದೇ ತಿಳಿದು ಅವನಿಗೆ ಸಲಾಂ ಮಾಡಿದರು.

ಅವನು ಹೊರಬಿದ್ದು ಬಂದಾಗ ಅವನ ಕಾಲಿಗೆ ಹುಲ್ಲು ಹತ್ತಿತು. ಅವನಿಗೆ ಸ್ವಾತಂತ್ರ್ಯದ ಪ್ರಾಣವು ಸಂಚಾರವಾಗತೊಡಗಿದ್ದರಿಂದ ಅವನು ಶಾಂತತೆಯಿಂದ ಸ್ವಲ್ಪ ಹೊತ್ತು ನಿಂತನು. ಅವನು ಆಶ್ಚರ್ಯದಿಂದ ದಂಗಾ ಗಿದ್ದನು. ಬಾಗಿಲು ತೆರೆದುದರ ಲಾಭವನ್ನು ತಾನು ತೆಗೆದುಕೊಂಡುದು ಯೋಗ್ಯವಾಯಿತೋ ಇಲ್ಲವೋ ಎಂಬುದರ ವಿಚಾರವನ್ನು ಅವನು ಮಾಡು ತ್ತಿದ್ದನು. ಸ್ವಲ್ಪ ಸಮಯದ ನಂತರ ಅವನು ಕೈಮೇಲೆತ್ತಿ 'ದೇವಾ, ನಿನ್ನ ಲೀಲೆಯು ಅಗಾಧವಾದುದು' ಎಂದನು.

ಪುನಃ ಕತ್ತಲೆ ಕೋಣೆಯ ಬಾಗಿಲು ಹಾಕಲ್ಪಟ್ಟಿತು. ಗಾವೆನ್‌ನು ಒಳಗೇ ಉಳಿದನು.



## ೨೩.

**ಆ ಕಾಲದಲ್ಲಿ ಲಷ್ಕರಿ ನ್ಯಾಯ ಸಭೆಗಳು ಮನಬಂದಂತೆ ನಡೆಯು ತ್ತಿದ್ದವು. ಸಿಮೋರೆಡಿನ್‌ನು ಆ ಖಿಂಡಿ ಬಿದ್ದ ಸ್ಥಳದಲ್ಲಿಯೇ ವಿಚಾರಣೆ ಆರಂಭಿಸಿದನು. ಎಲ್ಲ ವಿಚಾರಣೆಯನ್ನು ಬೇಗ ಬೇಗ ಮುಗಿಸಬೇಕಾಗಿತ್ತ ವನಿಗೆ. ಅಪರಾಧಿಯನ್ನು ಕೂಡಲೆ ಗಲ್ಲಿಗೇರಿಸಬೇಕಾಗಿತ್ತು. ಅವನ ಅಪ್ಪ ಣೆಯಂತೆ ಮಧ್ಯಾಹ್ನದ ಒಂದು ಗಂಟೆಗೆ ವಿಚಾರಣೆ ಆರಂಭವಾಯಿತು.**

ಮೂರು ಕುರ್ಚಿಗಳು, ಒಂದು ಮೇಜು ಹಾಕಲ್ಪಟ್ಟಿದ್ದವು. ಕಚೇರಿಯ ಸಾಮುಗ್ರಿಯೆಂದರೆ ಇಷ್ಟೆ. ಮುಂದೆಯೊಂದು ಗಡಗಂಚಿಯನ್ನಿಡಿಸಲಾಗಿತ್ತು. ಕುರ್ಚಿಯ ಮೇಲೆ ನ್ಯಾಯಾಧೀಶರು; ಗಡಗಂಚಿಯಮೇಲೆ ಅಪರಾಧಿಗಳು ಕೂಡ್ರಬೇಕಾಗಿತ್ತು. ಮೇಜಿನ ಮೇಲೆ ಅರಗು, ಮೋಹರು, ದೌತಿ, ಕಾಗದ, ಲೆಕ್ಕಣಿಕೆಗಳಲ್ಲದೆ ಮುದ್ರಿಸಿದ ಎರಡು ಜಾಹೀರ ಪ್ರಕಟನೆಗಳು ಇದ್ದವು. ಸಿಮೋರೇಡಿನ್‌ನು ಮುಖ್ಯ ನ್ಯಾಯಾಧೀಶನಾಗಿ ನಡುವಿನ ಕುರ್ಚಿಯಲ್ಲಿ ಮಂಡಿಸಿದನು. ಅವನ ಬಲಬದಿಗೆ ಗುಶೆಪ್‌ನು, ಎಡಬದಿಗೆ ರೇಡೋ ಕುಳಿತ್ತಿದ್ದರು. ಕಚೇರಿಯಲ್ಲಿ ಪ್ರೇಕ್ಷಕರಾಗಿ ಎಷ್ಟೋ ಸೈನಿಕರು ನೆರೆದಿದ್ದರು.

ಸಿಮೋರೆಡಿನ್‌ನು ಸೈನಿಕರ ಉಡುಪು ತೊಟ್ಟಿದ್ದನು. ರೆಡೋನ ಗಾಯಗಳು ಇನ್ನೂ ಪೂರ್ಣ ಮಾದಿರಲಿಲ್ಲ. ಅವನ ತಲೆಗೆ ಕಟ್ಟಿದ ಗಾಯದ ಪಟ್ಟಿಯು ಹಾಗೆಯೇ ಇತ್ತು. ವಿಚಾರಣೆ ಆರಂಭವಾಗುವ ಮೊದಲೇ ಗುಪ್ತಚಾರನೊಬ್ಬನು ಮೇಜಿನ ಹತ್ತಿರ ನಿಂತಿದ್ದನು. ಹೊರಗೆ ಅವನ ಕುದುರೆಯ ಖುರಪುಟಧ್ವನಿಯು ಕೇಳಬರುತ್ತಿತ್ತು. ಸಿಮೋರೆಡಿನ್‌ನು ಕೆಳಗಿನಂತೆ ಬರೆದುಕೊಟ್ಟನು.

“ ಲ್ಯಾಂಟ್‌ನೆಕ್‌ನನ್ನು ಬಂಧಿಸಲಾಗಿದೆ. ನಾಳೆ ಅವನನ್ನು ಗಲ್ಲಿಗೇರಿಸಲಾಗುವದು ”ಎಂದು ಬರೆದು ಪಾಕೀಟನ್ನು ಬಂದುಮಾಡಿ ಅದನ್ನು ಪ್ರಜಾಪಕ್ಷದ ಅಧಿಕಾರಿಯ ಕಡೆಗೆ ರವಾನಿಸಿದನು. ಆ ನಂತರ ಸಿಮೋರೆಡಿನ್‌ನು ದೊಡ್ಡ ಧ್ವನಿಯಿಂದ “ ಕತ್ತಲೆಯ ಕೋಣೆಯನ್ನು ತೆರೆಯಿರಿ ” ಎಂದು ಕೂಗಿದನು. ಕೂಡಲೆ ಬಾಗಿಲವು ತೆರೆಯಲ್ಪಟ್ಟಿತು. ಅಪರಾಧಿಯಾದ ಗಾವೆನ್‌ನನ್ನು ಇಬ್ಬರು ಸಿಪಾಯರು ತೆಗೆದುಕೊಂಡು ಬಂದರು.

ಸಿಮೋರೆಡಿನ್‌ನು ಆಶ್ಚರ್ಯಚಕಿತನಾಗಿ ‘ ಗಾವೆನ್! ’ ಎಂದಂದು, ನನಗೆ ಅಪರಾಧಿ ಬೇಕಾಗಿದ್ದಾನೆಂದನು.

ಗಾವೆನ್‌ನು “ ಇಗೋ ನೋಡಿರಿ ನಾನಿಲ್ಲಿ ನಿಂತಿದ್ದೇನೆ ” ಎಂದನು.

“ ನೀನೋ ? ”

“ ಅಹುದು, ನಾನೇ. ”

" ಲ್ಯಾಂಟ್‌ನೆಕ್‌ನೆಲ್ಲಿದ್ದಾನೆ? "

" ಅವನು ಮುಕ್ತನಾಗಿದ್ದಾನೆ. "

" ಏನು? ಮುಕ್ತನಾಗಿದ್ದಾನೆಯೇ ? "

" ಅಹುದು. "

" ಓಡಿ ಹೋದನೇ? "

" ಅಹುದು, ಓಡಿಹೋದನು. "

ಸಿಮೋರೆಡಿನ್‌ನು ತರಗುಟ್ಟಿ ನಡುಗುತ್ತ " ನಿಜವಾಗಿ ಈ ಕಿಲ್ಲೆಯು ಅವನದಾಗಿದೆ. ಅವನಿಗೆ ಇಲ್ಲಿಯ ಗುಪ್ತಮಾರ್ಗಗಳೆಲ್ಲವೂ ಗೊತ್ತಿವೆ. ನಾನೇ ಬಹಳ ಎಚ್ಚರಿಕೆ ತೆಗೆದುಕೊಳ್ಳಬೇಕಾಗಿತ್ತು. ಅವನಿಗೆ ಯಾರ ನೆರವೂ ಬೇಕಾಗಿರಲಿಕ್ಕಿಲ್ಲ" ಎಂದನು.

" ಅವನಿಗೆ ನೆರವು ದೊರೆಯಿತು. ಅದನ್ನು ಕೊಟ್ಟವನೇ ನಾನು. "

" ಅವನು ಓಡಿಹೋಗಲು ನೀನು ನೆರವಾದಿಯಾ? "

" ಅಹುದು. ನಾನೇ ನೆರವಾದೆ. ನಾನೊಬ್ಬನೇ ಆ ಅಪರಾಧಿಯ ಹತ್ತಿರವಿದ್ದೆನು. ನಾನು ನನ್ನ ನಿಲುವಂಗಿಯನ್ನು ತೆಗೆದು ಅವನ ಭುಜದ ಮೇಲೆ ಹಾಕಿದೆನು. ಅವನು ಮುಖವನ್ನು ಮುಚ್ಚಿಕೊಳ್ಳಲು ಮುಖಪರದೆಯನ್ನು ಕೊಟ್ಟೆನು. ನನ್ನ ಬದಲು ಅವನು ಹೊರಬಿದ್ದನು. ನಾನು ಅವನ ಸ್ಥಳದಲ್ಲಿದ್ದೇನೆ. ನಾನೇ ಅಪರಾಧಿ. ಈಗ ನಿಮ್ಮೆದುರು ನಿಂತಿದ್ದೇನೆ."

" ನೀನು ಹಾಗೆ ಮಾಡಿರಲಾರಿ. "

" ಇಲ್ಲ. ನಾನೇ ಮಾಡಿದ್ದೇನೆ. "

" ಅದು ನನಗೆ ಅಶಕ್ಯವೆಂದು ತೋರುತ್ತದೆ. "

" ಇಲ್ಲ. ನಿಜವೇ ಇದೆ. "

" ಲ್ಯಾಂಟ್‌ನೆಕ್‌ನನ್ನು ನೀನು ಹೋಗಗೊಟ್ಟೆಯಾ? "

" ಅಹುದು, ರಾತ್ರಿಯೇ ಅವನನ್ನು ಹೋಗಗೊಟ್ಟೆನು. "

" ನಿನಗೆ ಹುಚ್ಚು ಹಿಡಿದಂತೆ ಕಾಣುವದು. "

" ಇಲ್ಲ, ನಿಜವನ್ನೇ ಹೇಳುತ್ತಿದ್ದೇನೆ. "

" ಸ್ವಲ್ಪ ಹೊತ್ತು ಶಾಂತತೆ ನೆಲೆಸಿತು. ಸಿಮೋರೆಡಿನ್‌ನು ತೊದಲುತ್ತ " ಅಂದಮೇಲೆ ನಾನು ನಿನಗೆ—" ಎಂದೆನ್ನುಷ್ಟರೊಳಗೆ ಗಾವೆನ್‌ನು " ದೇಹಾಂತ ಶಿಕ್ಷೆ " ಎಂದಂದನು.

ಸಿಮೋರೆಡಿನ್‌ನ ಮುಖದಲ್ಲಿ ಪ್ರೇತಕಳೆಯು ಸುರಿಯಿತು. ಮಿಂಚು ಬಡಿದ ಮನುಷ್ಯನಷ್ಟು ನಿಶ್ಚಲನಾಗಿ ಕುಕ್ಕರಿಸಿದನು. ಅವನ ಮೈಯೆಲ್ಲ ಬೆವರಿನಿಂದ ತೊಯ್ದಿತ್ತು. ಕೈಗಡದ ಧೈರ್ಯವನ್ನು ತಂದುಕೊಂಡು " ಈ ಅಪರಾಧಿಯನ್ನು ಕೂಡ್ರಿಸಿರಿ " ಅಪ್ಪಣೆ ಮಾಡಿದನು. ಗಾವೆನ್‌ನು ಅಲ್ಲಿ ಕುಳಿತುಕೊಂಡನು.

ಸಿಮೋರೆಡಿನ್‌ನು " ನಿನ್ನ ಕತ್ತಿಯನ್ನು ಒರೆಯಿಂದ ಹಿರಿ" ಎಂದನು. ಮತ್ತೆ ಕುಗ್ಗಿದ ದನಿಯಲ್ಲಿ ಸಾವಕಾಶವಾಗಿ ಸಿಮೋರೆಡಿನ್‌ನು 'ಅಪರಾಧಿಯೇ ನಿಲ್ಲು " ಎಂದು ಹೇಳಿದನು. ಗಾವೆನ್‌ನು ಎದ್ದುನಿಂತನು.

" ನಿನ್ನ ಹೆಸರೇನು? "

" ಗಾವೆನ್ "

" ನೀನಾರು? "

" ನಾನು ಪ್ರಜಾಪಕ್ಷದ ಸೈನ್ಯದಲ್ಲಿಯ ಒಬ್ಬ ಸೇನಾಪತಿ. "

" ಓಡಿಹೋದವನು ನಿನಗೇನಾಗಬೇಕು? "

" ಅವನು ನನ್ನ ಚಿಕ್ಕಜ್ಜನಾಗಬೇಕು. "

" ನಿನಗೆ ಪ್ರಜಾಪಕ್ಷದ ಜಾಹೀರನಾಮೆ ಗೊತ್ತಿದೆಯೇ? "

" ಗೊತ್ತಿದೆ. "

" ನಿನ್ನ ಸಂರಕ್ಷಣೆಗಾಗಿ ವಕೀಲರನ್ನು ತರುವದಿದ್ದರೆ ತೆಗೆದುಕೊಂಡು ಬಾ. "

" ನಾನೇ ನನ್ನ ಸಂರಕ್ಷಣೆಯನ್ನು ಮಾಡಿಕೊಳ್ಳುತ್ತೇನೆ. "

" ಹಾಗೇ ಆಗಲಿ. " ಸಿಮೋರೆಡಿನ್‌ನಿಗೆ ಪುನಃ ದುಃಖವು ಒತ್ತರಿಸಿತು. ಬಾಯಿ ಹೊಲಿದುಬಿಟ್ಟಿತು. ಗಾವೆನ್‌ನು ತಲೆಯಲ್ಲಿಯ ವಿಚಾರಗಳನ್ನು ಕೇಂದ್ರೀಕರಿಸಿಕೊಳ್ಳಲು ನಿಂತಲ್ಲಿಯೇ ತಲ್ಲೀನನಾದನು.

"ನಿನಗೆ ಏನು ಹೇಳಬೇಕಾಗಿದೆಯೋ ಅದೆಲ್ಲವನ್ನೂ ಹೇಳು" ಎಂದು ಸಿಮೋರೆಡಿನ್‌ನು ಹೇಳಿದ್ದನ್ನು ಕೇಳಿ, ಗಾವೆನ್‌ನು ತಲೆ ಮೇಲಕ್ಕೆ ತ್ತಿದ್ದನು; ಎತ್ತಲೂ ನೋಡದೆ ಅವನು ಮಾತನಾಡತೊಡಗಿದನು.

"ನನಗೆ ಒಂದು ಸಂಗತಿಯಿಂದ ಇನ್ನೊಂದು ಸಂಗತಿಯ ಕಡೆಗೆ ನೋಡಲಾಗಲಿಲ್ಲ. ಒಂದೇ ಒಂದು ಸತ್ಕೃತ್ಯದಿಂದ ನೂರು ಅಪರಾಧಗಳ ಪರಿಮಾರ್ಜನೆಯಾಗುವದೆಂದು ನನಗೆನಿಸಿತು. ಒಂದು ಕಡೆಗೆ ನೋಡಿದರೆ ಮುದುಕ, ಇನ್ನೊಂದು ಕಡೆಗೆ ನೋಡಿದರೆ ಕೋಮಲಾಂತಃಕರಣದ ಮೂರು ಚಿಕ್ಕ ಮಗುಗಳು. ಇವೆರಡೇ ನನ್ನ ಕರ್ತವ್ಯಚ್ಯುತಿಗೆ ಕಾರಣವಾದವು. ನಾನು ಅವನು ಸುಡಿಸಿದ ಹಳ್ಳಿ, ಕೊಂದಂಥ ನಿರಪರಾಧಿ ಮನುಷ್ಯರು, ಸ್ವದೇಶ ಮೊದಲಾದವುಗಳನ್ನು ಮರತೇ ಬಿಟ್ಟೆನು. ಮಾತೃಭೂಮಿಗೆ ದ್ರೋಹ ಬಗೆದವನನ್ನು ಬಂಧಮುಕ್ತ ಮಾಡಿದೆನು. ನಾನು ಅಪರಾಧಿಯಾಗಿದ್ದೇನೆ. ಹೀಗೆ ನಾನು ಮಾತನಾಡುವದರಿಂದ ನನ್ನ ವಿರುದ್ಧವಾಗಿಯೆ ಮಾತನಾಡುತ್ತೇನೆಂದು ಹೇಳಿದರೆ ತಪ್ಪಾಗುತ್ತದೆ. ನಾನಿವೆಲ್ಲವನ್ನೂ ನನ್ನ ಪರವಾಗಿಯೇ ಹೇಳಿದ್ದೇನೆ."

"ನೀನು ಹೇಳುವದು ಇಷ್ಟೆಯೋ?"

"ನಾನು ಸೇನಾಪತಿಯಾದ್ದರಿಂದ ಒಂದು ಕೆಲಸವನ್ನು ಮಾಡಬೇಕೆಂದೆನಿಸಿತು. ನೀವೂ ನ್ಯಾಯಾಧೀಶರಾದ್ದರಿಂದ ನಿಮಗಾದರೂ ಒಂದು ಕೆಲಸವನ್ನು ಮಾಡಲೇಬೇಕಾಗುವದು"

"ಆ ಕೆಲಸ ಯಾವದು?"

"ನನ್ನ ಮರಣದ್ದು."

"ಅದು ನ್ಯಾಯವಾದದ್ದೆಂದು ನಿನಗೆನಿಸುವದೋ?"

"ನ್ಯಾಯವೆಂದೆನಿಸುತ್ತದೆ. ಅದು ಅತ್ಯಂತ ಆವಶ್ಯಕವೂ ಆಗಿದೆ."

"ಇನ್ನು ನೀನು ಕುಳಿತುಕೊಳ್ಳು."

ಇಷ್ಟಾದಮೇಲೆ ಅಧಿಕಾರಿಯೊಬ್ಬನು ಕಾನೂನನ್ನು ಓದಿತೋರಿಸಿದನು.

ಸೀಮೋರೆಡಿನ್‌ನು ಗಾವೆನ್‌ನನ್ನು ನೋಡುತ್ತ "ಆರೋಪಿಯೇ, ಇತ್ತ ಲಕ್ಷಗೊಟ್ಟು ಕೇಳು. ಇಲ್ಲಿ ನೆರೆದಿರುವ ಜನರೇ, ಕೇಳಿರಿ. ನಿಮ್ಮೆದುರಿಗೆ

ಕಾನೂನು ಇದೆ. ಈಗ ಓದಿದ ಕಾನೂನನ್ನು ಕೇಳಿರುವಿರಿ. ಈಗ ಮತ ವನ್ನು ತೆಗೆದುಕೊಳ್ಳಲಾಗುವದು. ಬಹುಮತದ ಮೇಲಿಂದ ಶಿಕ್ಷೆಯನ್ನು ವಿಧಿಸಲಾಗುವದು. ಪ್ರತಿಯೊಬ್ಬ ನ್ಯಾಯಾಧೀಶನೂ ಏನನ್ನೂ ಬಚ್ಚಿಟ್ಟು ಕೊಳ್ಳದೆ ನಿರ್ದಾಕ್ಷಿಣ್ಯವಾಗಿ ಎಲ್ಲವನ್ನು ಹೇಳಬೇಕು. ಗುಶಪ್‌ನೇ, ನೀನು ನಿನ್ನ ನಿರ್ಣಯವನ್ನು ಹೇಳು" ಎಂದು ಹೇಳಿದನು.

ಅವನು ಸಿಮೋರೆಡಿನ್‌ನಾಗಲಿ ಗಾವೆನ್‌ನನ್ನಾಗಲಿ ನೋಡುತ್ತಿರಲೇ ಇಲ್ಲ. ಅವನು ಅಧೋಮುಖಿಯಾಗಿ ಕುಳಿತಿದ್ದನು.

"ಕಾನೂನು ಕಠೋರವಾಗಿದೆ. ನ್ಯಾಯಾಧೀಶನು ಮನುಷ್ಯರಂತೆಯೇ ಮನುಷ್ಯನಾಗಿದ್ದಾನೆ. ಮನುಷ್ಯನಿಗಿಂತಲೂ ಅವನು ಕೆಳಮಟ್ಟಿನವನಿರು ತ್ತಾನೆ. ಯಾಕೆಂದರೆ ಅವನಿಗೆ ಅಂತಃಕರಣವೇ ಇರುವದಿಲ್ಲ. ಮನುಷ್ಯನಿ ಗಿಂತಲೂ ಹೆಚ್ಚಿನ ದರ್ಜೆಯವನೂ ಆಗಿರುತ್ತಾನೆ—ಯಾಕೆಂದರೆ ಅವನ ಕೈಯಲ್ಲಿ ಕಾನೂನಿನ ಕತ್ತಿಯಿರುತ್ತದೆ. ಕಾನೂನು ತಾಯಿ, ತಂದೆ, ಅಣ್ಣ ತಮ್ಮ,ಬಂಧುಬಳಗ ಎಂಬದನ್ನು ನೋಡುವದಿಲ್ಲ. ದಯೆಯೂ ಅಪರಾಧ ದಲ್ಲಿಯ ಒಂದು ಪ್ರಕಾರವಾಗಿದೆ. ಗಾವೆನ್‌ನು ಲ್ಯಾಂಟ್‌ನೆಕ್‌ನಿಗೆ ಓಡಿಹೋಗಲು ನೆರವಾದ್ದರಿಂದ ದೋಷಿಯಾಗಿದ್ದಾನೆ. ಆದ್ದರಿಂದ ನಾನು ಅವನಿಗೆ ಮರಣ ಶಿಕ್ಷೆಯನ್ನು ವಿಧಿಸುತ್ತೇನೆ" ಎಂದು ಗುಶೆಪ್ಪನು ತನ್ನ ನಿರ್ಣಯವನ್ನು ಕೊಟ್ಟನು.

"ಗುಶೆಪ್, ನೀನು ನಿನ್ನ ಕರ್ತವ್ಯವನ್ನು ಯೋಗ್ಯ ರೀತಿಯಿಂದ ನೆರವೇರಿಸಿದ್ದಕ್ಕೆ ನಾನು ನಿನಗೆ ಆಭಾರಿಯಾಗಿದ್ದೇನೆ" ಎಂದು ಗಾವೆನ್‌ನು ಹೇಳಿದನು.

ಸಿಮೋರೆಡಿನ್‌ನು "ರೇಡೋ, ನಿನ್ನ ಅಭಿಪ್ರಾಯವನ್ನು ಹೇಳು" ಎಂದು ಕೇಳಿದನು.

ರೇಡೋ ಎದ್ದನು. ಗಾವೆನ್‌ನ ಕಡೆಗೆ ಹೊರಳಿ ಸೈನಿಕನ ಸಲಾ ಮನ್ನು ಸಲ್ಲಿಸಿ "ಜಗತ್ತಿನಲ್ಲಿ ಇದೇ ರೀತಿ ಇದ್ದರೆ ನನ್ನನ್ನು ಗಲ್ಲಿಗೇರಿಸಿರಿ. ನಮ್ಮ ಸೇನಾಪತಿ ಸಾಹೇಬನು ಮಾಡಿದುದು ಯಥಾಯೋಗ್ಯವೇ ಇದೆ ಆ

ಮುದುಕನು ಆ ಚಿಕ್ಕ ಮಗುಗಳನ್ನು ಬೆಂಕಿಯೊಳಗಿಂದ ತೆಗೆದುಕೊಂಡು ಬಂದಾಗ ಅವನನ್ನು ನೋಡಿ ನಾನು, "ನೀನು ಬಲು ಶೂರನು" ಎಂದೆಂದೆನು. ನಮ್ಮ ಮಹಾರಾಜನು ಆ ಮುದುಕನನ್ನು ಸಂಕಟದಿಂದ ಮುಕ್ತಗೊಳಿಸಿದ ನೆಂಬದನ್ನು ನಾನು ಕೇಳಿ ಅತ್ಯಾನಂದಬಟ್ಟೆನು. ಅವನ ಈ ಕೃತಿಯ ಬಗ್ಗೆ ನನ್ನ ಕೈಯಲ್ಲಿ ಅಧಿಕಾರವಿದ್ದುದಾಗಿದ್ದರೆ ನಾನು ಅವನಿಗೆ ಗೌರವವನ್ನು ಸಲ್ಲಿಸುತ್ತಿದ್ದೆನು. ಆದರೆ ನಾವೆಲ್ಲರೂ ಈಗ ಹುಚ್ಚರಾಗಬಯಸುತ್ತೇವೆಯೋ? ನಾವು ಇಷ್ಟರ ಸಲುವಾಗಿ ಯುದ್ಧವನ್ನು ಮಾಡಿರುವೆವೋ ? ನಮ್ಮ ಈ ಸೇನಾಪತಿಯು ನಾಲ್ಕುತಿಂಗಳುಗಳಿಂದ ತನ್ನ ಜೀವವನ್ನು ಸವೆಸಿ ಶತ್ರುಗಳ ಪರಾಭವವನ್ನು ಮಾಡುತ್ತಿದ್ದನು. ಅವನು ಡೋಲ್‌ದಲ್ಲಿ ತೋರಿಸಿದ ಬುದ್ಧಿಶಕ್ತಿಯನ್ನು ತೋರಿಸುವವರು ಈ ಜಗತ್ತಿನಲ್ಲಿ ಯಾರೂ ಇಲ್ಲೆಂದು ನನಗೆನಿಸುತ್ತದೆ. ಇಂಥ ಮನುಷ್ಯನನ್ನು ನೀವು ಈ ಜಗತ್ತಿನಿಂದ ಇಲ್ಲ ದಂತೆ ಮಾಡುವಿರಾ ? ಅವನನ್ನು ಮುಖ್ಯ ಸೇನಾಪತಿಯನ್ನು ಮಾಡುವದು ಬಿಟ್ಟು ಅವನ ತಲೆಯನ್ನು ತೆಗೆದುಕೊಳ್ಳಬೇಕೆನ್ನುವಿರಿ. ಸೇನಾಪತಿ ಗಾವೆನ್ ಸಾಹೇಬರೇ, ನಾನು ನಿಮ್ಮ ವರಿಷ್ಠ ಅಧಿಕಾರಿಯಾಗಿದ್ದರೆ, ನೀವು ವ್ಯರ್ಥವಾಗಿ ಬಡಬಡಿಸಿದಿರಿ ಎಂದು ಅನ್ನಬಹುದಾಗಿತ್ತು. ಆ ಮುದು ಕನು ಆ ಮಗುಗಳ ಜೀವವನ್ನುಳಿಸಿ ದೊಡ್ಡ ಕೆಲಸ ಮಾಡಿದ್ದಾನೆ. ನೀವಾದರೂ ಆ ಮುದುಕನನ್ನು ಬಂಧಮುಕ್ತ ಮಾಡಿ ಅಷ್ಟೇ ದೊಡ್ಡ ಕೆಲಸ ಮಾಡಿದ್ದೀರಿ. ಸತ್ಕೃತ್ಯಗಳನ್ನು ಮಾಡುವವರಿಗೆ ನಾವು ಗಲ್ಲಿಗೇರಿಸಿದ್ದಾ ವರೆ ಎಲ್ಲವೂ ಮುಗಿದು ಹೋದಂತೆ. ಈ ವ್ಯರ್ಥ ಪ್ರಯತ್ನವೇಕೆಬೇಕಾಗಿತ್ತು? ಇದ್ದಂಥ ರಾಜ್ಯವಾದರೂ ಏನು ಕೆಡುಕಿನದಾಗಿತ್ತು ? ಆ ಮುದಕನು ಆ ಮಗುಗಳನ್ನು ಬೆಂಕಿಯಲ್ಲಿ ಬೇಯಲೆಂದು ಬಿಡಬೇಕಿತ್ತು. ಸೇನಾಪತಿಯು ಆ ಮುದುಕನ ತಲೆ ಹಾರಿಸಬೇಕಾಗಿತ್ತಲ್ಲವೇ ? ಆ ಮಗುಗಳು ಬೆಂದು ಹೋಗಿದ್ದರೆ ನಮ್ಮ ಪಕ್ಷದ ಅವಮಾನವು ಶಾಶ್ವತವಾಗಿ ಜಗತ್ತಿನಲ್ಲಿ ಹಬ್ಬು ತ್ತಿತ್ತು ಇದೇ ನಿಮ್ಮ ಇಚ್ಛೆಯಾಗಿದ್ದಿತೇ ? ಹಾಗಾದರೆ ನಡೆಯಿರಿನ್ನು. ಒಬ್ಬರನ್ನೊಬ್ಬರು ತಿಂದುಹಾಕೋಣ; ಮುಕ್ತರಾಗೋಣ. ನನಗೂ ನಿಮ್ಮಷ್ಟೇ ರಾಜಕಾರಣವು ತಿಳಿಯುತ್ತದೆ. ನಾವು ನಮ್ಮ ಪ್ರಾಣಗಳನ್ನು ಇಷ್ಟು

ದಿನಗಳವರೆಗೆ ಏಕೆ ಅರ್ಪಿಸಿದೆವು? ನಮ್ಮ ಸೇನಾಪತಿಯನ್ನು ಯಾರಾದರೂ ಕೊಂದು ಹಾಕಲಿ ಎಂದೇ ? ಎಂದಿಗೂ ಇಲ್ಲ. ನಮಗೆ ನಮ್ಮ ಸೇನಾಪತಿ ಬೇಕು. ಈಗ ನಾನು ಅವನನ್ನು ಇಮ್ಮಡಿಯಾಗಿ ಪ್ರೀತಿಸುತ್ತೇನೆ. ಅವನನ್ನು ಗಲ್ಲಿಗೇರಿಸುತ್ತಾರೆಂಬದನ್ನು ಕೇಳಿ ನನಗೆ ನಗೆಯು ಬರುತ್ತದೆ. ನಾವು ಇಂಥ ಕೃತ್ಯವನ್ನೆಂದಿಗೂ ಮಾಡಗೊಡಲಿಕ್ಕಿಲ್ಲ. ಜನರೇನು ಬಾಯಿಗೆ ಬಂದಂತೆ ಮಾತಾಡುತ್ತಾರೆ." ಎಂದಂದು ರೇಡೋ ಕುಳಿತನು. ಅವನು ಮಾತನಾಡಿದ್ದಕ್ಕೆ ಅವನ ತಲೆಯ ಗಾಯಕ್ಕೆ ಆಘಾತವಾಗಿ ರಕ್ತವು ಸುರಿಯಹತ್ತಿತು.

ಸಿಮೋರೆಡಿನ್‌ನು ಅವನ ಕಡೆಗೆ ಮುಖದಿರುವಿ "ಆರೋಪಿಯು ನಿರ್ದೋಷಿಯಾಗಿರುತ್ತಾನೆಂದು ನಿಮ್ಮ ಅಭಿಪ್ರಾಯವೋ ?" ಎಂದು ರೇಡೋನನ್ನು ವಿಚಾರಿಸಿದನು.

"ಅವನನ್ನು ಮುಖ್ಯ ಸೇನಾಪತಿಯನ್ನಾಗಿ ಮಾಡಬೇಕೆಂದು ನಾನು ಹೇಳುತ್ತೇನೆ."

"ನನಗೆ ನಿಮ್ಮ ಸ್ಪಷ್ಟ ಅಭಿಪ್ರಾಯ ಬೇಕಾಗಿದೆ."

"ಅವನನ್ನು ಪ್ರಜಾಪಕ್ಷದ ಮುಖ್ಯಸ್ಥನೆಂದು ನಿಯಮಿಸಬೇಕೆಂದು ನಾನೆನ್ನುತ್ತೇನೆ."

"ಅವನನ್ನು ಮುಕ್ತಗೊಳಿಸಬೇಕೋ ಅಥವಾ ಇಲ್ಲವೋ ಎಂಬದನ್ನಷ್ಟೇ ಹೇಳಬೇಕು."

'ಅವನ ಬದಲು ನನ್ನ ತಲೆಯನ್ನೇ ಹಾರಿಸಿರಿ ಎಂದು ನಾನೆನ್ನುತ್ತೇನೆ.'

'ನಿರ್ದೋಷಿಯೆಂದು ಬರೆದುಕೊಳ್ಳು' ಎಂದು ಸಿಮೋರೆಡಿನ್‌ನೆನ್ನಲಾಗಿ ಕಾರಕೂನನು ಅದರಂತೆ ಬರೆದುಕೊಂಡನು.

ಮುಂದೆ ಸಿಮೋರೆಡಿನ್‌ನು ಶಿಕ್ಷೆಯನ್ನು ಹೇಳುವದಕ್ಕಾಗಿ ಎದ್ದು ನಿಂತನು. ಅವನು ತನ್ನ ಟೊಪ್ಪಿಗೆಯನ್ನು ತೆಗೆದು ಮೇಜಿನ ಮೇಲಿರಿಸಿದನು. ಅಲ್ಲಿ ಸ್ಮಶಾನ ಶಾಂತತೆಯು ನೆಲೆಸಿತ್ತು. ಆ ಮೇಲೆ ಸಿಮೋರೆಡಿನ್‌ನು ಮಂದವಾದ ಸ್ವರದಿಂದಲಾದರೂ ಗಂಭೀರವೂ ಅಧಿಕಾರಯುಕ್ತವೂ ಆದ ರೀತಿಯಲ್ಲಿ "ವಿಚಾರಣೆಯನ್ನು ಕೇಳಿಕೊಂಡದ್ದಾಯಿತು. ಪ್ರಜಾಪಕ್ಷದ

ಸರ್ವಾಧಿಕಾರಿಯು ಈ ಲಷ್ಕರಿ ನ್ಯಾಯವಿಚಾರಣೆ ಸಭೆಯು ಎರಡು ವಿರುದ್ಧ ಒಂದು ಮತದಿಂದ—" ಮುಂದೆ ಅವನಿಗೆ ಮಾತಾಡುವದಾಗ ಲಿಲ್ಲ. ಶಿಕ್ಷೆಯನ್ನು ಹೇಳುವಾಗ ಅವನೇಕೆ ಹಿಂದೆ ಮುಂದೆ ನೋಡಿಧನು ? ಮರಣ ಶಿಕ್ಷೆಯನ್ನು ಹೇಳುವದು ಅವನಿಗೆ ಭಾರವೆನಿಸಿತೆ? ಅಲ್ಲಿದ್ದವರೆ ಲ್ಲರೂ ಶಾಂತತೆಯಿಂದ ಎದ್ದು ನಿಂತಿದ್ದರು. ಸಿಮೋರೆಡಿನ್‌ನು ಒಮ್ಮೆಲೆ "ಮರಣ ಶಿಕ್ಷೆ ವಿಧಿಸಲಾಗಿದೆ" ಎಂದು ಹೇಳಿದನು.

ಸಿಮೋರೆಡಿನ್‌ನ ಮುಖದಲ್ಲಿ ಆಸುರೀ ವಿಜಯದ ಲಕ್ಷಣಗಳು ಕಂಡವು. ಅದೂ ಒಂದು ಚಣಮಾತ್ರ. ಮುಂದೆ ಅವನು ವಜ್ರದಂತೆ ಕಠಿಣ ನಾದನು. ಅವನು ಕುಳಿತುಕೊಂಡು "ಗಾವೆನ್, ನಾಳೆ ಸೂರ್ಯೋದಯದ ಹೊತ್ತಿಗೆ ನಿನ್ನನ್ನು ಗಲ್ಲಿಗೇರಿಸಲಾಗುವದು" ಎಂದು ಹೇಳಿದನು.

ಗಾವೆನ್‌ನು ಸಲಾಮು ಸಲ್ಲಿಸಿದನು. "ಅವನನ್ನು ತೆಗೆದುಕೊಂಡು ಹೋಗಿರಿ" ಎಂದು ಸಿಮೋರೆಡಿನ್‌ನು ಅಪ್ಪಣೆ ಮಾಡಿದನು. ಸೈನಿಕರು ಅವ ನನ್ನು ಕತ್ತಲೆಯ ಕೋಣೆಯೊಳಗೆ ಹೊಗಿಸಿ ಬಾಗಿಲವನ್ನು ಹಾಕಿದರು. ಇಬ್ಬರು ಸಿಪಾಯರು ಬಿಚ್ಚುಗತ್ತಿಯನ್ನು ಹಿಡಿದುಕೊಂಡು ಕಾವಲು ಮಾಡ ತೊಡಗಿದರು. ರೇಡೋನಿಗೆ ಮೂರ್ಛೆ ಬಂದು ಕುರ್ಚಿಯಿಂದ ನೆಲಕ್ಕುರು ಳಿದನು. ಅವನನ್ನು ಎತ್ತಿಕೊಂಡು ಒಯ್ಯಲಾಯಿತು.



## ೨೪.

ಲ್ಯಾಂಟ್‌ನೆಕ್‌ನು ಕೈಯಲ್ಲಿ ಸಿಕ್ಕು ಓಡಿ ಹೋದನೆಂಬ ಸುದ್ದಿ ಯನ್ನು ಕೇಳಿ ಪ್ರಜಾಪಕ್ಷದ ಅಧಿಕಾರಿಗಳು ಸಂತಾಪಗೊಂಡರು. ಕತ್ತ ಲೆಯ ಕೋಣೆಯೊಳಗಿಂದ ಗಾವೆನ್‌ನು ಹೊರಬಂದಮೇಲೆ ಈ ಸುದ್ದಿಯು ಸುತ್ತೂ ಕಡೆಗೆ ಹಬ್ಬಿತು. ಗಾವೆನ್‌ನ ವಿಚಾರಣೆಯು ನಡೆಯುವದೆಂಬ

ಸುದ್ದಿಯೂ ಹರಡಿತ್ತು. ಆದರೆ ಅದರ ಮೇಲೆ ಅವರ ವಿಶ್ವಾಸವಿರಲಿಲ್ಲ. ಗಾವೆನ್‌ನು ತನ್ನ ಚಿಕ್ಕಜ್ಜನನ್ನು ಬಿಟ್ಟಂತೆ ಸಿಮೋರೆಡಿನ್‌ನು ಗಾವೆನನನ್ನು ಬಿಟ್ಟುಬಿಡಬಹುದೆಂದು ಅವರು ಭಾವಿಸಿದ್ದರು.

ಗಾವೆನ್‌ನಿಗಾದ ಗಲ್ಲಿನ ಶಿಕ್ಷೆಯನ್ನು ಕೇಳಿ 'ಎಂಥ ಭಯಂಕರ ಶಿಕ್ಷೆ ಇದು ! ನಮ್ಮ ಸೇನಾಪತಿ! ನಮ್ಮ ಶೂರ ತರುಣ ಸೇನಾಪತಿ! ಅವನು ಸರದಾರನಿರಬಹುದು! ಅವನು ಸರದಾರನಿದ್ದನೆಂದೇ ಪಜಾಪಕ್ಷಕ್ಕೆ ಮಹತ್ವ ಬಂದಿತ್ತು ನಮ್ಮನ್ನು ಅಜಿಂಕ್ಯರನ್ನಾಗಿ ಮಾಡಿದವನು ಅವನೇ. ವೆಂಡಿಯ ಬಂಡನ್ನು ಮುರಿದ ವೀರ ಸೇನಾಪತಿಯೇ ನಮ್ಮ ಗಾವೆನ್‌ನು. ಅವನಿಗೆ ಈ ಸಿಮೋರೆಡಿನ್‌ನು ಗಲ್ಲಿನ ಶಿಕ್ಷೆಯನ್ನು ಹೇಗೆ ಕೊಟ್ಟಿದ್ದಾನು! ಯಾತಕ್ಕಾಗಿ ಕೊಟ್ಟಿದ್ದಾನೆ? ಬೆಂಕಿಯಲ್ಲಿ ಬೆಂದು ಹೋಗಬಹುದಾಗಿದ್ದ' ಮೂರು ಮಗುಗಳ ಜೀವವನ್ನುಳಿಸಿದ ಆ ಮುದುಕನನ್ನು ಬಂಧಮುಕ್ತ ಮಾಡಿದ್ದಕ್ಕಾಗಿ ಇಂಥ ಶಿಕ್ಷೆಯೇ ? ಇದೆಂಥ ನ್ಯಾಯವು ! ಎಂದು ಮೊದಲಾಗಿ ಸೈನ್ಯದಲ್ಲಿ ಚರ್ಚೆಯು ಸಾಗಿತ್ತು. ಸಿಮೋರೆಡಿನ್‌ನು ಅತ್ಯಂತ ಕ್ರುದ್ಧನಾಗಿದ್ದನು. ೪ ಸಾವಿರ ಜನರು ಒಬ್ಬನ ವಿರುದ್ಧವಾಗಿದ್ದರು. ಆದರೂ ಅವನೊಬ್ಬನೆ ಈ ೪ ಸಾವಿರ ಜನರನ್ನು ಸುಮ್ಮನೆ ಕೂಡ್ರಿಸಬಲ್ಲ ಸಾಮರ್ಥ್ಯವಂತನಾಗಿದ್ದನು. ಈ ನಾಲ್ಕು ಸಾವಿರ ಸೈನ್ಯ ಸಮೂಹವೆಂದರೂ ಒಂದು ಅದ್ಭುತಶಕ್ತಿಯೇ ಆಗಿದ್ದಿತು. ಆಗಿನ ಕಾಲದಲ್ಲಿ ಇಷ್ಟು ಸೈನ್ಯದ ಬಲವು ಯಾವನಿಗಿರುವದೋ ಅಂಥವನ ಪ್ರಭುತ್ವವು ಪ್ರಜಾಪಕ್ಷಕ್ಕೆ ಇರುವದರಿಂದ ಜನರು ಅವನಿಗೆ ಹೆದರಿಕೊಂಡಿರುತ್ತಿದ್ದರು.

ಸಿಮೋರೆಡಿನ್‌ನು ಈ ಎಲ್ಲ ಜನರ ದೈವದ ಒಡೆಯನಾಗಿದ್ದನು. ಸೈನಿಕರು ಸಿಟ್ಟಾಗಿದ್ದರೂ ಅವನ ಮುಂದೆ ಅವರ ಆಟವೇನೂ ಸಾಗುವಂತಿರಲಿಲ್ಲ. ಅವರೂ ಯಾರನ್ನು ಕೇಳದವರೆಂಬ ಮಾತನ್ನು ಅವನೂ ಬಲ್ಲವನಾಗಿದ್ದನು. ಅವನಲ್ಲಿ ಕರ್ತುಮನ್ಯಥಾ ಕರ್ತೃತ್ವದ ಶಕ್ತಿಯು ಮೂರ್ತೀಭವಿಸಿತ್ತು. ಅವನಿಗೆ ದಯವನ್ನು ತೋರಿಸುವದು ಶಕ್ಯವಿತ್ತು. ಲೆಕ್ಕಣಿಕೆಯಿಂದ ಒಂದೆರಡು ಸಾಲು ಬರೆದಿದ್ದರೆ ಅದು ಸಾಧಿಸುವಂತಿತ್ತು. ಅಷ್ಟು ಸಾಮರ್ಥ್ಯ

ವಂತರು ಇವನನ್ನು ಬಿಟ್ಟು ಇನ್ನಾರೂ ಆಗ ಇರಲಿಲ್ಲ. ನಿಲ್ಲಿಸುವದು ಅಥವಾ ಅದರ ಮಾರ್ಗ ನಿರೀಕ್ಷಣೆ ಮಾಡುವದು ಅವನ ಕೈಯಲ್ಲಿತ್ತು. ಕೊನೆಗೆ ರಾತ್ರಿಯಾಯಿತು.

* * * * *

ಆ ಕೋಣೆಯನ್ನು ಇಬ್ಬರು ಕಾವಲುಗಾರರು ಕಣ್ಣಲ್ಲಿ ಕಣ್ಣಿಟ್ಟು ಕಾಯುತ್ತಿದ್ದರು. ಮಧ್ಯರಾತ್ರಿಯಲ್ಲಿ ಒಬ್ಬ ಮನುಷ್ಯನು ಕೈಯಲ್ಲಿ ಕಂದೀಲು ಹಿಡಿದುಕೊಂಡು ಆ ಸ್ಥಳಕ್ಕೆ ಬಂದನು. ಅವನು ತಾನು ಬಂದುದನ್ನು ಕಾವಲುಗಾರರಿಗೆ ತಿಳಿಸಿ ಬಾಗಿಲು ತೆರೆಯ ಹೇಳಿದನು. ಬಂದವನು ಸಿಮೋರೆಡಿನ್‌ನೆಂದ ಮೇಲೆ ಅಜ್ಞೆಯಂತೆ ಆ ಕಾವಲುಗಾರರು ಬಾಗಿಲು ತೆರೆದರು.

ಅವನು ಕೋಣೆಯೊಳಗೆ ಹೋದೊಡನೆಯೆ ಬಾಗಿಲು ಇಕ್ಕಿಕೊಂಡಿತು. ಮೊದಲೇ ಕತ್ತಲೆಯ ಕೋಣೆ. ಅದರಲ್ಲಿ ರಾತ್ರಿಯ ಸಮಯ. ಸಂಪೂರ್ಣ ಕತ್ತಲೆಯ ಸಾಮ್ರಾಜ್ಯವಾಗಿ ಶಾಂತತೆಯು ನೆಲೆಸಿತ್ತು. ಸಿಮೋರೆಡಿನ್‌ನು ಮುಂದೆ ಸಾಗಿ ಕಂದೀಲನ್ನು ನೆಲದ ಮೇಲಿಟ್ಟು ಸುಮ್ಮನೆ ನಿಂತುಕೊಂಡನು. ಆ ಕತ್ತಲೆಯಲ್ಲಿ ಮನುಷ್ಯನೊಬ್ಬನು ಗೊರಕೆ ಹೊಡೆಯುತ್ತಿದ್ದುದು ಕೇಳ ಬಂದಿತು. ಸಿಮೋರೆಡಿನ್‌ನು ಆ ಕಡೆಗೆ ಕಿವಿಗೊಟ್ಟು ಕೇಳಿದನು. ಗಾವೆನ್‌ನು ಕೋಣೆಯ ಒಂದು ಮೂಲೆಯಲ್ಲಿ ಹುಲ್ಲು ಹಾಸಿಗೆಯ ಮೇಲೆ ಮಲಗಿ ಗೊರಕೆ ಹೊಡೆಯುತ್ತಿದ್ದನು.

ಸಿಮೋರೆಡಿನ್‌ನು. ಏನೂ ಸದ್ದು ಮಾಡದೆ ಮೆಲ್ಲನೆ ಹೆಜ್ಜೆಯಿಡುತ್ತ ಮುಂದೆ ಹೋಗಿ ಬಗ್ಗಿ ಗಾವೆನ್‌ನ ಮುಖವನ್ನು ನೋಡ ತೊಡಗಿದನು. ಮಲಗಿರುವ ಮಗುವಿನ ಕಡೆಗೆ ನೋಡುತ್ತಿರುವ ತಾಯಿಯ ದೃಷ್ಟಿಯು ಇಷ್ಟು ಪ್ರೇಮಮಯವಿದ್ದಿರಬಹುದೋ ಇಲ್ಲವೋ ಹೇಳಲಾಗದ ಮಾತು. ಸ್ವಲ್ಪ ಹೊತ್ತು ಹಾಗೆಯೇ ಎವೆಪಿಳುಕಿಸದೆ ನೋಡುತ್ತ ತಲೆ ಬಗ್ಗಿಸಿಕೊಂಡು ನಿಂತುಬಿಟ್ಟನು. ಅವನು ಗಾವೆನ್‌ನ ಕೈಯನ್ನು ತೀರ ಮೆಲ್ಲನೆತ್ತಿ ಅದಕ್ಕೊಂದು ಚುಂಬನವನ್ನು ಕೊಟ್ಟನು. ಹಸ್ತಸ್ಪರ್ಶವಾದೊಡನೆ ಅವನು ಮಿಸುಕಾಡತೊಡಗಿದನು. ಅವನು ಕಣ್ದೆರೆದು ಆಶ್ಚರ್ಯಚಕಿತನಾಗಿ

ಅವನ ಕಡೆಗೆ ನೋಡ ತೊಡಗಿದನು. ಗಾವೆನ್‌ನು, ಆ ಕಂದೀಲದ ಮಂದ ಪ್ರಕಾಶದಲ್ಲಿ ಬಂದಂಥ ಮನುಷ್ಯನು ಸಿಮೋರೆಡಿನ್‌ನೆಂದು ಕೂಡಲೆ ಗುರುತಿಸಿದನು.

" ಓಹೋ, ಯಾರು ! ನೀವೇ ! ನನ್ನ ಗುರುಗಳು ! " ಎಂದಂದು " ನನಗೊಂದು ಸ್ವಪ್ನ ಬಿದ್ದಿತ್ತು. ಅದರಲ್ಲಿ ಮೃತ್ಯುವು ನನ್ನ ಕೈಗೆ ಮುದ್ದು ಕೊಡುತ್ತಿರುವದನ್ನು ನಾನು ಕಂಡೆನು " ಎಂದು ಗಾವೆನ್‌ನು ಹೇಳಿ ಸುಮ್ಮನಾದನು. ಸಿಮೋರೆಡಿನ್‌ನ ತಲೆಯಲ್ಲಿ ವಿಚಾರಗಳ ತಾಕಲಾಟವೆದ್ದುದರಿಂದ ಅವನು ಗಾಬರಿಯಾದನು. ಸಿಮೋರೆಡಿನ್‌ನ ಅಂತಃಕರಣದಲ್ಲಿ ವಿಚಾರಗಳ ಪ್ರಚಂಡತಾಂಡವವು ನಡೆದಿದ್ದರೂ ಅವನ ಬಾಯಿಂದ ಶಬ್ದಗಳೇ ಹೊರಡಲಿಲ್ಲ. ' ಗಾವೆನ್ ' ಎಂದಿಷ್ಟೇ ಉಚ್ಚರಿಸಿದನು. ಇಬ್ಬರೂ ಒಬ್ಬರೊಬ್ಬರ ಮುಖವನ್ನು ಏಕ ದೃಷ್ಟಿಯಿಂದ ನೋಡ ತೊಡಗಿದರು.

ಸಿಮೋರೆಡಿನ್‌ನ ಕಣ್ಣೊಳಗಿನ ಕಂಬನಿಗಳು ಸುಟ್ಟು ಹೋಗಿದ್ದವು. ಆ ಕಣ್ಣೀರನ್ನು ಸುಟ್ಟಂಥ ಕಣ್ಣುಗಳಿಂದಲೇ ಅವನು ಗಾವೆನ್‌ನನ್ನು ನೋಡ ತೊಡಗಿದ್ದನು. ಗಾವೆನ್‌ನ ಮುಖದಲ್ಲಿ ಮಧುರ ಹಾಸ್ಯವು ಲಾಸ್ಯವಾಡುತ್ತಿತ್ತು. ಗಾವೆನ್‌ನು ಹುಲ್ಲು ಹಾಸಿಗೆಯಿಂದೆದ್ದು ಅನ್ನತೊಡಗಿದನು. " ನಿಮ್ಮ ಕಪಾಳದಲ್ಲಿ ಕಾಣುವ ಕತ್ತಿಯ ಗಾಯವನ್ನು ನನ್ನ ಸಲುವಾಗಿ ತೆಗೆದುಕೊಂಡಿರಿ. ನಿನ್ನಿನ ಘನಘೋರ ಸಂಗ್ರಾಮದಲ್ಲಿಯೂ ನೀವು ನನ್ನ ಸಮೀಪದಲ್ಲಿಯೇ ಇದ್ದಿರಿ. ದೇವರು ನನ್ನನ್ನು ನಿಮ್ಮ ನೇತೃತ್ವದಲ್ಲಿಡದಿದ್ದರೆ ಈಗ ನಾನೆಲ್ಲಿರುತ್ತಿದ್ದೇನೋ ! ನನಗೆ ನನ್ನ ಕರ್ತವ್ಯದ ಜ್ಞಾನವಿದ್ದುದಾದರೆ ಅದು ತಮ್ಮ ಕಡೆಯಿಂದ ದೊರೆತ ಕೃಪಾಪ್ರಸಾದವೇ ಹೊರತು ಬೇರೇನೂ ಅಲ್ಲ. ನಾನು ಈ ಜಗತ್ತಿನಲ್ಲಿ ಬದ್ಧ ಹಸ್ತನಾಗಿ ಜನ್ಮಕ್ಕೆ ಬಂದೆನು. ಆದರೆ ನೀವು ಮಾತ್ರ ನನ್ನನ್ನು ಬಂಧನದಿಂದ ಮುಕ್ತಗೊಳಿಸಿ ನನಗೆ ಸ್ವಾತಂತ್ರ್ಯ ದೊರಕಿಸಿಕೊಟ್ಟಿರಿ. ನಾನೊಂದು ಆಟದ ಗೊಂಬೆಯಾಗಿದ್ದೆನು; ಆದರೆ ನೀವು ನನ್ನಲ್ಲಿ ಪ್ರಾಣಪ್ರತಿಷ್ಠಾಪನೆ ಮಾಡಿ ನನ್ನನ್ನು ಸಜೀವ ವಸ್ತುವನ್ನಾಗಿ ಮಾಡಿದಿರಿ. ನೀವೇ ನನ್ನಲ್ಲಿ ಸದಸದ್ವಿವೇಕ ಬುದ್ಧಿಯುಂಟಾಗುವಂತೆ ಮಾಡಿದಿರಿ. ನಾನು ನಿಮ್ಮ ಉಪಕಾರದಿಂದಲೇ ಬದುಕಿದೆನು. ನಾನೊಬ್ಬ ಸರದಾರ

ನಾಗಿದ್ದರೂ ನೀವೇ ನನ್ನನ್ನು ಸಾಮಾನ್ಯ ನಾಗರಿಕನೊಬ್ಬನನ್ನಾಗಿ ಮಾಡಿದಿರಿ. ನನಗೆ ಶಿಕ್ಷಣವನ್ನು ಕೊಟ್ಟರಿ; ಜಗತ್ತಿನಲ್ಲಿ ಬದುಕಲು ಯೋಗ್ಯನಾಗುವಂತೆ ಮಾಡಿದಿರಿ. ಸತ್ಯ ಮತ್ತು ಜ್ಞಾನದ ಕೀಲೀಕೈಯನ್ನೇ ನೀವು ನನಗೆ ದಯಪಾಲಿಸಿದಿರಿ. "

ಸಿಮೋರೆಡಿನ್‌ನು ಅವನ ಹತ್ತಿರ ಕುಳಿತುಕೊಂಡು "ನಾನು ನಿನ್ನೊಡನೆ ಊಟ ಮಾಡಲು ಬಂದಿರುವೆನು" ಎಂದು ಹೇಳಿದನು. ಗಾವೆನ್‌ನು ರೊಟ್ಟಿಯನ್ನು ಮುರಿದು ಒಂದು ತುಣಕನ್ನು ಅವನ ಕೈಯಲ್ಲಿಟ್ಟನು. ಆ ಮೇಲೆ ಹೂಜೆಯಲ್ಲಿರುವ ನೀರನ್ನು ಕುಡಿಯಲು ಕೊಟ್ಟನು.

"ನೀನೇ ಮೊದಲು ಕುಡಿ" ಎಂದು ಸಿಮೋರೆಡಿನ್‌ನೆನ್ನಲಾಗಿ ಗಾವೆನ್‌ನು ನೀರು ಕುಡಿದು ಹೂಜೆಯನ್ನು ಅವನಿಗೆ ಕೊಟ್ಟನು. ಊಟದ ಹೊತ್ತಿನಲ್ಲಿ ಗಾವೆನ್‌ನು ತಿನ್ನುತ್ತಿದ್ದನು; ಸಿಮೋರೆಡಿನ್‌ನು ನೀರು ಕುಡಿಯುತ್ತಿದ್ದನು. ಇದರ ಮೇಲಿಂದ ಒಬ್ಬನು ಸಮಾಧಾನದಿಂದಿದ್ದನು; ಇನ್ನೊಬ್ಬನು ತಾಪದಿಂದ ಪರಿತಪ್ತನಾಗಿದ್ದನೆಂದು ಹೇಳಬಹುದಾಗಿದ್ದಿತು.

"ದೊಡ್ಡ ಸಂಗತಿಗಳು ತಾವಾಗಿಯೇ ಕೂಡಿ ಬರುತ್ತವೆ. ರಾಜ್ಯಕ್ರಾಂತಿಯಿಂದ ಚಮತ್ಕಾರಿಕ ಸಂಗತಿಗಳು ನಡೆಯುತ್ತಲಿವೆ. ದೃಶ್ಯ ಜಗತ್ತಿನ ಹಿಂದೆ ಅದೃಶ್ಯ ಜಗತ್ತೂ ಒಂದಿದೆ. ಒಂದರಿಂದ ಇನ್ನೊಂದು ಅಡಗಿಕೊಂಡಿದೆ. ದೃಶ್ಯ ಪ್ರಕಾರವು ಅಪಸ್ವರದಿಂದ ಕೂಡಿದೆ; ಆದರೆ ಅದೃಶ್ಯ ಪ್ರಕಾರವು ಶಾಂತವಾಗಿದೆ. ಈ ಕಾಲಕ್ಕೆ ನನಗೆ ಇದೆಲ್ಲವೂ ಸ್ಪಷ್ಟವಾಗಿ ಕಾಣುತ್ತಿರುತ್ತದೆ. ವಿಧ್ವಂಸಕ ಕಾರ್ಯದಿಂದ ಹುಂಬತನದಿಂದ ವಿಧಾಯಕ ಕಾರ್ಯದ ಸುಂದರ ಭವನವು ಕಟ್ಟಲ್ಪಡುತ್ತಿರುತ್ತದೆ." ಎಂದು ಗಾವೆನ್‌ನೆಂದನು.

"ಅಹುದು. ಈ ತಾತ್ಪೂರ್ತಿಕ ಪ್ರಕಾರದಿಂದಲೇ ಶಾಶ್ವತದ ಕಾರ್ಯವು ಸಂಭವಿಸುವದು. ಆಗ ಮಾತ್ರ ಕರ್ತವ್ಯ ಮತ್ತು ಅಧಿಕಾರಗಳ ಸಮಯುಗವು ಆರಂಭವಾಗುವದು. ಆಗ ಕರಭಾರವನ್ನು ಪ್ರಮಾಣದಂತೆ ಕೂಡ್ರಿಸಲಾಗುವದು. ಪ್ರತಿಯೊಬ್ಬ ತರುಣನೂ ಸೈನ್ಯದಲ್ಲಿ ಸೇರಬೇಕಾಗುವದು. ಪ್ರತಿಯೊಬ್ಬನಿಗೂ ಜಗತ್ತಿನಲ್ಲಿ ಮುಂದೆ ಬರಲು ಸಂಧಿದೊರೆತಂತಾಗು

ವದು. ಎಲ್ಲರ ಸಲುವಾಗಿ ಕಾನೂನುಗಳು ರಚಿಸಲ್ಪಡುವವು. ಪ್ರಜಾಪಕ್ಷವು ಸರ್ವಾಧಿಕಾರವನ್ನು ವಹಿಸುವದು" ಎಂದು ಸಿವೋರೆಡಿನ್‌ನು ಉತ್ತರ ವಿತ್ತನು.

"ನನಗೆ ಪ್ರಜಾಪಕ್ಷವು ಆದರ್ಶಭೂತವಾಗಬೇಕೆಂದೆನಿಸುತ್ತಿದೆ. ಆದರೆ ಮಹಾರಾಜ, ಈಗ ತಾವಾಡಿದ ಮಾತುಗಳಲ್ಲಿ ಭಕ್ತಿ; ಪ್ರೇಮ, ದಯೆ, ಸ್ವಾರ್ಥತ್ಯಾಗ ಮೊದಲಾದವುಗಳಿಗೆ ಸ್ಥಾನವೆಲ್ಲಿದೆ ? ಎಲ್ಲರಿಗೂ ಸಮನಾಗಿ ಸಂಧಿ ದೊರೆಯುವದು ಒಳ್ಳೆಯದೆ; ಆ ಎಲ್ಲರ ಮಧುರಮಿಲನವಾದರೆ ಎಲ್ಲಕ್ಕೂ ಒಳಿತೇ. ನಿಮ್ಮ ರೀತಿಯ ಪ್ರಕಾರ ನೀವು ಮನುಷ್ಯರನ್ನು ಎಣಿಸುತ್ತಿರುವಿರಿ; ಅಳೆಯುತ್ತಿರುವಿರಿ. ಅವರ ಯೋಗ್ಯತೆಯ ತಕ್ಕ ಮರ್ಯಾದೆಯಲ್ಲಿಡುವಿರಿ. ಆದರೆ ನನ್ನ ರೀತಿಯಲ್ಲಿ ನಾನು ಅವರನ್ನು ಆಕಾಶದಲ್ಲೊಯ್ದು ಬಿಡುವೆನು. ಗಣಿತದೊಳಗಿನ ಸಿದ್ಧಾಂತಕ್ಕೂ ಮತ್ತು ಆಕಾಶದೊಳಗಿನ ಪಕ್ಷಿಗಳಿಗೂ ಇರುವಷ್ಟು ಅಂತರವು ನಮ್ಮಿಬ್ಬರ ಕಾರ್ಯಪದ್ಧತಿಯಲ್ಲಿ ಕಂಡು ಬರುತ್ತದೆ."

"ಆದರೆ ನೀನು ಮೋಡಗಳಲ್ಲಿ ಸಿಕ್ಕು ದಾರಿಯನ್ನು ತಪ್ಪುವಿ."

"ನೀವು ಲೆಕ್ಕಾಚಾರ ಮಾಡುವಲ್ಲಿ ತಪ್ಪುತ್ತೀರಿ."

"ವಸ್ತುಗಳ ಮಧುರಮಿಲನವೆಂದರೆ ಸ್ವಪ್ನದೊಳಗಿನ ಪ್ರಕಾರ ವಿದ್ದಂತೆ."

"ಆದರೆ ಇಂಥ ಪ್ರಕಾರಗಳು ಬೀಜಗಣಿತದಲ್ಲಿವೆ."

"ಮನುಷ್ಯನು ಭೂಮಿತಿಯೊಳಗಿನ ನಿಯಮಗಳಂತೆ ಆಗಬೇಕೆಂದು ನನ್ನ ಇಚ್ಛೆಯಿದೆ."

"ಕವಿಯು ಮನುಷ್ಯನ ಚಿತ್ರವನ್ನು ಹೇಗೆ ಮೂಡಿಸುತ್ತಾನೋ ಹಾಗೆ ಆಗಬೇಕೆಂದು ನನಗೆನಿಸುತ್ತದೆ."

"ಕವಿಯ ಶಬ್ದಗಳಲ್ಲಿ ವಿಶ್ವಾಸವಿಡಬಾರದು."

"ಅಹುದು, ನನಗದು ಗೊತ್ತಿದೆ. ಆದರೆ ಗಾಳಿ, ಬಿಸಿಲು, ವಸಂತ ಋತುವಿನೊಳಗಿನ ಸುಗಂಧ ಮತ್ತು ಆಕಾಶದೊಳಗಿನ ನಕ್ಷತ್ರಗಳ ಮೇಲೆ ವಿಶ್ವಾಸವಿಡಬಾರದೇ ?"

" ಇವೆಲ್ಲ ವಸ್ತುಗಳಿಂದ ಮನುಷ್ಯನ ಹೊಟ್ಟೆಯು ತುಂಬುತ್ತದೆಯೋ ? "

" ಯಾಕೆ ತುಂಬುವದಿಲ್ಲ ? ವಿಚಾರವೇ ಅನ್ನವಿದೆ. ವಿಚಾರಮಾಡುವದೆಂದರೆ ತಿನ್ನುವದಲ್ಲವೇ ? "

" ಈ ತಾತ್ವಿಕ ವಿಚಾರವು ಸಾಕಾಗಿದೆ. ಎರಡು ಎರಡು ಕೂಡಿ ನಾಲ್ಕು ಹೇಗಾಗುತ್ತದೆಯೋ ಹಾಗೆ ಈ ಪ್ರಜಾಪಕ್ಷವಿರುತ್ತದೆ. ನಾನು ಅವರವರ ಪಾಲನ್ನು ಅವರವರಿಗೆ ಕೊಡುವಾಗ—. "

" ನನ್ನ ಪಾಲನ್ನು ನನಗೆ ಕೊಟ್ಟಿರುವದಿಲ್ಲವಲ್ಲ ! "

" ಏನೆನ್ನುವಿ ನೀನು ? "

" ಕಾಯದೆಯಾಚೆಗೆ ಒಂದು ವಸ್ತುವಿದೆ ಎಂದು ನಾನೆನ್ನುತ್ತೇನೆ. "

" ಅದಾವ ವಸ್ತುವು ? "

" ದಯೆ ! ದಯೆ ! ದಯೆ ! "

" ನಿನ್ನ ಅಭಿಪ್ರಾಯವನ್ನು ಸ್ಪಷ್ಟ ಮಾತುಗಳಿಂದ ಹೇಳು. "

" ನೀವು ಲಕ್ಷ್ಕರೀ ನೌಕರಿಯನ್ನು ಕಡ್ಡಾಯವಾಗಿ ಮಾಡಬೇಕೆನ್ನುವವರು. ಅದು ಏತಕ್ಕಾಗಿ ? ಶತ್ರುಗಳ ಸಂಹಾರಕ್ಕಾಗಿ ಎಂದು ಹೇಳಬಹುದು. ಇಂಥ ನೌಕರಿಯೇ ಇರಕೂಡದೆಂದು ನನ್ನ ಮತವಿದೆ. ನನಗೆ ಶಾಂತಿಬೇಕು. ನಿಮಗೆ ಕರವುಬೇಕು; ನನಗದು ಬೇಡ. ಸರಕಾರದ ವೆಚ್ಚವನ್ನು ತೀರ ಕಡಮೆ ವೆಚ್ಚದಿಂದ ಸಾಗಿಸಬೇಕು. ಅಷ್ಟೇ ಅಲ್ಲದೆ ಉಳಿತಾಯವಾಗುವ ಹಣದಿಂದ ಸರಕಾರವನ್ನು ನಡೆಯಿಸಬೇಕೆಂದು ನಾನೆನ್ನುತ್ತೇನೆ. "

" ಇನ್ನೂ ಏನೇನು ನಿನ್ನ ಅಭಿಪ್ರಾಯಗಳಿವೆ ಎಂಬದನ್ನು ಹೇಳಿಯೇ ಬಿಡು. "

" ಹೆಚ್ಚು ಹೆಚ್ಚು ಸಂಬಳ ಬಳಿದುಕೊಳ್ಳುವಂಥ ಧರ್ಮೋಪದೇಶಕರನ್ನೂ, ಸೈನ್ಯಾಧಿಕಾರಿಗಳನ್ನೂ ಕೆಲಸದಿಂದ ಕಿತ್ತೊಗೆಯಬೇಕು. ಆ ಮೇಲೆ ಆ ಉಳಿಯುವ ಹಣದ ಸದ್ವಿನಿಯೋಗ ಮಾಡಬೇಕು. ಹೊಲಗಳನ್ನು ಚೆನ್ನಾಗಿ ಹದಗೊಳಿಸಬೇಕು. ಗೊಬ್ಬರ ಹಾಕಬೇಕು. ಗೊಬ್ಬ

ರವು ಹಳ್ಳ ಹೊಳೆಗಳಿಗೆ ಹರಿದು ಹೋಗುವದನ್ನು ನಿಲ್ಲಿಸಬೇಕು. ಮುಕ್ಕಾಲು ಪಾಲು ಭೂಮಿ ಹಾಳು ಬಿದ್ದಿದೆ. ಅದನ್ನು ಸಾಗವಮಾಡಬೇಕು. ಪ್ರತಿ ಯೊಬ್ಬ ಮನುಷ್ಯನಿಗೂ ಒಂದೊಂದು ತುಂಡು ಹೊಲವನ್ನು ಬಹುಮಾನ ವಾಗಿ ಕೊಡಬೇಕು. ಆ ಮೇಲೆ ಬೆಳೆ ಎಷ್ಟು ಪಟ್ಟು ಹೆಚ್ಚಿಗೆ ಬರುವದನ್ನು ಕಣ್ಣಾರೆ ಕಾಣುವಿರಿ. ಸದ್ಯಕ್ಕೆ ನಮ್ಮ ದೇಶದಲ್ಲಿಯ ಜನರಿಗೆ ಹೊಟ್ಟೆ ತುಂಬ ಅನ್ನ ದೊರೆಯದಾಗಿದೆ. ಹಾಳು ಬಿದ್ದ ಭೂಮಿಯು ಸಾಗಾಗಿ ಸಾಕಷ್ಟು ಬೆಳೆ ಬರಹತ್ತಿತೆಂದರೆ ಇಡೀ ಯುರೋಪಕ್ಕೆ ಅನ್ನವನ್ನು ಸಲೀ ಸಾಗಿ ಪೂರೈಸಬಹುದು. ನೈಸರ್ಗಿಕ ಸಂಪತ್ತಿಯ ಉಪಯೋಗವನ್ನು ಮಾಡಿಕೊಳ್ಳಬೇಕು ಈ ಸಂಪತ್ತಿಯೇನು ಕಡಮೆಯಿರುವದಿಲ್ಲ. ಇದರಿಂದ ಮಾನವನ ಹಿತವು ಬೇಕಾದ ಹಾಗೆ ಆಗುವಂತಿಂದೆ. ನಿಮ್ಮ ಸಲುವಾಗಿ ಪೃಥ್ವಿ, ಆಪ್, ತೇಜಗಳು ಕೆಲಸವನ್ನು ಕೊಡುವಂತೆ ಯೋಜನೆಗಳನ್ನು ಕೈಕೊಳ್ಳಬೇಕು. ಪೃಥ್ವಿಯ ಹೊಟ್ಟೆಯಲ್ಲಿ ಎಣ್ಣೆ, ದ್ರವ್ಯಗಳ ( ಧಾತುಗಳ ) ರಾಶಿಯೇ ಹುದುಗಿಕೊಂಡಿದೆ. ಈ ಸಂಪತ್ತಿಯನ್ನು ಕೈವಶಪಡಿಸಿಕೊಳ್ಳ ಬೇಕು. ಈ ಅಪರಂಪಾರ ಸಮುದ್ರರಾಜನ ಬಗ್ಗೆ ವಿಚಾರ ಮಾಡಬೇಕು. ಸಮುದ್ರದ ತೆರೆಗಳ ಕಡೆಗೆ ನೋಡಿದರೆ ಎಂಥ ಅದ್ಭುತ ಶಕ್ತಿಯು ತುಂಬಿ ಕೊಂಡಿದೆಯೆಂಬ ಕಲ್ಪನೆ ನಿಮಗಿಲ್ಲದಾಗಿದೆ. ಅದರ ಉಪಯೋಗವನ್ನೂ ಯಾವ ರೀತಿಯಿಂದ ತೆಗೆದುಕೊಳ್ಳಲು ಸಾಧ್ಯವಿದೆ ಎಂಬುದರ ವಿಚಾರ ಮಾಡಬೇಕು " ಎಂದು ವೊದಲಾಗಿ ಗಾವೆನ್‌ನು ತನ್ನ ಮನದಲ್ಲಿಯ ಮಾತು ಗಳನ್ನು ವಿವರಿಸಿದನು.

" ನೀನು ಕಲ್ಪನಾತರಂಗಗಳ ಮೇಲೆ ತೇಲಾಡುತ್ತಿರುವಿ. "

" ಛೇ, ಎಂದಿಗೂ ಇಲ್ಲ. ನಾನನ್ನುವ ಮಾತುಗಳು ನಿಜವಿವೆ. ಅದ ರಲ್ಲೇನೂ ಸಂಶಯವಿಲ್ಲ. ಇನ್ನೊಂದು ಮಾತು ಸ್ತ್ರೀಯರ ಬಗ್ಗೆ ನೀವು ಏನು ಮಾಡಬೇಕೆನ್ನುವಿರಿ? "

" ಇರಲಿ ಬಿಡು. ಅವರ ಬಗ್ಗೆ ವಿಚಾರ ಮಾಡುವ ಕಾರಣವಿಲ್ಲ. ಪುರುಷರ ಸೇವೆಯಲ್ಲಿ ಅವರು ಸುಖವಾಗಿರುವರು."

" ಅವರು ಸುಖಿಯಾಗಿರುವದಿಲ್ಲ. ಪುರುಷರು ಸ್ತ್ರೀಯರ ಆಳುಗಳಾಗಬೇಕು."

" ಅದೇನೆನ್ನುವಿ? ಗಂಡಸು ಹೆಂಗಸರ ಆಳೇ? ಅಶಕ್ಯ, ಅಸಂಭಾವ್ಯವಾದ ಮಾತು. ಈಗ ಮನುಷ್ಯನು ರಾಜನಾಗುಳಿಯುವ ಒಂದೇ ಸ್ಥಾನ ಉಳಿದಿದೆ. ಆ ಸ್ಥಾನವೆಂದರೆ 'ಮನೆ' ಮಾತ್ರ. ಮನೆಯ ರಾಜನೆಂದರೆ ಪುರುಷನು."

" ಇರಬಹುದು. ಸ್ತ್ರೀಯು ಅಂಥವನ ರಾಣಿಯಾಗಬೇಕು. ಇಬ್ಬರಿಗೂ ಸಮಾನ ಹಕ್ಕುಗಳಿರಬೇಕು."

" ಸಮಾನತೆಯೇ! ಈ ಮಾತು ಕನಸಿನಲ್ಲಾದರೂ ಶಕ್ಯವಾದೀತೆಂದು ನಿನಗೆ ತೋರುವದೋ? ಇವೆರಡೂ ಪ್ರಾಣಿಗಳು ತೀರ ಭಿನ್ನಪ್ರಕಾರದ್ದಿವೆ."

" ಅವರು ಭಿನ್ನರಿರುವರೆಂಬ ಮಾತನ್ನು ನಾನೂ ಒಪ್ಪುತ್ತೇನೆ. ಆದರೆ ಸಮಾನತೆಗೆ ಇರುವ ಅಡೆತಡೆಗಳೇನು? "

" ಹಾಗಾದರೆ ಮಕ್ಕಳ ಗತಿಯೇನು? ಯಾರ ಕಡೆಗೆ ವಹಿಸಬೇಕು? "

" ಮೊದಲು ಜನ್ಮವಿತ್ತಂಥ ತಾಯಿ-ತಂದೆಗಳ ಕಡೆಗೆ. ನಂತರ ಶಿಕ್ಷಣವನ್ನು ಕೊಡುವ ಗುರುವಿನ ಕಡೆಗೆ. ನಂತರ ಅವರು ಹುಟ್ಟಿದ ಊರಿನ ಕಡೆಗೆ. ಮುಂದೆ ಮಾತೃಭೂಮಿಯ ಕಡೆಗೆ ಒಪ್ಪಿಸಬೇಕು. ಕೊನೆಗೆ ಪೂರ್ವಜರು ಇದ್ದಂತೆ ಮಾನವಕುಲದ ಕಡೆಗೆ ಮಗುಗಳನ್ನು ಕೊಟ್ಟುಬಿಡಬೇಕು."

" ನೀನು ದೇವರ ವಿಷಯವಾಗಿ ಏನೂ ಮಾತಾಡಲೇ ಇಲ್ಲವಲ್ಲ! "

" ತಾಯಿ, ತಂದೆ, ಗುರು, ಪಟ್ಟಣ, ದೇಶ, ಮಾನವಕುಲಗಳೆಲ್ಲವೂ ಆ ಪರಮೇಶ್ವರನ ಸ್ವರೂಪವೇ ಆಗಿರುವವು. ಇವೆಲ್ಲವೂ ಪರಮೇಶ್ವರನ ಕಡೆಗೆ ಹೋಗುವ ಮೆಟ್ಟಲುಗಳೇ ಆಗಿವೆ."

ಸಿಮೋರೆಡಿನ್‌ನು ಈ ಮಾತು ಕೇಳಿ ಮರು ಮಾತನಾಡಲೇ ಇಲ್ಲ.

" ಮನುಷ್ಯನು ಯಾವಾಗ ಈ ಸೋಪಾನಪರಂಪರೆಯ ಕೊನೆಯ ಮೆಟ್ಟಲನ್ನು ಏರುತ್ತಾನೋ ಆಗ ಅವನು ಈಶ್ವರ ಸನ್ನಿಧಿಗೇ ಹೋಗು

ತ್ತಾನೆ. ಸ್ವರ್ಗದ್ವಾರವು ತೆರೆಯಲ್ಪಡುತ್ತದೆ. ಮನುಷ್ಯನು ಒಳಗೆ ಹೋಗು ವದೊಂದೇ ಉಳಿಯುತ್ತದೆ ”

“ ಗಾವೆನ್, ಸಾಕು ನಿನ್ನ ಈ ಮನೋರಾಜ್ಯದಲ್ಲಿಯ ಕಲ್ಪನಾ ವಿಲಾಸಗಳು! ಭೂಮಿಗಿಳಿದು ಬಾ. ಯಾವ ಸಂಗತಿಗಳು ಮಾಡಲು ಸಾಧ್ಯವೋ ಅಂಥವುಗಳ ಬಗ್ಗೆ ಮಾತಾಡು. ”

“ ಯಾವಾಗಲೂ ಮನುಷ್ಯನ ಉನ್ನತಿಯಾಗುತ್ತಿರಲೇಬೇಕೆಂದು ನನಗೆನಿಸುತ್ತದೆ. ಈಶ್ವರನ ಇಚ್ಛೆಯು ಮನುಷ್ಯನು ಹಿಂದುಳಿಯಬೇಕೆಂದಿದ್ದರೆ ಅವನು ಮನುಷ್ಯನ ತಲೆಯ ಹಿಮ್ಮಗ್ಗಲು ಕಣ್ಣುಗಳನ್ನು ಹಚ್ಚ ಬಹುದಾಗಿತ್ತು. ನಮ್ಮ ದೃಷ್ಟಿ ಪ್ರಭಾತಕಾಲದ ಕಡೆಗೂ, ಆ ಕಾಲದಲ್ಲಿ ವಿಕಸಿತವಾಗುವ ವಸ್ತುವಿನ ಕಡೆಗೂ ಸದಾ ಹರಿಯುತ್ತಿರಬೇಕು ನಶಿಸುವ ಪ್ರತಿಯೊಂದು ವಸ್ತುವು ಹೊಸ ವಸ್ತುವಿನಲ್ಲಿ ಚೇತನೆಯನ್ನುಂಟು ಮಾಡುತ್ತದೆ. ಬೀಳಲಾರದ ಹಳೆಮರವೆಂದರೆ ಹುಟ್ಟುವ ಹೊಸ ಮರಕ್ಕೆ ಆಹ್ವಾನಿಸಿದಂತಿದೆ. ಪ್ರತಿಯೊಂದು ಯುಗವು ತನ್ನ ಕೆಲಸವನ್ನು ಮಾಡ ಲೇಬೇಕು. ಇಂದು ನಾವು ಕೇವಲ ನಾಗರಿಕರಂತೆ ಕೆಲಸ ಮಾಡುತ್ತಿ ದ್ದರೂ ನಾಳೆ ಮಾನವ ಜಾತಿಯು ಸಲುವಾಗಿ ಕೆಲಸ ಮಾಡುವ ಪ್ರಸಂಗ ಬಂದೇ ಬರುವದು. ಇಂದು ಅಧಿಕಾರದ ಪ್ರಶ್ನೆಯಿದ್ದರೂ ನಾಳೆ ಕರ್ತವ್ಯದ ಕರೆಯು ಅನಿವಾರ್ಯವಾಗಬಹುದು. ಅಧಿಕಾರವೂ, ಕರ್ತವ್ಯವೂ ಎಂಬ ಶಬ್ದಗಳು ಮೂಲತಃ ಒಂದೇ ಆಗಿರುವವು. ನಾವು ಯಾವ ಕರ್ತವ್ಯವನ್ನೂ ಮಾಡದೆ ಹಾಗೆಯೇ ಹೋಗಲು ಜನ್ಮವೆತ್ತಿರುವದಿಲ್ಲ. ನಮ್ಮನ್ನು ಜನ್ಮಕ್ಕೆ ಹಾಕುವಾಗ ದೇವರು ಒಂದು ತರದ ಋಣವನ್ನು ನಮ್ಮ ಮೇಲೆ ಹೇರಿಯೇ ಕಳಿಸಿದ್ದಾನೆ. ಅಧಿಕಾರವು ಅಂತರ್ಗತ ಕರ್ತವ್ಯವು; ಕರ್ತವ್ಯವೆಂದರೆ ದೊರಕಿಸಿದ ಜನ್ಮಸಿದ್ಧ ಹಕ್ಕು ” ಎಂದು ಗಾವೆನ್‌ನು ಶಕ್ಯಾಶಕ್ಯತೆಗಳನ್ನು ತೂಗಿ ನೋಡಿ ಮಾತನಾಡಿದನು.

ಗಾವೆನ್‌ನು ಲೋಕೋತ್ತರ ಪುರುಷನೊಬ್ಬನಂತೆ ಮಾತನಾಡು ತ್ತಿದ್ದನು. ಇಂದು ಗುರು-ಶಿಷ್ಯರು ಅದಲುಬದಲಾಗಿದ್ದರು. ಶಿಷ್ಯನು ಗುರು ಸ್ಥಾನವನ್ನು ಆಕ್ರಮಿಸಿದ್ದನು.

" ನೀನು ಅಳ್ಳ ಹುರದಂತೆ ಮಾತಾಡುತ್ತಿರುವಿ. "

" ನನ್ನ ಕಾಲವು ಅತ್ಯಲ್ಪ ಉಳಿದುದರಿಂದ ಹಾಗೆ ಮಾತನಾಡುತ್ತಿರಬೇಕು. ನನ್ನ ಮತ್ತು ನಿಮ್ಮ ಧ್ಯೈಯಗಳಲ್ಲಿ ಅಂತರವು ಎಷ್ಟಿದೆಂಬದನ್ನು ಅವಲೋಕಿಸಬೇಕು. ನಿಮಗೆ ಸೈನ್ಯವಿರುವದು. ತೀರ ಅವಶ್ಯವೆನಿಸುತ್ತದೆ. ನನಗೆ ಶಾಲೆಗಳು ತೀರ ಅವಶ್ಯವೆನಿಸುತ್ತವೆ. ನಿಮಗೆ ಮನುಷ್ಯನು ಸೈನಿಕನೆಂದು ತೋರುತ್ತದೆ; ನನಗೆ ಮನುಷ್ಯನು ನಾಗರಿಕನೆಂದು ಕಾಣುತ್ತಾನೆ. ನೀವು ಪ್ರಜಾಪಕ್ಷವು ಶಸ್ತ್ರಾಸ್ತ್ರಗಳ ಮೇಲೆ ಅಧಿಷ್ಠಾನವಾಗಿದೆ ಎಂದೆನ್ನುವಿರಿ; ನನಗೆ ಪ್ರಜಾಪಕ್ಷದ ಅಧಿಷ್ಠಾನವು ಮನುಷ್ಯನ ಮನಸಿನ ಮೇಲೆ ಎಂದು ಎನಿಸುತ್ತದೆ" ಎಂದು ನಗುನಗುತ್ತ ಉತ್ತರವನ್ನಿತ್ತನು.

ಸಿಮೋರೆಡಿನ್‌ನು ತಲೆಯನ್ನು ಕೆಳಗೆ ಹಾಕಿ " ಇಂಥ ಪ್ರಕಾರದ ರಾಜ್ಯಸ್ಥಾಪನೆಯಾಗುವ ವರೆಗೆ ನಿಸು ಏನು ಮಾಡಬೇಕೆನ್ನುತ್ತೀ " ಎಂದು ಗಾವೆನ್‌ನನ್ನು ವಿಚಾರಿಸಿದನು.

" ಹೇಗಿರುವೆನೋ ಹಾಗೆಯೇ ಇರಬಯಸುತ್ತೇನೆ. "

" ಅಂದಮೇಲೆ ಸದ್ಯದ ಚಟುವಟಿಕೆಗಳನ್ನು ಮರೆತು ಬಿಡಲು ಸಿದ್ಧನಿರುವಿಯಾ ? "

" ಓಹೋ, ಸಿದ್ಧನಿರುತ್ತೇನೆ. "

" ಯಾಕೆ ? "

" ಯಾಕೆಂದರೆ ಈಗ ಬಿರುಗಾಳಿಯೆದ್ದಿದೆ. ಈ ಬಿರುಗಾಳಿಯ ಆಘಾತಕ್ಕೆ ಹೆಮ್ಮರವೊಂದು ಬಿದ್ದರೆ ಅಡವಿಯಲ್ಲಿ ಎಷ್ಟೋ ಬಯಲು ಬಯಲಾಗುವುದು. ಸುಧಾರಣೆಯ ರೋಗದ ಬೀಜಗಳಿರುತ್ತವೆ. ಅವು ಈ ಬಿರುಗಾಳಿಗೆ ನಷ್ಟವಾಗುತ್ತವೆ. ಈ ಗಾಳಿಯು ಎತ್ತಬಂದತ್ತ ಬೀಸುತ್ತದೆ. ಅದಕ್ಕೆ ಬಂಧನವಿಲ್ಲ. ಅಂದಮೇಲೆ ಅದು ಅಶಕ್ಯ ಕೋಟಿಯೊಳಗಿನ ಮಾತಾಗಿದೆ. ನಾವು ಈ ಬಿರುಗಾಳಿಗೆ ಬೆದರುವ ಕಾರಣವಿಲ್ಲ. ನನಗೆ ಸದ ಸದ್ವಿವೇಕ ಬುದ್ಧಿಯ ಬೆಂಬಲವಿದ್ದುದರಿಂದ ಈ ಸಂಗತಿಯು ತೊಂದರೆಯನ್ನು ಹೇಗೆ ಕೊಟ್ಟೀತು ? ನಮಗೆ ಮಾರ್ಗದರ್ಶಕವಾಗಿ ಒಂದು ಶಕ್ತಿಯು ಇದೆ. ಆದರ ಘೋರಣೆಯಿಂದ ಜಗವೆಲ್ಲವೂ ಚಲಿಸುತ್ತದೆ. "

"ಅದು ಯಾವ ಶಕ್ತಿಯು ?"

ಗಾವೆರ್ನ್‌ನು ಬೊಟ್ಟುಮಾಡಿ ತೋರಿಸಿದನು. ಸಿವೋರೆಡಿನ್‌ನು ಅದರ ಕಡೆಗೆ ನೋಡತೊಡಗಿದನು. ನಕ್ಷತ್ರಗಣಗಳಿಂದ ಹೊಳೆಯುತ್ತಿದ್ದ ಆಕಾಶವು ಅವನ ಕಣ್ಣಿಗೆ ಗೋಚರವಾಯಿತು. ಇಬ್ಬರೂ ಕೆಲಹೊತ್ತು ಗಪ್ಪಚಿಪ್ಪಾದರು.

"ಸಮಾಜವು ನಿಸರ್ಗಕ್ಕಿಂತ ದೊಡ್ಡದಿದೆ. ಇದು ಶಕ್ಯವಿಲ್ಲೆಂದು ನನ್ನ ಅಭಿಪ್ರಾಯವಾಗಿದೆ. ಇದು ಕೇವಲ ಸ್ವಪ್ನವೆಂದು ನಾನು ತಿಳಿಯುತ್ತೇನೆ" ಎಂದು ಸಿವೋರೆಡಿನ್‌ನೆಂದನು.

"ಅದೇ ಅಂತಿಮ ಧ್ಯೇಯವಾಗಿವೆ. ಇಲ್ಲದಿದ್ದರೆ ಸಮಾಜಕ್ಕೇನು ಲಾಭವಾದಂತಾಯಿತು ? ಮನುಷ್ಯನು ಮೂಲ ಪ್ರಕೃತಿಯಲ್ಲಿಯೇ ಇರಬೇಕು. ಅಡವಿಯಲ್ಲಿರಬೇಕು; ಹುಂಬರಾಗಬೇಕು. ಬುದ್ಧಿಯುಕ್ತ ನರಕ ಲೋಕವು ಪಾಶವೀ ಸ್ವರ್ಗಕ್ಕಿಂತ ಶ್ರೇಷ್ಠವಾಗಿರುತ್ತದೆ. ನಾವು ಮಾನವ ಸಮಾಜದಲ್ಲಿದ್ದೇವೆ. ಅದು ನಿಸರ್ಗಕ್ಕಿಂತಲೂ ಶ್ರೇಷ್ಠವಿದೆ. ನಿಸರ್ಗವನ್ನೇಕೆ ಅತಿಕ್ರಮಿಸಬೇಕು ? ಅತಿಕ್ರಮಿಸುವದೂ ಅಸಾಧ್ಯವಾದ ಮಾತು. ಇರಿವೆಯಂತೆ ಕೆಲಸ ಮಾಡಬೇಕು ಜೇನ್ನೊಣಗಳಂತೆ ಮಧು ಸಂಚಯವು ಮಾಡಬೇಕು. ಮಾನವನು ಬುದ್ಧಿವಂತ ಪ್ರಾಣಿಯಾದ್ದರಿಂದ ಆಲಸ್ಯದಿಂದ ಕಾಲಹರಣ ಮಾಡವೆ, ಬುದ್ಧಿಹೀನನಾಗಿ ಕಾರ್ಯದಲ್ಲಿ ತೊಡುಗುವದು ಎಷ್ಟೋ ಮೇಲು. ನಿಸರ್ಗಕ್ಕೆ ಪರಿಪೋಷಕವಾಗುವಂಥ ಕೆಲಸವನ್ನು ನಾವು ಮಾಡಿದ್ದಾದರೆ ಅದರಗಿಂತಲೂ ನಾವು ಹೆಚ್ಚು ದೊಡ್ಡವರಾದಂತಾಗುವದು. ಅದರಿಂದ ಅದನ್ನು ಬೆಳೆಯಿಸಿದಂತೆಯೇ ಆಗುವದು. ಜೇನ್ನೊಣ, ಇರಿವೆ ಮೊದಲಾದವುಗಳಲ್ಲಿರುವ ಕೊರತೆಯನ್ನು ಹೋಗಲಾಡಿಸುವ ಇಚ್ಛೆ ನನಗಿದೆ. ಇದಕ್ಕೆ ಸಹಕಾರಿಯಾಗುವಂತೆ ಕಲಾ, ಕೌಶಲ್ಯ, ಪ್ರತಿಭಾ, ಭಾವನಾ ಮೊದಲಾದವುಗಳ ಉಪಯೋಗ ಮಾಡಿಕೊಳ್ಳಬೇಕು ಮನುಷ್ಯನು ಶಾಶ್ವತವಾಗಿ ಅದರ ಗುಲಾಮನಾಗಿ ಬಾಳಬೇಕಾಗಿಲ್ಲ ಮನುಷ್ಯನ ಪ್ರತಿಯೊಂದು ಸಂಗತಿಯಲ್ಲಿ ಉನ್ನತಿಯಿರಬೇಕು ಅದರಲ್ಲಿ ಸುಧಾರಣೆಯ ಲಕ್ಷಣಗಳಿರಬೇಕು.

ಸ್ವಾತಂತ್ರ್ಯ, ಸಮತಾ, ಬಂಧುತ್ವಗಳಿಗೆ ಮನಸು, ಬುದ್ಧಿ, ಆತ್ಮಾ ಎಂದು ಕರೆಯುಬಯುಸುತ್ತೇನೆ. ಮಾನವಲೋಕದ ಭಾರವನ್ನಿಳಿಸುವದಕ್ಕಾಗಿ ನಾವು ಮನುಷ್ಯ ಜನ್ಮಕ್ಕೆ ಬಂದಿರುವದಿಲ್ಲ. ಉಚ್ಚ ಧ್ಯೇಯದತ್ತ ಸಾಗ ಬೇಕೆಂದು ನಮ್ಮ ನಿರ್ಮಾಣವಾಗಿದೆ. ಭೂಮಿಯ ಮೇಲೆ ಸರಿದಾಡುವ ಪ್ರಾಣಿ ಈ ಮನುಷ್ಯನಾಗಬಾರದು. ಈ ನರಪ್ರಾಣಿಯು ಹವೆಯಲ್ಲಿ ಹಾರಾಡಬೇಕೆಂದು ನನಗನಿಸುತ್ತದೆ—" ಎಂದೆನ್ನುತ್ತಿರುವಾಗ ಮಾತು ಮುಂದೆ ಹೊರಡದಾಯಿತು. ಅವನ ಕಣ್ಣುಗಳು ಹೊಳೆಯತೊಡಗಿದವು. ಅವನ ತುಟಿಯು ನಡುಗಹತ್ತಿತು

ಬಾಗಿಲು ತೆರವೇ ಇತ್ತು. ಹೊರಗಿನ ಸಪ್ಪಳವು ಒಳಗೆ ಕೇಳ ಹತ್ತಿತು. ತುತೂರಿಯ ಶಬ್ದ ಮೊಳಗಲಾರಂಭಿಸಿತು. ಸೈನಿಕರ ಚಟು ವಟಿಕೆಗಳ ಚಿನ್ಹುಗಳು ಕಾಣತೊಡಗಿದವು. ಕಿಲ್ಲೆಯ ಸಮೀಪದ ಎತ್ತರ ವಾದ ಕಟ್ಟೆಯ ಮೇಲೆ ಹಲಗೆಗಳು ಬಂದು ಬೀಳತೊಡಗಿದವು.

ಈ ಶಬ್ದಗಳನ್ನು ಕೇಳುತ್ತಿದ್ದಂತೆ ಸಿಮೋರೆಡಿನ್‌ನ ಮುಖದಲ್ಲಿ ಹುಚ್ಚ ಚ್ಚಾರ ಕಳೆಯು ಸುರಿಯುಹತ್ತಿತು. ಗಾವೆನ್‌ನಿಗೆ ಯಾವದೂ ಕೇಳಬರು ತ್ತಿದ್ದಿಲ್ಲ. ಅವನು ತನ್ನ ಸಮಾಧಿಯಲ್ಲಿ ಮಗ್ನನಾಗಿದ್ದನು. ಅವನ ಶ್ವಾಸೋ ಚ್ಛ್ವಸವು ನಿಲ್ಲತೊಡಗಿತ್ತು. ನಡುನಡುವೆ ಒಮ್ಮೆ ದೀರ್ಘಶ್ವಾಸ ಬಿಡು ತ್ತಿದ್ದನು.

ಮುಂಜಾವಿನ ಬೆಳಕು ಅವನ ಮುಖದ ಮೇಲೆ ಬೀಳಹತ್ತಿತು. ಹೀಗೆಯೇ ಕೆಲವೊಂದು ಸಮಯ ಕಳೆಯಿತು. ಅವನ ಕಡೆಗೆ ನೋಡುತ್ತ ಸಿಮೋರೆಡಿನ್‌ನು "ನೀನು ಯಾವ ವಿಚಾರವನ್ನು ಮಾಡುತ್ತಿರುತ್ತೀ?" ಎಂದು ವಿಚಾರಿಸಿದನು.

ಗಾವೆನ್‌ನು "ನಾನು ಭವಿಷ್ಯಕಾಲದ ವಿಚಾರ ಮಾಡುತ್ತಿದ್ದೇನೆ" ಎಂದನು. ಮತ್ತೆ ಅವನು ವಿಚಾರಗಳಲ್ಲಿ ತಲ್ಲೀನನಾದನು. ಸಿಮೋರೆಡಿನ್‌ನು ಅಲ್ಲಿಂದ ಎದ್ದನು. ಗಾವೆನ್‌ನ ಲಕ್ಷ್ಯವು ಅತ್ತ ಕಡೆಗೆ ಇರಲಿಲ್ಲ. ಸಿಮೋರೆ ಡಿನ್‌ನು ಗಾವೆನ್‌ನನ್ನು ನೋಡುತ್ತ ನೋಡುತ್ತ ಮೆಲ್ಲಮೆಲ್ಲನೆ ಹೊರ ಹೊರಟು ಹೋದನು.

## ೨೫.

ಸೂರ್ಯೋದಯವಾಯಿತು. ಅಲ್ಲಲ್ಲಿ ಬೆಳಕು ಬಿದ್ದು ಕತ್ತಲಲ್ಲಿ ಕಾಣಿಸದಿದ್ದ ವಸ್ತುಗಳು ಕಾಣತೊಡಗಿದವು. ಅವರಲ್ಲೊಂದು ಚಮತ್ಕಾರವಾದ ವಸ್ತುವೊಂದನ್ನು.......ನಿಲ್ಲಿಸಿದ್ದು ಕಂಡುಬಂದಿತು ಅದನ್ನು ರಾತ್ರಿಯೇ ಅಲ್ಲಿ ತಂದಿಡಲಾಗಿತ್ತು ಅದು ಕಣ್ಣಿಗೆ ಬಿದ್ದೊಡನೆ ಮನಸಿನಲ್ಲಿ ಹಲವಾರು ವಿಚಾರಗಳೇಳುತ್ತಿದ್ದವು. ಇದನ್ನು ಯಾಕೆ ಅಲ್ಲಿ ತಂದಿರಿಸಿರಬಹುದು? ಅದನ್ನು ನೋಡಿ ಮೈಮೇಲೆ ಮುಳ್ಳುಗಳೇಳುತ್ತಿದ್ದವು.

ಆ ಚಮತ್ಕಾರ ವಸ್ತುವೆಂದರೆ ಕುತ್ತಿಗೆಯನ್ನು ಕೊಯ್ಯುವ ಯಂತ್ರ. ಅದಕ್ಕೆ ಗಲ್ಲಿನ ಕಂಬವೆಂದು ಕರೆಯುವರು. ಅದು ಕಟ್ಟಿಗೆಯಿಂದ ಮಾಡಲ್ಪಟ್ಟು ಅದರ ಮೇಲೆ ತ್ರಿಕೋಣಾಕೃತಿಯು ಕಬ್ಬಿಣದಿಂದ ಮಾಡಲ್ಪಟ್ಟಿತ್ತು. ಅದು ಭೀತಿದಾಯಕವಾಗಿತ್ತು. ಅದರ ಎದುರಿನಲ್ಲಿಯೇ ತುಸು ಅಂತರದಲ್ಲಿ ಇನ್ನೊಂದು ರಾಕ್ಷಸಾಕೃತಿಯ ವಸ್ತುವಾದ ಲಾಟೋರ ಕಿಲ್ಲೆಯು ನಿಂತಿತ್ತು. ಈ ಕಿಲ್ಲೆಯು ೧೫೦೦ ವರುಷದ ಇತಿಹಾಸವನ್ನು ಕಂಡುದಾಗಿತ್ತು. ಆದರೆ ೧೭೮೯ನೇ ಇಸವಿಯಲ್ಲಿ ಕಂಡ ರೀತಿಯನ್ನು ಅದು ೧೫೦೦ ವರುಷಗಳಲ್ಲಿ ಕಂಡಿರಲಿಲ್ಲ. ಆ ಕಿಲ್ಲೆಯು ರಾಜಸತ್ತೆಯ ಪ್ರತೀಕವಾಗಿತ್ತು. ಈ ಯಂತ್ರವು ರಾಜ್ಯಕ್ರಾಂತಿಯ ದ್ಯೋತಕವಾಗಿತ್ತು ಹೀಗೆ ಆ ಎರಡೂ ವಸ್ತುಗಳಲ್ಲಿ ಸಮಾನತೆಯಿತ್ತು.

ಒಂದು ಕಡೆಗೆ ಸಾಲಗಾರನೂ, ಗುಲಾಮನೂ, ಸೇವಕನೂ, ಒಕ್ಕಲಿಗನೂ ಇನ್ನೊಂದು ಕಡೆಗೆ ಸಾಹುಕಾರನೂ, ಸರದಾರನೂ, ಯಜಮಾನನೂ ಅಲ್ಲದೆ ಕಾನೂನು, ವ್ಯವಸ್ಥೆ, ರಾಜದಂಡ, ರಾಜಮುಕುಟ, ರಾಜಸಿಂಹಾಸನ, ರಾಜ್ಯಾಧಿಕಾರ ಮೊದಲಾದವುಗಳು ಅಸ್ತಿತ್ವದಲ್ಲಿದ್ದವು.

ಈ ಕಿಲ್ಲೆಯು ೧೫೦೦ ವಮುಷಗಳಿಂದ ಹಾಳುಬಿದ್ದ ಈ ಭೂಮಿಯಲ್ಲಿ ಹಾಗೆಯೇ ನಿಂತಿದೆ. ಸುತ್ತು ಕಡೆಗೆಲ್ಲ ಅದರ, ಅದರ ಯಜಮಾನನ, ಅದರ ಶೌರ್ಯದ, ಅಧಿಕಾರದ, ಅಭೇದ್ಯತೆಯ, ಸೈನಿಕರ, ಮದ್ದುಗುಂಡುಗಳ, ಅನೇಕಾನೇಕ ಕೃತ್ಯಗಳ ಕೀರ್ತಿಯು ಹಬ್ಬಿಕೊಂಡಿದೆ.

ಅಲ್ಲಿಯ ಮನಕರಗುವ ಅನನ್ವಿತ ಅತ್ಯಾಚಾರಗಳ, ರಕ್ತಪಾತದ ಶೋಚನೀಯ ಸಂಗತಿಗಳು ಎಲ್ಲರಿಗೂ ಕಂಠಪಾಠವಾಗಿದ್ದವು. ಈ ಭಾಗದಲ್ಲಿ ಈ ಕಿಲ್ಲೆಯೊಂದನ್ನು ಬಿಟ್ಟು ಇನ್ನೊಂದು ಇಂಥ ಭೀಕರ ವಸ್ತುವಿರಲಿಲ್ಲ. ಇಂದು ಮಾತ್ರ ಅಲ್ಲಿ ಇದಕ್ಕೂ ಭೀಕರತಮವಾದ ವಸ್ತುವೊಂದು ಅದರ ಮುಂದೆ ಬಂದು ನಿಂತುಕೊಂಡಿದೆ. ನಿರ್ಜೀವ ಪದಾರ್ಥಗಳೂ ಒಮ್ಮೊಮ್ಮೆ ಸಜೀವ ಪದಾರ್ಥಗಳಂತೆ ನೋಡುತ್ತಿರುತ್ತವೆ. ಮೂರ್ತಿಗಳು ನೋಡುತ್ತವೆ. ಕಿಲ್ಲೆಯು ಸಂರಕ್ಷಿಸುತ್ತದೆ. ದೊಡ್ಡ ಕಟ್ಟಡಗಳು ವಿಚಾರಮಗ್ನವಾಗಿರುತ್ತವೆ. ಲಾಟೋರ ಕಿಲ್ಲೆಯು ಈ ಯಂತ್ರದ ಅಭ್ಯಾಸವನ್ನು ಮಾಡುತ್ತಿರುವಂತೆ ಕಾಣುತ್ತಿತ್ತು. 'ಇವರಾರು ಬಂದವರು' ಎಂಬ ಪ್ರಶ್ನೆಯನ್ನು ತನ್ನಷ್ಟಕ್ಕೆ ತಾನೇ ಮಾಡಿಕೊಂಡು ಆ ಬಗ್ಗೆ ವಿಚಾರಮಾಡುತ್ತಲಿತ್ತು. ಭೂಮಿಯನ್ನೊಡೆದು ಈ ವಸ್ತುವು ಬಂದಿರಬೇಕೆಂಬಂತೆ ಆ ಕಿಲ್ಲೆಗೆ ಎನಿಸುತ್ತಿರಬೇಕೋ ಏನೋ ಯಾರಿಗೆ ಗೊತ್ತು !

ಈ ದುಷ್ಟ ಭೂಮಿಯಲ್ಲಿ ವಿಷಾರಿ ಮರಗಳು ಹುಟ್ಟಿದವು ಈ ಭೂಮಿಯಲ್ಲಿ ಸಾವಿರಾರು ಜನರ ರಕ್ತ, ಕಣ್ಣೀರು, ಬೆವರು ಬಿದ್ದಿತ್ತು. ಈ ಸ್ಥಳದಲ್ಲಿ ಎಷ್ಟೊಂದು ಖಂದಕಗಳು, ತೆಗ್ಗು-ತೆವರುಗಳು ಕಟ್ಟಲ್ಪಟ್ಟಿರುವವೆಂಬ ಲೆಕ್ಕವೇ ಹತ್ತಲಾರದು. ಇಲ್ಲಿ ಅನೇಕಾನೇಕ ವ್ಯಕ್ತಿಗಳು ಒತ್ತಾಯವನ್ನು ಸಹಿಸಿಕೊಂಡು ತಮ್ಮ ಜೀವಗಳನ್ನು ಬಲಿಗೊಟ್ಟಿರುವರು. ಇಂಥ ಈ ಸ್ಥಳದಲ್ಲಿ ಸಾವಿರಾರು ತರದ ವಿಷಬೀಜಗಳು ಬಿತ್ತಲ್ಪಟ್ಟವೆ. ಇಂಥ ಬೀಜಗಳಿಂದ ಹುಟ್ಟಿದ ವೃಕ್ಷದ ಫಲಗಳೆಂದರೆ ನಿರ್ದಯದ ಹತ್ಯಾಕಾಂಡವೆ; ಅನನ್ವಿತ ಅತ್ಯಾಚಾರಗಳೇ. ಅಂಥ ಅದ್ಭುತವಾದ ಕಿಲ್ಲೆಯು ಸರ್ವಶಕ್ತಿಮಾನವಾಗಿದ್ದರೂ ನವೋದಯದ ಶಕ್ತಿಯ ಮುಂದೆ ಅದರ ಆಟವೇನೂ ಸಾಗುವಂತಿರಲಿಲ್ಲ. ಅಪರಾಧಿಗಳ ಇತಿಹಾಸವು ನ್ಯಾಯದ ಇತಿಹಾಸವನ್ನು ಅಭ್ಯಸಿಸಬೇಕಾಯಿತು. ಗತಕಾಲದ ಅತ್ಯಾಚಾರಗಳು ವರ್ತಮಾನಕಾಲದ ಅತ್ಯಾಚಾರಗಳೊಡನೆ ತೂಗಿ ನೋಡಲಾರಂಭಿಸಿದವು. ಹಳೆಯ ಕಿಲ್ಲೆ, ಹಳೆಯ ಸೆರೆಮನೆ, ಎಲ್ಲ ಹಳೆಯ ಪ್ರಕಾರಗಳು ಈ ಭಯಂಕರ ಹೊಸ ವಸ್ತುವಿನ ಕಡೆಗೆ ನೋಡುತ್ತಿದ್ದವು. ಇಂದಿನ ವಸ್ತು

ಸ್ಥಿಯ ಮುಂದೆ ಹಿಂದಿನದೆಲ್ಲವೂ ಮಸಣಿಸಿ ಹೋಗುತ್ತಿತ್ತು. ನಷ್ಟ ಹೊಂದುವ ಒತ್ತಾಯದ ಅಧಿಕಾರವು ಸೇಡನ್ನು ತೀರಿಸಿಕೊಳ್ಳುವ ಈ ಹೊಸ ವಸ್ತುವನ್ನು ತೆರೆಗಣ್ಣುಗಳಿಂದ ನೋಡುತ್ತಲಿತ್ತು.

ನಿಸರ್ಗವು ನಿಷ್ಠುರವಿರುತ್ತದೆ. ತನ್ನ ಕಣ್ಣಿಗೆ ಕಾಣುವ ಮಾನವೀ ಕ್ರೌರ್ಯವನ್ನು ಕಂಡು ಅದು ತನ್ನ ಸುಗಂಧ, ಸಂಗೀತ, ಆನಂದ, ಅಥವಾ ಪ್ರಕಾಶವನ್ನು ನಿಲ್ಲಿಸುವದಿಲ್ಲ ಒಂದು ಕಡೆಯಲ್ಲಿ ಕಾಣುವ ದಿವ್ಯ ಮನೋಹರತೆಯನ್ನು ಇನ್ನೊಂದು ಕಡೆಯಲ್ಲಿ ತೋರುವ ಸಾಮಾಜಿಕ ಭೀಷಣತೆಯನ್ನು ತೋರಿಸಿ ನಿಸರ್ಗವು ಮನುಷ್ಯರನ್ನು ಗೊಂದಲಗೆಡಿಸುವದು. ಹಿಂಸೆ, ಸೇಡು, ಹುಂಬತನ ಮೊದಲಾದವುಗಳು ನಡೆದ ಕಾಲಕ್ಕೆ ಮನುಷ್ಯನಿಗೆ ತನ್ನ ಕಡೆಗೆ ಪವಿತ್ರ ವಸ್ತುಗಳು ನೋಡುತ್ತಿರುವವೆಂಬ ಎಚ್ಚರಿಕೆಯನ್ನು ನಿಸರ್ಗವು ಸೂಚಿಸುತ್ತಿರುತ್ತದೆ. ಆಕಾಶದ ಅನುಪಮವಾದ ಗಂಭೀರತೆಯೂ, ಪ್ರಕೃತಿಯ ಸರ್ವವ್ಯಾಪಿನಿ ಶಕ್ತಿಯೂ ಪ್ರತಿಯೊಂದು ಕ್ಷಣಕ್ಕೆ ಮನುಷ್ಯನನ್ನು ಹೀಯಾಳಿಸುತ್ತಲೇ ಇರುತ್ತವೆ. ಸದಾವಕಾಲದ ಸೌಂದರ್ಯದ ಝಗಾಯಮಾನವಾದ ಪ್ರಕಾಶದಲ್ಲಿ ಮಾನವೀ ಕಾನೂನುಗಳ ಹೀನಸ್ವರೂಪವು ನಗ್ನಾವಸ್ಥೆಯಲ್ಲಿ ತೋರಿಸಲ್ಪಡುತ್ತಿರುತ್ತದೆ.

ಮನುಷ್ಯನು ನಾಶಮಾಡುತ್ತಾನೆ, ನರಹತ್ಯೆ ಮಾಡುತ್ತಾನೆ, ದೇಶವನ್ನು ಹಾಳು ಮಾಡುತ್ತಾನೆ, ಆದರೆ ನಿಸರ್ಗವು ಸಾಮಾನ್ಯಾವಸ್ಥೆಯಲ್ಲಿಯೇ ಇರುತ್ತದೆ. ವಸಂತಋತುವು, ಸರೋವರದೊಳಗಿನ ಕಮಲಗಳು, ಅಥವಾ ಆಕಾಶದೊಳಗಿನ ನಕ್ಷತ್ರಗಳು ಎಂದಿಗೂ ಅಚಲವಾಗೇ ಇರುವವು. ಅವುಗಳ ಮೇಲೆ ಮಾನವೀ ಕೃತಿಗಳ ಪರಿಣಾಮವು ಎಂದಿಗೂ, ಏನೂ ಆಗುವದೇ ಇಲ್ಲ

ಇಂದಿನಂಥ ಆಲ್ಹಾದದಾಯಕವಾದ ಮುಂಜಾವು ಹಿಂದೆಂದೂ ಆಗಿರಲಿಲ್ಲ. ಮಂದಮಾರುತನು ಹಚ್ಚಗಿನ ಹುಲ್ಲನ್ನು ಮೆಲ್ಲಮೆಲ್ಲನೆ ತೂಗುತ್ತಿದ್ದನು. ಗಿಡಗಂಟಿಗಳ ಟೊಂಗೆಗಳಿಂದ ಹೊಗೆಮಂಜು ಪಸರಿಸತೊಡಗಿತ್ತು. ಸರವುಗಳ ಖಳಖಳ ಶ್ವಾಸೋಚ್ಛ್ವಾಸದಿಂದ ತುಂಬಿದ ಆ ಅರಣ್ಯವು ಪ್ರಭಾತಕಾಲದಲ್ಲಿ ಸುಗಂಧವಾಯುವನ್ನು ಬಿಡುತ್ತಿತ್ತು. ನಿರಭ್ರ ಆಕಾಶ,

ಬಿಳಿ ಮೋಡಗಳು, ಸ್ಫಟಿಕದಂತೆ ಹೊಳೆಯುವ ಪ್ರವಾಹಗಳು, ಮಖಮಲಿನಂಥ ಹುಲ್ಲು-ಮೊದಲಾದವುಗಳು ಶುದ್ಧ ಭಾವನೆಯಿಂದ ನಲಿದಾಡುತ್ತಿದ್ದವು. ಇದೇ ಭಾವನಾಮಯವಾದ ನಿಸರ್ಗದೇವತೆಯು ಮಾನವನಿಗೆ ಪುರಾತನ ಕಾಲದಿಂದಲೂ ಶಿಕ್ಷಣವನ್ನು ಕೊಡುತ್ತಿರುತ್ತದೆ

ಇಂಥ ಎಲ್ಲ ರಮಣೀಯ ವಸ್ತುಗಳಲ್ಲಿ ಮಾನವನಿಗೆ ಕಲಂಕವನ್ನು ಹಚ್ಚುವ ಆ ಯಂತ್ರವೂ ಅಲ್ಲಿತ್ತು ಇಂಥಲ್ಲಿಯೇ ಆ ಕಿಲ್ಲೆಯೂ, ನರಬಲಿಯನ್ನು ತೆಗೆದುಕೊಳ್ಳುವ ಯಂತ್ರವೂ ಇದ್ದವು ಅದೇ ಅರಳಿ ಸುಗಂಧ ಬೀರುವ ಸೃಷ್ಟಿಯೂ, ಪ್ರಭಾತಕಾಲದ ಪ್ರಕಾಶದಿಂದ ಹೊಂಬಣ್ಣದಲ್ಲಿದ್ದಿದ ಆಕಾಶವೂ ಮನುಷ್ಯನನ್ನು "ನಾವೇನು ಮಾಡುತ್ತಿದ್ದೇವೆ ಮತ್ತು ನೀವೇನು ಮಾಡುತ್ತಿರುವಿರೆಂಬದನ್ನು ನೋಡು" ಎಂಬ ತರದ ಸೂಕ್ಷ್ಮ ನಿರೀಕ್ಷಣೆಯನ್ನು ಸೂರ್ಯಪ್ರಕಾಶವು ಮಾಡುತ್ತಿರುವಂತೆ ವಿಚಾರಿಸುತ್ತಲಿದ್ದಿತು.

ಈ ದೃಶ್ಯವನ್ನು ಕಣ್ಣಾರೆ ನೋಡಲು ಜನಸಮೂಹವು ಕಿಕ್ಕಿರಿದು ನೆರೆದಿತ್ತು. ಆ ವಿಶಾಲವಾದ ಮೈದಾನದಲ್ಲಿ ೪೦೦೦ ಸೈನಿಕರು ಯುದ್ಧದ ಉಡುಪನ್ನು ತೊಟ್ಟು ಶಿಸ್ತಿನಿಂದ ನಿಂತುಕೊಂಡಿದ್ದಾರೆ ಅವರು ಯಂತ್ರವನ್ನು ನಡುವೆ ಬಿಟ್ಟು ಸುತ್ತೂಕಡೆಗೂ ನಿಂತಿದ್ದರು. ಮದ್ದುಗುಂಡು ಹೊಡೆಯುವವನು ತೋಫಿನ ಹತ್ತಿರ ನಿಂತುಕೊಂಡು ಒಂದು ತೋಫನ್ನು ಹಾರಿಸಿದನು. ಅದರ ಗರ್ಜನೆಯು ಅರಣ್ಯವನ್ನೆಲ್ಲ ಭೇದಿಸಿಬಿಟ್ಟಿತು.

ಖಂದಕಗಳೊಳಗಿಂದ ಮಾತ್ರ ಹೊಗೆಯು ಹೊರಡುತ್ತಿತ್ತು. ಅಗ್ನಿನಾರಾಯಣನ ಅವಶಿಷ್ಟವಾಗಿ ಅದೂ ಸ್ವಲ್ಪ ಸ್ವಲ್ಪ ಮಾತ್ರ ಉರಿಯುತ್ತಿದ್ದ ಹೊಗೆಯಾಗಿದ್ದಿತು. ಖಂದಕದ ಹತ್ತಿರವೇ ಈ ನರಹತ್ಯಾಯಂತ್ರವಿತ್ತು. ಅದರಾಚೆಗೆ ಒಂದು ಎತ್ತರವಾದ ಕಟ್ಟೆಯಿತ್ತು ಅಲ್ಲೊಂದು ಕುರ್ಚಿ. ಆ ಕುರ್ಚಿಯ ಹಿಂಬದಿಯಲ್ಲಿ ತಿರಂಗಿ ನಿಶಾನೆ ಫಡಫಡೆಂದು ಹಾರುತ್ತಲಿತ್ತು ಆ ಕುರ್ಚಿಯಲ್ಲಿ ಮನುಷ್ಯನೊಬ್ಬನು ಗಂಭೀರ ಮುದ್ರೆಯಿಂದ ಕುಳಿತಕೊಂಡಿದ್ದನು. ತನ್ನ ಎರಡೂ ಕೈಗಳನ್ನು ಎದೆಗವಚಿಕೊಂಡಿದ್ದನು. ಅವನೇ ಸಿಮೋರೆಡಿನ್‌ನು. ಅವನು ಸೈನಿಕ ವೇಷವನ್ನು ತೊಟ್ಟಿರಲಿಲ್ಲ. ಅವನ

ಟೊಂಕದಲ್ಲಿ ಕತ್ತಿಯು ನೇತಾಡುತ್ತಿತ್ತು. ಸಡಕ್ಕೆ ಸುತ್ತಿದ ಪಟ್ಟಿಯಲ್ಲಿ ಪಿಸ್ತೂಲಿತ್ತು. ಅವನು ಗಪ್ಪುಚಿಪ್ಪಾಗಿ ಕುಳಿತಿದ್ದನು. ಪ್ರೇಕ್ಷಕರೂ ತೆಪ್ಪಗಿದ್ದರು. ಸೈನಿಕರು ಸಶಸ್ತ್ರರಾಗಿ ಸಜ್ಜಾಗಿದ್ದರು. ಅವರೆಲ್ಲರೂ ಮೋರೆಗಳನ್ನು ಕೆಳಗೆ ಮಾಡಿದ್ದರು. ಅವರು ಒಬ್ಬರೊಬ್ಬರು ಭುಜಕ್ಕೆ ಭುಜ ಹಚ್ಚಿ ನಿಂತಿದ್ದರು; ಅವರ ಬಾಯಿಗಳು ಹೊಲಿದಂತಿದ್ದವು. ತಾವು ಗೆದ್ದ ಯುದ್ಧಗಳೆಷ್ಟು! ಎಷ್ಟೊಂದು ಒಕ್ಕಲಿಗರನ್ನು ಹಿಮ್ಮೆಟ್ಟಿಸಿದ್ದು! ಎಷ್ಟು ಪ್ರದೇಶವನ್ನು ಕೈವಶಪಡಿಸಿಕೊಂಡದ್ದು! ಎಂಬಿವೇ ಮೊದಲಾದ ವಿಚಾರಗಳನ್ನು ಮಾಡುತ್ತಿದ್ದರು. ಆದರೆ ಇವೆಲ್ಲವುಗಳ ಕೊನೆಯು ಪರಿಣಾಮವೇನಾಯಿತಲ್ಲಾ! ಎಂದು ಅವರಿಗೆ ಬಹಳೇ ಕೆಡುಕೆನಿಸಿತ್ತು. ನರಹತ್ಯಾಯಂತ್ರವನ್ನು ನಡೆಸುವ ಕೊಲೆಗಡಕರು ಮೇಲೆ ಹತ್ತಿ ಬರುತ್ತಿರುವ ದೃಶ್ಯವು ಅವರ ಕಣ್ಣಿಗೆ ಬಿತ್ತು.

ಒಮ್ಮೆಲೆ ನಗಾರಿಯು ಬಾರಿಸತೊಡಗಿತು. ಅಂಥ ಪ್ರಶಾಂತತೆಯು ಕದಡಿಬಿಟ್ಟಿತು. ಆ ನಗಾರಿಯ ವಾದ್ಯವು ಅಂತ್ಯಕ್ರಿಯೆಯ ಸಲುವಾಗಿ ಬಾರಿಸುತ್ತಿತ್ತು. ಸೈನಿಕರು ಪ್ರತ್ಯೇಕಿಸಲ್ಪಟ್ಟರು. ಅವರಲ್ಲಿಯ ಒಂದು ತಂಡವು ಆ ಗಲ್ಲಿನ ಕಂಬದ ಹತ್ತಿರಕ್ಕೆ ಹೋಯಿತು. ಇವರ ಮುಂದೆ ಡೊಳ್ಳು ಬಾರಿಸುವವರು, ಇವರ ಹಿಂದೆ ಬಂದೂಕು ಹಿಡಿದ ಸೈನಿಕರು, ಇವರ ಹಿಂದೆ ಹಿರಿದ ಕತ್ತಿಗಳನ್ನು ಹಿಡಿದುಕೊಂಡ ಕೆಲ ಸೈನಿಕರು ಇದ್ದುದಲ್ಲದೆ ಗಾವೆನ್‌ನು ಎಲ್ಲಕ್ಕೂ ಹಿಂದೆ ಇದ್ದನು. ಅವನು ಶಾಂತತೆಯಿಂದಲೂ ನಿರ್ಭಯದಿಂದಲೂ ಮುಂದೆ ಮುಂದೆ ಸಾಗಿದ್ದನು. ಅವನ ಕೈಕಾಲುಗಳಲ್ಲಿ ಬೇಡಿಗಳಿರಲಿಲ್ಲ. ಅವನ ಕೈಯಲ್ಲಿ ಕತ್ತಿಯೊಂದಿತ್ತು. ಅವನು ಸೈನಿಕರ ಉಡುಪಿನಲ್ಲಿದ್ದನು. ಅವನ ಹಿಂದೆಯೂ ಕೆಲವು ಸೈನಿಕರಿದ್ದರು.

ಅವನ ಮುಖದಲ್ಲಿ ಇನ್ನೂವರೆಗಾದರೂ ಸಾತ್ವಿಕ ತೇಜವು ಉಕ್ಕುತ್ತಿತ್ತು. " ನಾನು ಭವಿಷ್ಯತ್ಕಾಲದ ವಿಚಾರ ಮಾಡುತ್ತೇನೆ " ಎಂದು ಸಿಮೋರೆಡಿನ್‌ನಿಗೆ ಹೇಳುತ್ತಿರುವಾಗ ಹೇಗೆ ಅವನ ಮುಖಚರ್ಯೆಯು ಪ್ರಫುಲ್ಲಿತವಿತ್ತೋ ಹಾಗೆಯೇ ಈಗಲಾದರೂ ಇತ್ತು. ಅವನು ಗಲ್ಲಿನಕಂಬದ ಹತ್ತಿರ ಹೋದಾಗ ಅವನು ಮೊದಲು ಆ ಕಿಲ್ಲೆಯ ಬುರುಜಿನ ತುದಿಯು

ಕಡೆಗೆ ದೃಷ್ಟಿಯನ್ನು ಬೀರಿದನು. ಅವನ ಮನಸಿನಲ್ಲಿ ಈ ನರಹತ್ಯಾ ಯಂತ್ರದ ಬಗ್ಗೆ ಹೇಯವುಂಟಾಗಿತ್ತು. ಅವನು ತನ್ನ ಅಂತ್ಯಕಾಲಕ್ಕೆ ಸಿಮೋರೆಡಿನ್‌ನ ದರ್ಶನವಾಗದೆ ಇರಲಾರದೆಂದು ಭಾವಿಸಿಕೊಂಡಿದ್ದನು. ಗಾವೆನ್‌ನು ಸುತ್ತುಮುತ್ತಲೂ ತನ್ನ ದೃಷ್ಟಿಯನ್ನು ತಿರುಗಿಸಿದನು. ಆಗ ಅವನಿಗೆ ಕಟ್ಟೆಯ ಮೇಲಿರಿಸಿದ ಕುರ್ಚಿಯಲ್ಲಿ ಕುಳಿತ ಸಿಮೋರೆಡಿನ್‌ನ ಮುಖವು ಕಾಣಬಂದಿತು.

ಸಿಮೋರೆಡಿನ್ನನ ಮುಖದ ಮೇಲೆ ಭಯಪಟ್ಟ ಚಿನ್ಹಗಳು ಒಡೆದು ಕಾಣುತ್ತಿದ್ದವು. ಅವನು ನಿಸ್ತೇಜನಾಗಿದ್ದನು. ಅವನು ಗಾವೆನ್‌ನನ್ನು ನೋಡಿದಾಗ ಎಳ್ಳಷ್ಟೂ ಬೆದರಲಿಲ್ಲ. ಗಾವೆನ್‌ನು ಗಲ್ಲಿನ ಕಂಬವನ್ನು ಹತ್ತಿದನು. ಆಗ ಇಬ್ಬರೂ ಒಬ್ಬರನ್ನೊಬ್ಬರು ನೋಡಿದರು.

ಗಾವೆನ್‌ನ ಹಿಂದೊಬ್ಬ ಸೈನ್ಯಾಧಿಕಾರಿಯಿದ್ದನು. ಗಾವೆನ್‌ನು ತನ್ನ ಕತ್ತಿಯನ್ನು ಬಿಚ್ಚಿದನು. ಕೊರಳಿಗೆ ಸುತ್ತಿಕೊಂಡ ಬಟ್ಟೆಯನ್ನು ತೆಗೆದು ಕತ್ತಿಯನ್ನೂ, ಆ ಬಟ್ಟೆಯನ್ನೂ ಆ ಸೈನ್ಯಾಧಿಕಾರಿಯ ಕೈಗೆ ಕೊಟ್ಟನು.

ಆಗ ಅವನು ಬಲು ಸುಂದರನಾಗಿ ಕಾಣುತ್ತಿದ್ದನು. ಅವನ ಉಂಗುರು ಗೂದಲುಗಳು ಗಾಳಿಗೆ ಹಾರಾಡುತ್ತಿದ್ದವು. ಆಗಿನ ಕಾಲಕ್ಕೆ ಗಲ್ಲಿನ ಶಿಕ್ಷೆಯಾದವರ ಕೂದಲು ಬೋಳಿಸುವ ಪದ್ಧತಿಯಿರಲಿಲ್ಲ. ಅವನ ಕಣ್ಣಲ್ಲಿ ಶಾಂತಿಯ ಕಳೆಯು ಮಿನುಗುತ್ತಲಿತ್ತು. ಅವನು ಗಲ್ಲಿನ ಶಿಕ್ಷೆಯ ಸ್ಥಳದಲ್ಲಿ ನಿಶ್ಚಲ ವಿಚಾರಮಗ್ನಾವಸ್ಥೆಯಲ್ಲಿ ನಿಂತಿದ್ದನು. ಆ ಸ್ಥಳವು ಎತ್ತರವಾಗಿತ್ತು.

ಕೊಲೆಗಡಕರು ಕೂಡಲೆ ಹಗ್ಗವನ್ನು ಹಿಡಿದುಕೊಂಡು ಮುಂದೆ ಬಂದರು. ಇನ್ನು ಮುಂದೆ ಅವನ ಕುತ್ತಿಗೆಯ ಮೇಲೆ ಕೊಡಲಿಯ ಪೆಟ್ಟು ಬೀಳತಕ್ಕದ್ದೆಂಬ ಮಾತು ಆ ತರುಣ ಸೈನಿಕರಿಗೆ ತಿಳಿದಾಗ ಅವರ ಅಂತಃಕರಣದಲ್ಲಿ ಕಲಮಲವೆದ್ದು ಅವರು ಶಿಟ್ಟನ್ನು ಸಹಿಸದೆ "ದಯಾ, ದಯಾ" ಎಂದು ಭಯಂಕರ ಬೊಬ್ಬೆಯನ್ನು ಹೊಡೆದರು. ಎಷ್ಟೋ ಜನರು ಮೊಳಕಾಲೂರಿ ನಿಂತರು. ಕೆಲವರು ತಮ್ಮ ಬಂದೂಕುಗಳನ್ನು ಬೀಸಾಡಿ ಒಗೆದರು. ಸಿಮೋರೆಡಿನ್ನನ ಕಡೆಗೆ ದಯೆ ತೋರಿಸಬೇಕೆಂದು ಯಾಚಿಸಿ ಕೈಚಾಚಿದರು. ಅವರಲ್ಲೊಬ್ಬನಂತೂ "ಗಾವೆನ್ನನ ಬದಲು ನನ್ನನ್ನು

ತೆಗೆದುಕೊಂಡರೆ ನಾನು ಸಿದ್ಧನಿದ್ದೇನೆ." ಎಂದು ಕೂಗಿಕೊಂಡನು. ಎಲ್ಲರೂ 'ದಯೆ ದಯೆ' ಎಂದು ಒಂದೇ ಸವನೆ ಗಂಟಲು ಹರಿಯುವಂತೆ ಚೀರಿಕೊಳ್ಳತೊಡಗಿದರು. ಸಿಂಹಕ್ಕಾದರೂ ಸಹ ಈ ದಯಾಯಾಚನೆಯ ಕೂಗನ್ನು ಕೇಳಿ ದಯೆ ಬರಬಹುದಾಗಿತ್ತು; ಅಥವಾ ಗಾಬರಿಯಿಂದ ಹೌಹಾರಿ ಹೋಗಬಹುದಾಗಿತ್ತು. ಆ ಕೊಲೆಗಡಕರ ಕೈಗಳು ತರಗುಟ್ಟಿ ನಡುಗತೊಡಗಿದವು ಏನು ಮಾಡಬೇಕೆಂಬದೇ ಅವರಿಗೆ ಹೊಳೆಯಲಿಲ್ಲ. ಯಾವನೋ ಒಬ್ಬನು ಕಠೋರವಾಣಿಯಿಂದ ಎಲ್ಲರಿಗೂ ಕೇಳಿಸುವಂತೆ ದೊಡ್ಡ ಧ್ವನಿಯಲ್ಲಿ "ಕಾನೂನಿನಂತೆ ನಡೆದುಕೊಳ್ಳಿರಿ" ಎಂದು ಕೂಗಿದನು.

ಎಲ್ಲರಿಗೂ ಆ ಧ್ವನಿಯು ಯಾರದೆಂಬದು ತಿಳಿದುಬಂದಿತು. ಸಿಮೋರೆಡಿನ್‌ನ ಸ್ವರವಾಗಿತ್ತು. ಸೈನ್ಯಸಾಗರವೆಲ್ಲ ಗದಗುಟ್ಟಿ ನಡುಗತೊಡಗಿತು. ಈಗ ಮಾತ್ರ ಕೊಲೆಗಡಕರ ಕೈಗಳು ನಡುಗದಾದವು. ಅವರು ಹಗ್ಗವನ್ನು ತೆಗೆದುಕೊಂಡು ಬಂದರು.

"ನಿಲ್ಲಿರಿ" ಎಂದು ಗಾವೆನನು ಅವರಿಗೆ ಹೇಳಿ, ಅವನು ಸಿಮೋರೆಡಿನ್‌ನ ಹತ್ತಿರ ಹೋಗಿ, ಅವನಿಗೆ ಬಲಗೈಯಿಂದ ಮುಜುರೆ ಮಾಡಿ, ಅವನ ಅಪ್ಪಣೆಯನ್ನು ಪಡೆದುಕೊಂಡು ತಾನೇ ಹಗ್ಗವನ್ನು ಕಟ್ಟಿಕೊಳ್ಳತೊಡಗಿದನು. ಅವನು ಹಗ್ಗವನ್ನು ಕಟ್ಟಿಕೊಂಡ ಮೇಲೆ "ನಿಲ್ಲಿರಿ, ಇನ್ನೊಂದು ಸ್ವಲ್ಪ ನಿಲ್ಲಿರಿ" ಎಂದು ಹೇಳಿ "ಪ್ರಜಾಪಕ್ಷಕ್ಕೆ ಜಯವಾಗಲಿ" ಎಂದು ಜಯಘೋಷಮಾಡಿದನು.

ಅವನನ್ನು ಹಲಗೆಯ ಮೇಲೆ ನಿಲ್ಲಿಸಲಾಯಿತು. ಅವನ ತಲೆಯು ಯಂತ್ರದ ನಡುವೆ ಬಂದಿತು. ಕೊಲೆಗಡಕರು ಅವನ ಕೂದಲುಗಳನ್ನು ಸರಿಸಿದರು. ಆಮೇಲೆ ಅವರು ಯಂತ್ರವನ್ನು ತಿರುವಹತ್ತಿದರು. ಅದು ತಿರುಗಹತ್ತಿತು. ಮೊದ ಮೊದಲು ಮೆಲ್ಲಮೆಲ್ಲನೆ; ಆಮೇಲೆ ಜೋರಿನಿಂದ, ಕೊನೆಗೆ ಧಡಕ್ ಎಂದಿತು. ಅದೇ ಹೊತ್ತಿಗೆ ಸರಿಯಾಗಿ ಇನ್ನೊಂದು ಕಡೆಗೆ ಛಟ್ ಎಂಬ ಶಬ್ದವು ಕೇಳಬಂದಿತು. ಕೊಡಲಿಯ ಪೆಟ್ಟಿಗೆ ಪಿಸ್ತೂಲಿನ ಹೊಡೆತದ ಉತ್ತರವು ದೊರೆಯಿತು. ಸಿಮೋರೆಡಿನ್ನನು ನಡಪಟ್ಟಿಯ

ಲ್ಲಿಯ ಪಿಸ್ತೂಲು ಹೊರದೆಗೆದನು. ಗಾವೆನ್‌ನ ರುಂಡವು ಉರುಳಿಬಿದ್ದಂತೆ ಸಿಮೋರೆಡಿನ್ನನು ತನ್ನ ಎದೆಗೆ ಗುರಿಯಿಟ್ಟುಕೊಂಡು ಪಿಸ್ತೂಲನ್ನು ಹೊಡೆದು ಕೊಂಡನು. ಅವನ ಬಾಯಿಂದ ನೆತ್ತರದ ಕಾವಲಿಯೇ ಹರಿಯಿತು. ಧಡ ಕ್ಕನೆ ಹೊಡಮರಳಿ ಬಿದ್ದೇಬಿಟ್ಟನು. ಅವರಿಬ್ಬರ ಆತ್ಮಗಳೋ! ಒಮ್ಮೆಲೆ ಹಾರಿಹೋದವು. ಒಬ್ಬರ ಛಾಯೆಯು ಇನ್ನೊಬ್ಬರ ತೇಜದಲ್ಲಿ ವಿಲೀನ ವಾಗಿ ಹೋಯಿತು.

ಕತೆಯು ಮುಗಿಯಿತು. ಗಾವೆನ್-ಸಿಮೋರೆಡಿನ್ನರು ತಮ್ಮ **ಪ್ರಾಣಾಹುತಿ**ಯನ್ನು ವಿಶ್ವದ ಪಂಚ ಮಹಾಭೂತಾತ್ಮಕ ಕುಂಡದಲ್ಲಿ ಅರ್ಪಣಮಾಡಿ, ಶಾಶ್ವತ ಕಾಲದ ವರೆಗೆ ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತ ಸೃಷ್ಟಿಸತಿಯುಳ ತೊಡೆಯ ಮೇಲೆ ಮಲಗಿಬಿಟ್ಟರು.

ಲ್ಯಾಂಟ್‌ನೆಕ್! ಅವನದೇನಾಯಿತು? ಆದರೆ ಅವನದೇನಾಗಬೇ ಕಾಗಿತ್ತು! ಅವನು ಸಂಪೂರ್ಣವಾಗಿ ಪರಾಭವ ಹೊಂದಿದ್ದನು. ಅವನು ರಾಜಪಕ್ಷದ ಎಷ್ಟೇ ಪುರಸ್ಕಾರವನ್ನು ಮಾಡುತ್ತಿದ್ದರೂ ಅವನಿಗೆ ಯಾರೂ ಅನುಯಾಯಿಗಳು ಉಳಿಯದ್ದರಿಂದ ಗ್ರೇಟ್‌ಬ್ರಿಟನ್ನಕ್ಕೆ ತೆರಳಿರಬೇಕು. ಕೊನೆಗೆ ವೆಂಡಿಯ ಒಕ್ಕಲಿಗರ ಬಂಡು ಮುರಿಯಿತು. ಪ್ರಜಾಪಕ್ಷಕ್ಕೆ ಜಯವಾಯಿತು. ಅವರ ಅಧಿಕಾರವು ಈ ಭಾಗದಲ್ಲೆಲ್ಲ ಪೂರ್ಣವಾಗಿ ಪ್ರಸ್ಥಾಪಿಸಲ್ಪಟ್ಟಿತು. ಮಗುಗಳಿಗಾಗಿ ಹುಚ್ಚಳಾದ ಅವಳೋ! ತನ್ನ ಮಕ್ಕಳು ಸಹಿತ ದುಃಖಮಿಶ್ರಿತ ಆನಂದದಿಂದ ದಿವಸಗಳನ್ನು ನೂಕತೊಡ ಗಿದಳು.

—: ಸಮಾಪ್ತ :—